ಮನೆ ಮಂದಿಗೆಲ್ಲ ಮುದ ನೀಡುವ ಮಾಸಿಕ

ನಿಮಗೆ ಯಾವ ವೃತ್ತಿ ಸೂಕ್ತ?

# ಕಸ್ತೂರಿ

ಜೂನ್ ೧೯೯೫

ಶಿವಸೇನೆಯಲ್ಲೊಬ್ಬ ಮುಸ್ಲಿಂ ಕಾರ್ಯಕರ್ತ!



ಬೆಲೆ: ರೂ. ೬-೦೦

ಅಟಲ ಬಿಹಾರಿಯವರೊಂದಿಗೆ

## “ಎಲ್ಲ ಇದೆ, ಕೊಳ್ಳಬರುವವರಿಲ್ಲ!”



('ಕಸ್ತೂರಿ'ಯ ಸಂಗ್ರಹದಿಂದ)



# ಕಸ್ತೂರಿ

ಕನ್ನಡ ಡೈಜೆಸ್ಟ್

ಲೋಕ ಶಿಕ್ಷಣ ಟ್ರಸ್ಟಿನ
ಹೆಮ್ಮೆಯ ಕಾಣಿಕೆ

ವ್ಯವಸ್ಥಾಪಕ ಸಂಪಾದಕ:
ಕೆ. ಶಾಮರಾವ್

ಸಂಪಾದಕ:
ಎಸ್.ಎ. ಜೋಶಿ

ಸಹಸಂಪಾದಕ:
ವೆಂಕಟನಾರಾಯಣ

ನಿರ್ವಹಣೆ:
ಗೋಪಾಲ ವಾಜಪೇಯಿ
ಶ್ರೀಕಾಂತ ಮಳಗಿ

ಕಲೆ:
ಪಿ.ಆರ್. ಪಾಟೀಲ
ಎಂ.ಎಸ್. ಶಶಿಧರ

ಮುಖಪುಟ:
ಅಟಲ್‌ಬಿಹಾರಿ ವಾಜಪೇಯಿ
ವರ್ಣಚಿತ್ರ ಕೃಪೆ:
ದಿ ಟೆಲಿಗ್ರಾಫ್ ಮ್ಯಾಗ್‌ಜಿನ್

ಕಸ್ತೂರಿ ಕಾರ್ಯಾಲಯ,
ಕೊಪ್ಪೀಕರ ರಸ್ತೆ
ಹುಬ್ಬಳ್ಳಿ-೫೮೦ ೦೨೦.

## ಚಿಂತನ

'ಮೆಟ್ರಿಕ್ ಮುಗಿಯಿತು ಮುಂದೇನು?' ಎಂಬುದು ಕಿಶೋರರ ಸಮಸ್ಯೆ. ಹಾಗೆಯೆ ಹಡೆದವರ ಸಮಸ್ಯೆ ಕೂಡ. ವೈದ್ಯಕೀಯ ವೃತ್ತಿ, ಕೈಗಾರಿಕೋದ್ಯಮ, ಅಂಗಡಿ-ಮುಂಗಟ್ಟು ನಡೆಸುತ್ತಿರುವವರ ಮಕ್ಕಳಿಗೆ ಮುಂದಿನ ದಾರಿ ಸುಗಮವಾಗಿರುತ್ತದೆ. ಆದರೆ ಮಧ್ಯಮ ವರ್ಗದವರ ಮಕ್ಕಳಿಗೆ? ಅವರು ಹೇಗಾದರೂ ಮಾಡಿ ಮುಂದಿನ ಶಿಕ್ಷಣ ಪೂರೈಸಲೇಬೇಕು.

ಮುಂದೆ?

ಉದ್ಯೋಗವೆಂಬ ಮೃಗಜಲದ ಬೆನ್ನು ಹತ್ತುವುದು ಇದ್ದೇ ಇದೆ ಎಂಬ ವಾಸ್ತವ ಅವರ ಅರಿವಿಗೆ ಬಂದೀತಾದರೂ ಹ್ಯಾಗೆ? ಅಷ್ಟಲ್ಲದೆ ಕೇವಲ ಮೆಟ್ರಿಕ್ ಮುಗಿಸಿದರಾಯಿತೆ? ಯಾವುದಾದರೂ ಪದವಿಯೋ ಡಿಪ್ಲೋಮಾವೊ ಆಗಬೇಕು.

ಅದೆಲ್ಲ ನಿಜ.

ಆದರೆ ಮೃಗಜಲದೆಡೆಗೆ ದೃಷ್ಟಿನೆಟ್ಟು ಅದನ್ನು ಹಿಡಿಯಲು ಮುನ್ನುಗ್ಗುವವನಿಗೆ ದಾರಿಯಂತೂ ದುರ್ಗಮ. ಜತೆಗೆ ಒಳಹೊರಗಿನ ಬೇಗೆ. ಕುಂಟುತ್ತ ಎಡವುತ್ತ ಹೋಗಲೇಬೇಕು.

ಶಿಕ್ಷಣವೆಂಬುದೊಂದು ವ್ಯಾಪಾರವಾಗಿ ಬೆಳೆದುಬಿಟ್ಟಿರುವ ಈ ದಿನಗಳಲ್ಲಿ, ಕೂಸು ಕಣ್ದೆರೆದು 'ಅಮ್ಮಾ' ಎಂದು ಅತ್ತಾಗಲೇ ಅದರ ಹೆಸರನ್ನು ಒಂದು ಶಾಲೆಯಲ್ಲಿ ದಾಖಲು ಮಾಡಿ ಸೀಟು ಕಾದಿಡಬೇಕಾದ ಪ್ರಸಂಗ ಬಂದಿದೆ. ಇಂಥದರಲ್ಲಿ ಮುಂದಿನ ಶಿಕ್ಷಣದ ಬಗ್ಗೆ ಹೇಳುವುದೇ ಬೇಡ.

ಬದುಕುವುದಕ್ಕೊಂದು ವೃತ್ತಿಯಂತೂ ಬೇಕೇಬೇಕಲ್ಲ. ಹಾಗಾದರೆ ಯಾವ ವೃತ್ತಿ ಸೂಕ್ತ? ಯಾವ ಉದ್ಯೋಗ ಸುಲಭಲಭ್ಯ? ದುಡ್ಡು ಸುರಿದು ಉದ್ಯೋಗ ಗಿಟ್ಟಿಸುವವರ ಮಾತೇ ಬೇರೆ. ಆದರೆ ಇಲ್ಲಿರುವುದು ಉಳ್ಳವರ ಪ್ರಶ್ನೆಯಲ್ಲ.

ವೃತ್ತಿ ಎಂದಾಕ್ಷಣ ಪ್ರವೃತ್ತಿ ಎಂಬ ಪದ ತಂತಾನೇ ಜತೆಗೂಡುತ್ತದೆ. ಹೌದು, ನಮ್ಮ ಪ್ರವೃತ್ತಿಗನುಸಾರವಾಗಿ ವೃತ್ತಿಯೊಂದು ದೊರೆತರೆ! ಆ ಸಂತಸ ಅನಿರ್ವಚನೀಯ.

ಮುಂದಿನ ಪುಟಗಳಲ್ಲಿ 'ನಿಮಗೆ ಯಾವ ವೃತ್ತಿ ಸೂಕ್ತ?' ಎಂಬ ಕುರಿತ ಚಿಂತನೆಯಿದೆ. ಓದಿಕೊಳ್ಳಿ.

• ವ್ಯವಸ್ಥಾಪಕ ಸಂಪಾದಕ



# ಸಹಚಿಂತನ

### ದೇವನೊಲಿದ ಜೀವ

'ದೇವನೊಲಿದ ಜೀವ' ('ಪುಸ್ತಕ ವಿಭಾಗ'- ಮೇ ೧೯೯೫) ಓದಿ ಸಮಾಧಾನವಾಯಿತು. ಅದರೊಟ್ಟಿಗೆ ಅಷ್ಟೇ ಬೇಸರವೂ ಆಯಿತು. ಶ್ರೀ ಸಾಯಿಬಾಬಾರ ಚಿತ್ರವನ್ನಷ್ಟೇ ಕೊಟ್ಟು, ದಿ. 'ನಾ. ಕಸ್ತೂರಿ'ಯವರ ಚಿತ್ರವನ್ನೇಕೆ ಕೊಡಲಿಲ್ಲ? ತಮ್ಮ ಉದ್ದೇಶ ಬಾಬಾರ ಪರಿಚಯವೆ? ಅಥವಾ 'ನಾ. ಕಸ್ತೂರಿ'ಯವರ ಪರಿಚಯವೆ?

ಅರುಣ ಜಿ. ಮಾಲಿಬೆಕ್ಕೂರ
ಮುಂಡಗೋಡ

'ದೇವನೊಲಿದ ಜೀವ' ಓದುಗರಿಗೆ ಸಾಯಿಬಾಬಾರ ಆತ್ಮೀಯ ಪರಿಚಯ ಮಾಡಿಕೊಟ್ಟಿದೆ. ಇದನ್ನೋದಿದ ನಂತರ ಸಾಯಿಬಾಬಾ ಅವರ ತಲೆಗೂದಲ ಬಗೆಗಿರುವ ಸಂದೇಹಕ್ಕೆ ಪೂರ್ಣವಿರಾಮ ದೊರೆತಂತಾಯಿತು.

ಬಾಬಾ ಅವರು ಅವತಾರಪುರುಷರು ಹೌದೋ ಅಲ್ಲವೋ ಎನ್ನುವುದು ಬೇರೆ ವಿಷಯ. ಆದರೆ ಅವರು ಮಾಡುತ್ತಿರುವ ಸಾಮಾಜಿಕ ಸೇವೆ ಅನ್ಲಾಘ್ಯವೆನ್ನುವುದಕ್ಕೆ ಎರಡು ಮಾತಿಲ್ಲ.

ಎಸ್. ಲಕ್ಷ್ಮೀನರಸಿಂಹ
ಚಾಮರಾಜನಗರ

### ಕಣ್ಣಿನ ಆರೋಗ್ಯ

ಮೇ ಸಂಚಿಕೆಯ 'ಆರೋಗ್ಯದಂಗಳ'ದಲ್ಲಿ ಡಾ. ಎಚ್.ಎಸ್. ಮೋಹನರು ಬರೆದ ಕುರುಡುತನಕ್ಕೆ ಕಾರಣವಾಗುವ ಕಣ್ಣಿನ ಕಾಯಿಲೆಗಳ ಬಗೆಗಿನ ಲೇಖನ ಸಂಗ್ರಹಯೋಗ್ಯವಾಗಿತ್ತು. ಮನುಷ್ಯನ ಅಂಗಗಳಲ್ಲಿ ಪ್ರಧಾನವಾದ ಅಂಗ "ಕಣ್ಣು." ಆ ಕುರಿತು ವಿವರವಾಗಿ ಬರೆದ ಡಾಕ್ಟರ್ ಎಚ್.ಎಸ್.ಮೋಹನರವರಿಗೆ ಅನಂತ ವಂದನೆಗಳು.

ಎಂ. ವಿನೋದ್‌ಕುಮಾರ್
ವಾಮಂಜೂರು

### ಅದ್ಭುತ ರಮ್ಯ

ಮೇ ತಿಂಗಳ ಕಸ್ತೂರಿ ಅದ್ಭುತ ರಮ್ಯ ಕಾವ್ಯಗಾರುಡಿಗ ಬೇಂದ್ರೆ, ಚಿತ್ರ ಜಗತ್ತಿನ ಹಾಸ್ಯ ಚಕ್ರವರ್ತಿ ಚಾರ್ಲಿ ಚಾಪ್ಲಿನ್, ಪವಾಡಪುರುಷ ಸತ್ಯಸಾಯಿ, ಛಂದೋವಸಂತ ಸೇಡಿಯಾಪು, ಕಿಟ್ಟೆಲ್ ಕೋಶ- ಹೀಗೆ ಹತ್ತು ಹಲವಾರು ಶ್ರೇಷ್ಠ ಲೇಖನಗಳನ್ನು ಒಳಗೊಂಡು ಎದೆತುಂಬಿ ನಿಂತಿರುವ ಕಸ್ತೂರಿ 'ನಿಜಕ್ಕೂ ಪಯಸ್ವಿನಿ. ಗ್ರಂಥ ಭಂಡಾರಕ್ಕೊಂದು ರತ್ನ.

ಪಿ. ಜಮಾಯಿಗೌಡ
ಗುತ್ತಲು (ಮಂಡ್ಯ)

### ಸೇಡಿಯಾಪು ಕೃಷ್ಣಭಟ್ಟರು

ಮೇ ೯೫ರ ಸಂಚಿಕೆಯಲ್ಲಿ ಮೂಡಿಬಂದ ಸೇಡಿಯಾಪು ಕೃಷ್ಣಭಟ್ಟರ ಪರಿಚಯ ಚೆನ್ನಾಗಿದೆ. ಜ್ಞಾನ ವೃದ್ಧರೂ, ವಯೋವೃದ್ಧರೂ ಕನ್ನಡನಾಡಿನ ಶ್ರೇಷ್ಠ ಸಂಶೋಧಕರೂ ಆದ ಸೇಡಿಯಾಪು ಕೃಷ್ಣಭಟ್ಟರಿಗೆ ಈ ವರ್ಷದ 'ಚಿದಾನಂದ ಪ್ರಶಸ್ತಿ'ಯೂ, ರಾಜ್ಯೋತ್ಸವ ಪ್ರಶಸ್ತಿಯೂ ಬಂದಿರುವುದು ನಮಗೆಲ್ಲ ಹೆಮ್ಮೆಯ ವಿಷಯ.

ರೂಪಾ ಮರಿಗೇರಿ
ಬೆಳಗಾವಿ

### ಚಾರ್ಲಿ ಚಾಪ್ಲಿನ್

ಮೇ ೧೯೯೫ರ ಸಂಚಿಕೆಯಲ್ಲಿ ಪ್ರಕಟವಾದ 'ಚಿತ್ರ ಜಗತ್ತಿನ ಚಿರಂಜೀವಿ- ಚಾರ್ಲಿ ಚಾಪ್ಲಿನ್' ಎಂಬ ಖಜಾನೆ ಕೃಷ್ಣಮೂರ್ತಿಯವರ ಲೇಖನ ನಿಜಕ್ಕೂ ಮಾರ್ಮಿಕವಾಗಿತ್ತು.

ಮೂಕ ಚಿತ್ರಗಳಲ್ಲಿ ಅಮೋಘ ಕ್ರಾಂತಿ ಮಾಡಿದ ಚಾರ್ಲಿ ಚಾಪ್ಲಿನ್‌ರ ಚಿತ್ರಗಳು ಪ್ರೇಕ್ಷಕರನ್ನು ಭ್ರಮಾಲೋಕಕ್ಕೆ ಕರೆದೊಯ್ಯುತ್ತಿದ್ದವು. ಈಗಿನ ಭರಾಟೆಯ ಶಬ್ದಗಳ ಚಿತ್ರಗಳ ಮಧ್ಯೆಯೂ ಅವರ ಚಿತ್ರಗಳು ಪ್ರೇಕ್ಷಕರನ್ನು ತಮ್ಮ ಕಡೆಗೆ ಸೆಳೆದುಕೊಳ್ಳುತ್ತವೆ. ಒಂದಿಷ್ಟೂ ಅಶ್ಲೀಲತೆಯ ಸೋಂಕಿಲ್ಲದ, ಯಾವುದೇ ಅಬ್ಬರಗಳಿಲ್ಲದ ಅವರ ಚಿತ್ರಗಳು ಇಂದಿನ ಚಿತ್ರಗಳಿಗೆ ಮಾದರಿಯಾಗಿದೆ.

ಎಚ್.ಆರ್. ವಸ್ತ್ರದ
ಕುಕನೂರು

### ಹೃದಯ ವೈಶಾಲ್ಯ

ಏಪ್ರಿಲ್ ಸಂಚಿಕೆಯ 'ಅಚ್ಚಳಿಯದ ಪುಟಗಳು' ಅಂಕಣದಲ್ಲಿ ಮೂಡಿಬಂದ ಬರಹ ಪ್ರೊ. ಎ.ಆರ್. ಕೃಷ್ಣಶಾಸ್ತ್ರಿಗಳ ಹೃದಯವೈಶಾಲ್ಯಕ್ಕೆ ಹಿಡಿದ ಕನ್ನಡಿಯಂತಿದೆ.

ನಿಜಕ್ಕೂ ಅವರು ಸಂಬಳದ ಮೇಸ್ಟ್ರು ಆಗಿರಲಿಲ್ಲ; ಶಿಷ್ಯರ ಹಿತಚಿಂತಕರಾಗಿದ್ದರು. ಅಂತಹ ಸದ್ಗುರುವನ್ನು ಪಡೆದ ಶಿಷ್ಯರ ಭಾಗ್ಯವೇ ಭಾಗ್ಯ.

**ಡಿ. ಗುಂಡೂರಾವ್**
ಮೈಸೂರು

**ಮರೆತರೆ?**

ಎಪ್ರಿಲ್ ಸಂಚಿಕೆಯಲ್ಲಿ ಮೊರಾರ್ಜಿಯವರ ಬಗೆಗಿನ ಲೇಖನ ಓದಿದೆ. ಅವರು ಜೆ.ಪಿ. ಅವರ ಬಗ್ಗೆ ತುಂಬ ಹಗುರವಾಗಿ ಮಾತಾಡಿದ್ದನ್ನು ಓದಿ ಆಶ್ಚರ್ಯವಾಯಿತು. ಮೊರಾರ್ಜಿಯವರು ಪ್ರಧಾನ ಮಂತ್ರಿ ಆಗುವುದಕ್ಕೆ ಜೆ.ಪಿ.ಯವರ ಜನಾಂದೋಲನ ಕಾರಣ ಎನ್ನುವ ಸತ್ಯವನ್ನು ಯಾರಾದರೂ ಮರೆಯುವುದಕ್ಕೆ ಸಾಧ್ಯವೆ? ಆಮೇಲ ಆ ಸರಕಾರ ಬಹುಕಾಲ ಬಾಳಲಿಲ್ಲ ಎನ್ನುವುದು ಬೇರೆ ವಿಷಯ. ಆದರೆ ಜೆ.ಪಿ.ಯವರ ಸಾಧನೆಯನ್ನು ಅಲ್ಲಗಳೆಯಲಾದೀತೆ?

**ಡಾ. ರಮಾನಂದ ಬನಾರಿ**
ಮಂಜೇಶ್ವರ

**ಮೆಂತ್ಯ....**

ಎಪ್ರಿಲ್-೧೯೯೫ರ ಕಸ್ತೂರಿ ಸಂಚಿಕೆಯಲ್ಲಿ "ಮೆಂತ್ಯದ ಪಲ್ಯವನ್ನು ಮತ್ತೆ ಮತ್ತೆ ನೋಡಿ..." ಎಂಬ ಲೇಖನದಿಂದ ಮೆಂತ್ಯದ ಪಲ್ಯದಲ್ಲಿರುವ ಬಿಳಿ ಗೀರುಗಳಲ್ಲಿ ಸೂಕ್ಷ್ಮವಾದ ಕೀಟಾಣು ಅಡಗಿರುವ ಅಚ್ಚರಿಯ ವಿಷಯ ತಿಳಿಯಿತು. ಹಾಗೂ ಲೇಖನದಿಂದಾಗಿ ಈಗ ಈ ಪಲ್ಯವನ್ನು ಗಮನಿಸಿ ತೆಗೆದುಕೊಳ್ಳುವಂತಾಯಿತು.

೩-೪ ವರ್ಷಗಳ ಹಿಂದೆ ಗಿಡದ ತೊಪ್ಪಲುಗಳಲ್ಲಿ ಉಂಟಾದ ಗೀರುಗಳ ಬಗ್ಗೆ ಇಲ್ಲ ಸಲ್ಲದ ಭಾವನೆಯುಂಟಾಗಿ ನಾಗರಪಂಚಮಿಯನ್ನು ಈ ನಮ್ಮ ಭಾಗದಲ್ಲಿಯೂ ಎರಡೆರಡು ಬಾರಿ ಆಚರಿಸಲಾಗಿದೆ. ಆಗ ವ್ಯಾಪಾರಸ್ಥರು ಜನರ ಮೂಢನಂಬಿಕೆಯ ಲಾಭ ಪಡೆದುಕೊಂಡಿದ್ದಾರೆ.

ಕೀಟದ ಜೀವನ ಕ್ರಮವನ್ನು ವಿವರಿಸಿದ ಲೇಖಕರು ಇದು ಬರಿಗಣ್ಣಿಗೆ ಕಾಣಲು ಸಾಧ್ಯವೆ ಹೇಗೆ? ಎನ್ನುವುದನ್ನು ತಿಳಿಸಿಲ್ಲ. ಹಾಗೂ ಈ ಪಲ್ಯವನ್ನು ಅರಿಯದೆ ಉಪಯೋಗಿಸಿದಲ್ಲಿ ಆಗುವ ಸಾಧಕ-ಬಾಧಕಗಳೆನೆಂಬುದು ತಿಳಿಸಿ, ಇದರಿಂದ ಯಾವ ರೋಗಗಳು ಕಾಣಿಸಿಕೊಳ್ಳುತ್ತವೆಂಬುದನ್ನೂ ಹೇಳಿದ್ದರೆ ಲೇಖನ ಮತ್ತಷ್ಟು ಉಪಯುಕ್ತವೆನಿಸುತ್ತಿತ್ತು.

**ಮಲ್ಲಿಕಾರ್ಜುನ ಗಚ್ಚಿ**
ಪೇಠಗೋಗಿ

**ಸಾಕ್ಷಿ.**

ಎಪ್ರಿಲ್ ತಿಂಗಳ ಸಂಚಿಕೆಯ 'ಪುಸ್ತಕ ವಿಭಾಗ'ದಲ್ಲಿ ಪ್ರಕಟಗೊಂಡ 'ಗಂಗಾ ಪಾದೇಕಲ್'ರ 'ಸಾಕ್ಷಿ' ಕಿರುಕಾದಂಬರಿ ಬಹಳ ಚೆನ್ನಾಗಿತ್ತು. ಅಸಹಜತೆ ಎಂಬುದು ಎಲ್ಲೂ ಕಾಣದೆ ಕಾದಂಬರಿ ಸರಾಗವಾಗಿ ಓದಿಕೊಂಡು ಹೋಗುತ್ತದೆ. ಕಾದಂಬರಿಯಲ್ಲಿ ಬರುವ ಸುಧಾಕರ, ಪಾರ್ವತಮ್ಮ ಹಾಗೂ ಜನ್ನಯ್ಯನ ಪಾತ್ರಗಳು ಮನಸ್ಸಿನಲ್ಲಿ ಸ್ಥಿರವಾಗಿ ನಿಲ್ಲುತ್ತವೆ.

ಇಂತಹ ಉತ್ತಮ ಕಾದಂಬರಿಯನ್ನು ಬರೆದ ಲೇಖಕರಿಗೂ ಹಾಗೂ ಪ್ರಕಟಿಸಿದ 'ಕಸ್ತೂರಿ'ಗೂ ಧನ್ಯವಾದಗಳು.

**ಎಸ್. ಲೋಕೇಶ**
ಶ್ರೀನಿವಾಸಪುರ

ಮೋಸ, ವಂಚನೆ, ಸ್ವಾರ್ಥಗಳೇ ಬದುಕಿನ ಸೂತ್ರಗಳೆಂದು ಭ್ರಮಿಸುವವರೆಲ್ಲ ಓದಲೇಬೇಕಾದ ಕಾದಂಬರಿ "ಸಾಕ್ಷಿ." ಕ್ಷಣದ ದೌರ್ಬಲ್ಯ ಏನೆಲ್ಲ ಆಡಿಸಿ, ಮಾಡಿಸಿ, ಹೇಗೆ ನಮ್ಮೊಂದಿಗೆ ನಮ್ಮ ಸಂಬಂಧಿಗಳನ್ನೂ ಬೇತಾಳನಂತೆ ಬೆನ್ನುಹತ್ತಿ, ಕಾಡಿ, ಬದುಕನ್ನೇ ಬರಿದು ಮಾಡಿ ಸಾವಿನ ಪರಿಹಾರಕ್ಕೆ ಸಿದ್ಧಗೊಳಿಸುತ್ತದೆ ಎಂಬುದು ಜನ್ನಯ್ಯನ ಬದುಕಿನಿಂದ ಸ್ಪಷ್ಟಗೊಂಡಿದೆ. 'ಸಾಕ್ಷಿ'ಯನ್ನು ಕಾದಂಬರಿಯಾಗಿ ಓದುವ ಬದಲು ಎಚ್ಚರಕ್ಕಾಗಿ ಓದಿದಲ್ಲಿ ನಮ್ಮ ಬದುಕಿನಲ್ಲೂ ಒಂದಿಷ್ಟು ಸುಧಾರಣೆ ಕಾಣಲು ಸಾಧ್ಯವಾಗದೆ?

**ಎ.ಎಸ್. ಸೂರ್ಯನಾರಾಯಣಾಚಾರಿ**
ಊರ್ಡಿಗೆರೆ

**ನಿದ್ರೆ ಮತ್ತು ಕನಸು**

ಎಪ್ರಿಲ್ ೧೯೯೫ರ ಕಸ್ತೂರಿಯಲ್ಲಿ ಪ್ರಕಟವಾದ ಆರೋಗ್ಯದಂಗಳದಿಂದ ನಿದ್ರೆ ಮತ್ತು ಕನಸುಗಳ ಬಗ್ಗೆ ವಿವರವಾಗಿ ತಿಳಿಯಿತು. ಕಸ್ತೂರಿಯಲ್ಲಿ ಇಂತಹ ಲೇಖನಗಳು ಆಗಾಗ್ಗೆ ಮೂಡಿ ಬರುತ್ತಿರಲಿ.

**ಹರೀಶ್ ಎಚ್.**
**ವಸಂತರಾಜ್ ಎಚ್.**
ಕುಂಬಳೆ (ಕೇರಳ)

ಆರೋಗ್ಯದಂಗಳ ನಿಜಕ್ಕೂ ಅತ್ಯವಶ್ಯಕವಾಗಿ ಓದಲೇಬೇಕಾದ ಅಂಕಣ. ಈ ತಿಂಗಳ 'ನಿದ್ರೆ ಮತ್ತು ಕನಸುಗಳು'

(ಆರನೇ ಪುಟಕ್ಕೆ)

# ಅಂತರಂಗ









ಮುಖಪುಟ ಚಿತ್ರ

೧೧೩

ಸಂಚಿಕೆ

ಭೀಮಸೇನ ತೊರಗಲ್ಲ
ಸಂಗ್ರಹ:
ಶ್ರೀ.ಹಾ. (ಪುಣೆ)

## ಆರೋಗ್ಯದಂಗಳ



## ಚಿಳಕಿಂಡಿ

ಅಚ್ಚುಮೆಚ್ಚಿನ ಲಿಖಿತ ಗೋರಿಗಳ ಮೇಲೆಲ್ಲ
ಸ್ವಚ್ಛ ಬರೆದಿಹರು ಮಹಾತ್ಮರಿವರು
ಉಚ್ಚಮನ ಶ್ರೇಷ್ಠ ಜೀವನ
ನಡೆಸಿದವರಿವರೆಂದು
ನೀಚರೊಬ್ಬರೂ ಸಾಯಲಿಲ್ಲವೆ ತಿಮ್ಮ?

- ಬೀChi

ಬುದ್ಧಿಶಾಲಿಗಳೊಡನೆ ನಡೆಸುವ ಒಂದು ಗಂಟೆಯ ಮಾತುಕತೆ ಒಂದು ತಿಂಗಳು ಪುಸ್ತಕ ಓದಿದ್ದಕ್ಕೆ ಸಮ.

- ಚೀನೀ ಗಾದೆ

ಎಲ್ಲರನ್ನೂ ಪ್ರೀತಿಸು, ಆದರೆ ಕೆಲವರನ್ನು ಮಾತ್ರ ನಂಬು.

- ಅನಾಮಿಕ

ಗುಣವಂತರು ಗುಣದಿಂದ ಪ್ರಕಾಶಕ್ಕೆ ಬರುತ್ತಾರೆಯೇ ಹೊರತು ಹುಟ್ಟಿನಿಂದಲ್ಲ.

- ಪಂಚತಂತ್ರ

ಯಾರಾದರೂ ಬೆನ್ನು ಚಪ್ಪರಿಸಿದರೆ ನಿಮ್ಮನ್ನು ಹೊಗಳುವುದಕ್ಕಾಗಿಯೇ ಹಾಗೆ ಮಾಡುತ್ತಾರೆಂದು ಭಾವಿಸಬೇಡಿ. ಚುಚ್ಚಲು ಮೆತ್ತನೆಯ ಜಾಗ ಸಿಗುತ್ತದೆಯೆ? ಎನ್ನುವುದನ್ನು ನೋಡಲೂ ಬೆನ್ನು ಚಪ್ಪರಿಸುವವರಿರುತ್ತಾರೆ.

- ಎಂ.ಆರ್.ಎಸ್.

### ಸ್ಥಿರ ಶೀರ್ಷಿಕೆಗಳು

(ಮೂರನೇ ಪುಟದಿಂದ)

ಲೇಖನ ಅರ್ಥಗರ್ಭಿತವಾಗಿತ್ತು. ಕನಸುಗಳು ಬೀಳುವುದು, ನಿದ್ರೆ ಬರುವುದು ಈ ಬಗ್ಗೆ ಲೇಖನ ಸೊಗಸಾಗಿ ತಿಳಿಸಿಕೊಟ್ಟಿದೆ.

ಕೋಗಲೂರು ತಿಪ್ಪೇಸ್ವಾಮಿ
ಕಲ್ಲಿಹಾಳ

'ನಿದ್ರೆ ಮತ್ತು ಕನಸುಗಳು ಎಂಬ ಲೇಖನ ಓದಿ ಅತಿನಿದ್ರೆ, ನಿದ್ರಾಹೀನತೆಗಳು ಕೂಡ ಮನೋದೈಹಿಕ ರೋಗಗಳು ಎಂಬ ವಿಷಯ ತಿಳಿಯಿತು. ಆದರೆ ಕನಸುಗಳು ಎಂದರೇನು? ಏಕೆ ಕನಸುಗಳು ಕಾಣಿಸಿಕೊಳ್ಳುತ್ತವೆ? ಬಗೆಗಿನ ಮಾಹಿತಿ ಅಪೂರ್ಣ ಎನಿಸಿತು.

ಅನಂತ ಕುಲಕರ್ಣಿ
ನೆಲಮಂಗಲ

ಮುಂದೆಯೋ ಹಿಂದೆಯೊ?

ಎಪ್ರಿಲ್ ಸಂಚಿಕೆಯ ಜ್ಞಾನನಿಧಿ ಅಂಕಣದಲ್ಲಿ ಪ್ರಕಟವಾದ ಸತ್ಯಕಥೆಯಲ್ಲಿ (ಕೊನೆಗೂ ಸುಳ್ಳಾಗಲೇ ಇಲ್ಲಾ!) ಲಿಟಲ್‌ಟನ್ನರ ಪರಿಚಾರಕನು ಗಡಿಯಾರದ ಮುಳ್ಳನ್ನು ಅರ್ಧ ಗಂಟೆಯಷ್ಟು ಹಿಂದೆ ತಿರುಗಿಸಿದ್ದ ಎಂದು ಅಚ್ಚಾಗಿದೆ. ಇದು ತಪ್ಪು. ಏಕೆಂದರೆ ಆಗ ಸರಿಯಾದ ಸಮಯ ಒಂದು ಘಂಟೆ, ಗೋಡೆಯ ಮೇಲಿನ ಗಡಿಯಾರ ಹನ್ನೆರಡೂವರೆ ತೋರಿಸುತ್ತಿದ್ದಾಗ ಲಿಟಲ್‌ಟನ್ನರು ಸತ್ತರು. ಅಂದರೆ ಆಗ ಸರಿಯಾದ ಸಮಯ ಹನ್ನೆರಡು ಗಂಟೆ.

ಆದುದರಿಂದ ಪರಿಚಾರಕನು ಗಡಿಯಾರದ ಮುಳ್ಳನ್ನು ಅರ್ಧ ಗಂಟೆಯಷ್ಟು ಮುಂದೆ ತಿರುಗಿಸಿದನು ಎಂದು ಮುದ್ರಿತವಾಗಬೇಕು. ಸರಿಯಾದ ಸಮಯ ೧೨ ಗಂಟೆ ಆಗಿರುವುದು.

ಪ್ರೋ. ಸಂಜೀವಕುಮಾರ್
ಬೆಂಗಳೂರು

## ಲೇಖಕರಿಗೆ ಸೂಚನೆ

- 'ಕಸ್ತೂರಿ'ಗಾಗಿ ಕಳಿಸುವಂಥ ಲೇಖನಗಳು ಕಾಗದದ ಒಂದೇ ಮಗ್ಗುಲಲ್ಲಿ ಸ್ಫುಟವಾಗಿ ಬರೆದಂಥವಾಗಿರಲಿ. ನಿಮ್ಮ ಹೆಸರು-ವಿಳಾಸಗಳು ಸ್ಪಷ್ಟವಾಗಿರಲಿ. ಅನುವಾದ, ರೂಪಾಂತರ, ಆಧಾರಿತ ಲೇಖನಗಳಾದರೆ ಮೂಲ ಲೇಖಕ-ಪ್ರಕಾಶಕರ ವಿಳಾಸ, ಅನುಮತಿ ಪತ್ರಗಳನ್ನು ಜತೆಗೆ ಲಗತ್ತಿಸಿ.
- ಅಸ್ವೀಕೃತ ಲೇಖನಗಳನ್ನು ಮರಳಿ ಪಡೆಯಲಿಚ್ಛಿಸುವವರು ಲೇಖನಗಳ ಸಂಗಡವೆ ಅಗತ್ಯ ಅಂಚೆಚೀಟಿ ಲಗತ್ತಿಸಿದ ಲಕೋಟೆಯನ್ನಿಡಿ.
- ಚುಟುಕು, ಪುಟಕೊನೆಯ ಕಿರುಲೇಖನ, ನೆನಪು ನೆರಳಿನಲ್ಲಿ ಮುಂತಾದವುಗಳ ಕುರಿತು ಪತ್ರವ್ಯವಹಾರ ಮಾಡಲಾಗುವುದಿಲ್ಲ.
- ಲೇಖನದ ಕಾರ್ಬನ್ ಅಥವಾ ಝೆರಾಕ್ಸ್ ಪ್ರತಿಯನ್ನು ಕಳಿಸಲೇಬೇಡಿ.
- ಸ್ವೀಕೃತ ಲೇಖನಗಳನ್ನು ಯಥಾವಕಾಶ ಪ್ರಕಟಿಸಿ ಸೂಕ್ತ ಗೌರವಧನವನ್ನು ನೀಡಲಾಗುವುದು.

## ಚಂದಾದಾರರಿಗೆ ಸೂಚನೆ

- 'ಕಸ್ತೂರಿ' ಪ್ರತಿ ತಿಂಗಳ ೧ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳಿನ ೨ನೆಯ ದಿನಾಂಕದೊಳಗೆ ನಿಮಗೆ ತಲುಪದಿದ್ದಲ್ಲಿ ಚಂದಾದಾರರು ತಮ್ಮ ಟಪ್ಪಾಲು ಕಚೇರಿಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಈ ಸಂಬಂಧದಲ್ಲಿ ಪತ್ರವ್ಯವಹಾರ ಮಾಡುವಾಗ, ವಿಳಾಸ ಬದಲಾವಣೆಯ ಸಂದರ್ಭದಲ್ಲಿ ದಯವಿಟ್ಟು ಚಂದಾ ನಂಬರು ಸ್ಫುಟವಾಗಿ ನಮೂದಿಸಿರಬೇಕಾದ್ದು ಅತ್ಯವಶ್ಯಕ.

ಪತ್ರವ್ಯವಹಾರ ವಿಳಾಸ:
ಪ್ರಸಾರಾಂಗ ವ್ಯವಸ್ಥಾಪಕ,
ಕಸ್ತೂರಿ, ಪೊ.ಬಾ. ನಂ. ೩೦,
ಹುಬ್ಬಳ್ಳಿ-೫೮೦ ೦೨೦.

### ಚಂದಾ ದರಗಳು

| | |
|---|---|
| ಬಿಡಿ ಸಂಚಿಕೆ | ರೂ. ೬-೦೦ |
| ೬ ತಿಂಗಳಿಗೆ ಅಂಚೆ ವೆಚ್ಚ ಸೇರಿ | ರೂ. ೩೫-೦೦ |
| ೧ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೭೦-೦೦ |
| ೨ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೧೩೦-೦೦ |

# ಕಸ್ತೂರಿ

ವರ್ಷ: ೩೯ | ಜೂನ್ ೧೯೮೫ | ಸಂಚಿಕೆ: ೧೦

## ಅಭಿಶಾಪ

ಸೃಷ್ಟಿಕಾರ್ಯ ಆದೆತಾನೆ ಮುಗಿದಿತ್ತು. ಬ್ರಹ್ಮನು ಸತ್ಯ ಅಸತ್ಯ, ಅಗ್ನಿ ಹಾಗೂ ವರುಣರನ್ನು ಕರೆದು ಅಮರತ್ವವನ್ನು ಉಂಟುಮಾಡುವ ಒಂದು ಫಲವನ್ನು ಕೊಟ್ಟು, ಅವರೆಲ್ಲರೂ ಪೃಥ್ವಿಗೆ ಹೋಗಿ ಅಲ್ಲಿ ಆ ಹಣ್ಣನ್ನು ಸರಿಯಾಗಿ ಹಂಚಿಕೊಂಡು ತಿನ್ನುವಂತೆ ಹೇಳಿದ.

ಕ್ರಮಿಸಬೇಕಾದ ದಾರಿ ದೀರ್ಘವಾಗಿತ್ತು. ಆದರೂ ಅಮರಫಲ ಸಿಕ್ಕಿದ್ದರಿಂದ ಸಹರ್ಷರಾಗಿಯೆ ಆ ನಾಲ್ವರೂ ಪೃಥ್ವಿಯತ್ತ ಕ್ರಮಿಸತೊಡಗಿದರು. ಈ ಹಣ್ಣನ್ನು ತಾನೊಬ್ಬನೇ ಏಕೆ ಕಬಳಿಸಬಾರದೆಂಬ ಕೆಟ್ಟ ವಿಚಾರ ಅಸತ್ಯಕ್ಕೆ ಬಂತು. ಆದರೆ ಹಾಗೆ ಮಾಡಹೋದರೆ ಉಳಿದ ಮೂವರೂ ತನ್ನನ್ನು ಹಾಗೆಯೆ ಬಿಟ್ಟಾರೆಯೆ? ಎಂಬ ವಿಚಾರವೂ ಅದಕ್ಕೆ ಬಾರದಿರಲಿಲ್ಲ.

ಈ ವಿಚಾರ ಬಂದದ್ದೇ ತಡ, ಅದು ವರುಣನ ಬಳಿ ಹೋಗಿ ಉಪಾಯದಿಂದ ಆ ಮಾತು ಈ ಮಾತು ಆಡುತ್ತಾ, "ನಿನ್ನಲ್ಲಿ ಹೇಗೂ ಸಾಕಷ್ಟು ಶಕ್ತಿಯಿದೆ. ಆ ಶಕ್ತಿಯನ್ನು ಉಪಯೋಗಿಸಿ ಅಗ್ನಿಯನ್ನು ಹೊಡೆದು ಹಾಕಿದರೆ ಅವನ ಪಾಲಿನ ಹಣ್ಣನ್ನು ನಾವಿಬ್ಬರೂ ತಿನ್ನಬಹುದಲ್ಲವೆ?" ಅಂದಾಗ, ಪಾಲಿಗೆ ಬರುವುದಕ್ಕಿಂತ ಹೆಚ್ಚಿನದನ್ನು ತಿಂದರೆ ಹೆಚ್ಚು ಅಮರತ್ವ ಬರುವುದೆಂದು ಭಾವಿಸಿದ ವರುಣ ಅಗ್ನಿಯನ್ನು ಕೂಡಲೆ ಹೊಡೆದುಹಾಕಿದ.

ಬಳಿಕ ಅದು ಸತ್ಯದ ಬಳಿ ಹೋಗಿ, "ನೋಡಿದೆಯಾ ಗೆಳೆಯಾ, ಆ ವರುಣನ ಮಿತ್ರಘಾತಕತನವನ್ನು? ಇಂಥವನಿಗೆ ಅಮರತ್ವ ಉಂಟಾದರೆ ಜಗತ್ತಿನ ಗತಿಯೇನಾದೀತು? ನಾವಿಬ್ಬರೂ ಪರ್ವತಾಗ್ರಕ್ಕೆ ಹೋಗಿ ಹಣ್ಣನ್ನು ಹಂಚಿಕೊಳ್ಳುವಾ," ಎಂದಾಗ ಸತ್ಯಕ್ಕೆ ಅಸತ್ಯದ ಮಾತೇ ಸರಿಯೆನಿಸಿತು.

ಹೇಳಿಕೇಳಿ ವರುಣ ನೀರಿನ ದೇವತೆ. ಅಂದಮೇಲೆ ಪರ್ವತವನ್ನು ಹೇಗೆ ತಾನೆ ಏರಿಯಾನು? ಎಷ್ಟು ಬೊಬ್ಬೆ ಹೊಡೆದರೂ ಕಿವಿಯಮೇಲೆ ಹಾಕಿಕೊಳ್ಳದೆ ಸತ್ಯ ಅಸತ್ಯಗಳೆರಡೂ ವರುಣನನ್ನು ಬಿಟ್ಟು ಪರ್ವತವನ್ನೇರಿದವು. ಪರ್ವತಾಗ್ರವನ್ನು ತಲಪುತ್ತಲೆ ಅಸತ್ಯ, ಸತ್ಯದ ಕತ್ತನ್ನು ಹಿಚುಕತೊಡಗಿತು. ಕಕ್ಕಾಬಿಕ್ಕಿಯಾದ ಸತ್ಯ ಏದುಸಿರುಬಿಡುತ್ತಾ ಬ್ರಹ್ಮನನ್ನು ನೆನೆದಾಗ ಮೇಲಿನಿಂದ ಅಶರೀರವಾಣಿ ಬಂತು, "ಸತ್ಯ, ನೀನಿಷ್ಟು ಪ್ರಬಲನಾಗಿದ್ದರೂ ಮೋಸಮಾಡಿ ಗಳಿಸಬೇಕೆಂಬ ದುರ್ಬುದ್ಧಿ ನಿನಗೆ ಬಂತು. ಅಹೋರಾತ್ರಿ ಒಂದು ಕ್ಷಣವೂ ಬಿಡದೆ ಅಸತ್ಯದೊಂದಿಗೆ ಹೊಡೆದಾಡುತ್ತಿರುವುದೇ ನೀನೀಗ ಅನುಭವಿಸಬೇಕಾದ ಶಿಕ್ಷೆ."

ಅಂದಿನಿಂದ ಅಸತ್ಯದೊಂದಿಗೆ ಸತ್ಯದ ಸಂಗ್ರಾಮ ನಡೆಯುತ್ತಲೇ ಇದೆ.

• ತಹಾ ಹುಸೇನ್

# ಅಟಲ ಬಿಹಾರಿಯವರೊಂದಿಗೆ

"ಗ್ವಾಲಿಯರ್‌ನಿಂದ ಅಲಹಾಬಾದಿಗೆ ಹೊರಟಿದ್ದ ಆ ರೈಲಿನದು ಚಕ್ಕಡಿಯ ವೇಗ. ಉಳಿದೆಲ್ಲ ಪ್ರಯಾಣಿಕರಿಗಿಂತ ಇಬ್ಬರು ಯುವಕರಿಗೆ ಮಾತ್ರ ಇದರಿಂದ ಕೋಪ, ಅಸಹನೆ ಹಾಗೂ ನಿರಂತರ ಚಡಪಡಿಕೆ.

"ಅಲಹಾಬಾದ್ ವಿಶ್ವವಿದ್ಯಾಲಯದಲ್ಲಿ ಏರ್ಪಡಿಸಿದ್ದ ಪ್ರತಿಷ್ಠಿತ ಚರ್ಚಾಕೂಟದಲ್ಲಿ ಪಾಲ್ಗೊಳ್ಳಲು ಹೊರಟಿದ್ದ ಅವರಿಬ್ಬರೂ ರೈಲಿನ ಮಂದಗತಿಯಿಂದಾಗಿ ಆತಂಕಗೊಂಡಿದ್ದರು. ರೈಲು ಅಲಹಾಬಾದ್ ನಿಲ್ದಾಣ ತಲುಪುತ್ತಲೇ ಧಾವಿಸಿ ಜಿಗಿದು ವಿಶ್ವವಿದ್ಯಾಲಯಕ್ಕೆ ಓಡಿದರಾದರೂ ಅವರಿಬ್ಬರೂ ನಿರಾಸೆಗೊಳ್ಳಬೇಕಾದ ಪ್ರಸಂಗ.

"ಆಗಲೇ ಕೊನೆಯ ಭಾಷಣಕಾರನ ಸರದಿಯೂ ಮುಗಿದಿತ್ತು! ಖ್ಯಾತ ಕವಿ ಹರಿವಂಶ



# ಅಪರೂಪದ ಸಂದರ್ಶನ...

• ಸ್ವಯಂಭೂ

ರಾಯ್ ಬಚ್ಚನ್ ಸೇರಿದಂತೆ ನಿರ್ಣಾಯಕರೆಲ್ಲರೂ ಅಂಕಗಳ ಗಣನೆಗೆ ತೊಡಗಿದ್ದ ಹೊತ್ತಿನಲ್ಲೇ ಮೈಕೈ ಎಲ್ಲ ಧೂಳು ಮುಳುಗಿಸಿಕೊಂಡು ಲಗೇಜ್ ಸಮೇತ ಆಗಮಿಸಿದ್ದ ಆ ಯುವಕರು ಧೃತಿಗೆಡದೆ ವೇದಿಕೆಯನ್ನೇರಿ ವಿಳಂಬದ ಕಾರಣ ವಿವರಿಸಿದರು. 'ಸ್ಪರ್ಧೆಗೆಂದು' ಪರಿಗಣಿಸದಿದ್ದರೂ, ಹೇಳಬೇಕಾದುದನ್ನು ಹೇಳಲಾದರೂ ತಮಗೆ ಒಂದು ಅವಕಾಶ ಕೊಡಿ ಎಂದು ಕೋರಿಕೊಂಡರು. ಆ ಕೋರಿಕೆಯ ಹಿಂದಿನ ಪ್ರಾಮಾಣಿಕತೆ ಗಮನಿಸಿ ಸಂಘಟಕರು ಒಪ್ಪಿಗೆ ಸೂಚಿಸುತ್ತಿದ್ದಂತೆಯೇ ಆ ಇಬ್ಬರಲ್ಲೊಬ್ಬ ಭಾಷಣ ಆರಂಭಿಸಿಯೇಬಿಟ್ಟ!

"ಸಭಿಕರು ಮೋಡಿಗೊಳಗಾದರು, ನಿರ್ಣಾಯಕರು ಬೇರೀಜು ಮಾಡುವುದನ್ನು ನಿಲ್ಲಿಸಿ ಯುವಕನ ಮಾತಿನತ್ತ ಕಿವಿಗೊಟ್ಟರು. ಯುವಕನ ನಿರರ್ಗಳ ವಾಕ್‌ಪ್ರವಾಹ ಆ ಪ್ರಾಂಗಣವನ್ನೆಲ್ಲ ನಿಬ್ಬೆರಗುಗೊಳಿಸಿತ್ತು. ಬೇಡಬೇಡವೆಂದರೂ ಅಂತಿಮವಾಗಿ ಆ ಯುವಕನಿಗೇ ಮೊದಲ ಬಹುಮಾನ ದಕ್ಕಿತ್ತು!"

ಐವತ್ತು ವರ್ಷಗಳ ಹಿಂದಿನ ಈ ಘಟನೆಯನ್ನು ಕಣ್ಣಿಗೆ ಕಟ್ಟುವಂತೆ ವಿವರಿಸುವ ಅಟಲ್‌ಜಿ ಮುಗುಳ್ನಕ್ಕು "ಆ ಯುವಕ ಯಾರು ಗೊತ್ತೆ?" ಎಂದು ಪ್ರಶ್ನೆಯೆಸೆಯುತ್ತಾರೆ. "ನಾನೇ," ಎಂದು ನಗುಬೀರುತ್ತಾರೆ.

ಬಾಲ್ಯದಿಂದಲೇ ಮೋಹಕ ಮಾತಿಗೆ ಪ್ರಸಿದ್ಧರಾದ ವಾಜಪೇಯಿ ಈ ಐದು ದಶಕಗಳ ಅವಧಿಯಲ್ಲಿ ವಾಕ್ಚಾತುರ್ಯಕ್ಕೆ ಮತ್ತೊಂದು ಹೆಸರೆನಿಸಿಕೊಂಡಿದ್ದಾರೆ. ವಾಜಪೇಯಿಯವರ ಭಾಷಣವಿದೆಯೆಂದರೆ ಸಾಕು, ಲಕ್ಷಗಟ್ಟಲೆ ಜನ ಮೈದಾನಗಳಲ್ಲಿ ಮೈಮರೆಯುವುದೇನೂ ಹೊಸದಲ್ಲ. ತಮ್ಮ ರಾಜಕೀಯ ಎದುರಾಳಿಗಳೂ ತಲೆದೂಗುವಂತೆ ಮಾಡಿದ ಪ್ರಸಂಗಗಳೂ ಅಸಂಖ್ಯ. ಅವರ ಮಾತು ಜ್ಯೋತಿರ್ಲಿಂಗ. ಮುತ್ತಿನಹಾರವಾಗಿರುವಂತೆಯೆ ಮೂಲವನ್ನು ಮುಟ್ಟಿ ತಟ್ಟುವ ಮೂಲಿಕೆಯೂ ಹೌದು. ಆ ಶಬ್ದಗಳಲ್ಲಿ ಅದೆಂಥ ಶಕ್ತಿ! ಮಂಡಿಸುವ ವಿಷಯದಲ್ಲಿ ಅದೆಂಥಾ ಪ್ರೌಢಿಮೆ! ಹೊರಬೀಳುವ ಒಂದೊಂದು ಪದಕ್ಕೂ ಅದರದೇ ಆದ ತೂಕ. ಅವರ ಈ ಕೌಶಲ ಮೊನ್ನೆ ಮೊನ್ನೆ ಜಿನೇವಾ ಸಮಾವೇಶದಲ್ಲಿ ಎಷ್ಟೊಂದು ಸ್ಫುಟವಾಗಿ ವ್ಯಕ್ತವಾಯಿತೆಂದರೆ ಅಷ್ಟೆಲ್ಲ ಹಾರಾಡಿದ್ದ ಪಾಕಿಸ್ತಾನ ಕೊನೆಗೂ ತಲೆತಗ್ಗಿಸಬೇಕಾಯಿತು. ಭಾರತದ ಗೌರವ ಇಮ್ಮಡಿಗೊಂಡಿತು. "ಅಟಲ್‌ಜಿ ಅಲ್ಲಿದ್ದುದರಿಂದಲೇ ಭಾರತದ ಹಿರಿಮೆ ಹೆಚ್ಚಿತು," ಎಂದು ಸ್ವತಃ ಪ್ರಧಾನಿ ನರಸಿಂಹರಾವ್ ಘಂಟಾಘೋಷವಾಗಿ ಹೇಳಿದರು.

ಅಟಲ್‌ಜಿಯ ಮಾತೆಂದರೆ ಹಾಗೆ. ಅಸ್ಖಲಿತವಾಗಿ ಹೊಮ್ಮುವ ಅದು ಒಮ್ಮೊಮ್ಮೆ ಜೇನಿನ ಹೊಳೆಯಾಗುತ್ತದೆ. ಆಲಿಕಲ್ಲುಗಳ ಮಳೆಯಾಗುತ್ತದೆ. ಮರುಕ್ಷಣದಲ್ಲೇ ಎದುರಾಳಿಗಳ ಮೇಲೆ ಜಲಪಾತವಾಗಿ ಧುಮ್ಮಿಕ್ಕಿ ಕಕ್ಕಾವಿಕ್ಕಿ ಮಾಡುತ್ತದೆ. ಎಂಥವರನ್ನೂ ಅಪ್ರತಿಭರನ್ನಾಗಿಸುತ್ತದೆ. ಹಾಗೆಂದ ಮಾತ್ರಕ್ಕೆ ಅವರದು ಕೇವಲ ಶಬ್ದಛಲವಲ್ಲ. ಆ ಮಾತುಗಳಲ್ಲಿ ವಿವೇಚನೆ ತುಂಬಿರುತ್ತದೆ. ವಿಚಾರ ಪರಿಪ್ಲುತತೆ ಇರುತ್ತದೆ. ಇದ್ದಕ್ಕಿದ್ದಂತೆಯೆ ಹಾಸ್ಯ-ವ್ಯಂಗ್ಯಗಳೊಂದಿಗೆ ಚಾಟಿ ಏಟೂ ಆಗುತ್ತದೆ. ತಮ್ಮದೇ ಸರಿ, ತಮ್ಮ ಪಕ್ಷದ ನೀತಿಯೇ ಸರಿ ಎಂಬ ಹಠ ಅವರಿಗಿಲ್ಲ. ಬಿ.ಜೆ.ಪಿ ತಪ್ಪು ಮಾಡಿದಾಗಲೂ ಅದನ್ನು ಒಪ್ಪಿಕೊಳ್ಳುವ, ಅದಕ್ಕಾಗಿ ಪರಿತಪಿಸುವ ಪ್ರಾಮಾಣಿಕ ಪ್ರಜ್ಞಾವಂತಿಕೆ ಅವರಲ್ಲಿದೆ. ಈ ಎಲ್ಲ ಕಾರಣಗಳಿಂದಾಗಿಯೇ ಇಂದಿನ

**ವಿವಿಧ ಮೂಲಗಳಿಂದ ಸಂಗ್ರಹಿಸಿದ ಸಂದರ್ಶನಗಳ ಸಂಕಲನ**

ಭಾರತೀಯ ರಾಜಕೀಯ ರಂಗದಲ್ಲಿರುವ ವ್ಯಕ್ತಿಗಳಲ್ಲಿ ವಾಜಪೇಯಿ ನಿಜಕ್ಕೂ ಅಪರೂಪದ ವ್ಯಕ್ತಿ. ಅವರು ಕೇವಲ ಪುಟಗೋಸಿ ರಾಜಕಾರಣಿ ಅಲ್ಲ, ಒಬ್ಬ ಜನನಾಯಕ. ದಿಟ್ಟತನವುಳ್ಳ ಧುರೀಣ!

### ಅಟಲ್ ಎಂಬ ಒಗಟು

ಈಗ ದೇಶದಲ್ಲೆಲ್ಲ ವಿಜಯಧ್ವಜ ಮೇಲೇರಿಸಿ ಸಾಗುತ್ತಲಿದೆ ಬಿ.ಜೆ.ಪಿ. ಒಂಬತ್ತು ರಾಜ್ಯಗಳಲ್ಲಿ ಆಡಳಿತ ಪಕ್ಷ ಅಥವಾ ಪ್ರಮುಖ ಪ್ರತಿಪಕ್ಷವಾಗಿದೆ. 'ಅಬ್ ದಿಲ್ಲಿ ದೂರ್ ನಹಿ' ಎಂದು ಬಹಿರಂಗವಾಗಿಯೇ ಘೋಷಿಸುತ್ತಿರುವ ಈ ಪಕ್ಷದ ನೇತಾರ ಅಟಲ್‌ಬಿಹಾರಿ ವಾಜಪೇಯಿ ಓರ್ವ ಸರಳ, ಸಭ್ಯ (ಗೃಹಸ್ಥ? ಅಲ್ಲಲ್ಲ) ಬ್ರಹ್ಮಚಾರಿ!

ಬಿ.ಜೆ.ಪಿ.ಯಲ್ಲಂತೂ ಸರಿಯೆ, ಪ್ರತಿಪಕ್ಷಗಳ ಗೌರವಾದರಗಳಿಗೂ ಪಾತ್ರರಾಗಿರುವ ಅಟಲ್‌ಜಿ ನಿಜಕ್ಕೂ ಅಜಾತಶತ್ರು. ಇಷ್ಟಿದ್ದೂ ಅವರೊಂದು ಒಗಟಾಗಿ ಉಳಿದಿರುವದು ವಿಚಿತ್ರ.

ಜಾತಿವಾದಿ ಎಂದು ಇತರ ಪಕ್ಷಗಳಿಂದ ಹಣೆಪಟ್ಟಿ ಕಟ್ಟಿಸಿಕೊಂಡಿರುವ ಪಕ್ಷದ ಈ ಧುರೀಣನಿಗೆ 'ಜಾತ್ಯತೀತ'ನೆಂದೇ ಖ್ಯಾತಿ. ಲಕ್ಷಾಂತರ ಶ್ರೋತೃಗಳು ಮೈ ಎಲ್ಲ ಕಿವಿಯಾಗಿ ತನ್ನ ಮಾತುಗಳನ್ನೇ ಆಲಿಸುವಂತೆ ಮಾಡಬಲ್ಲ ಈ ಮೋಡಿಗಾರ ಕಿವಿಗೊಡುವುದು ಆತ್ಮಸಾಕ್ಷಿಗೆ ಮಾತ್ರ. ಸದಾ ಪಕ್ಷದ ಕಾರ್ಯಕರ್ತರು, ಜನರೊಂದಿಗೆಯೆ ದಿನ ಗಳೆವ ಈ ಬ್ರಹ್ಮಚಾರಿ ಅಂತರ್ಯದಲ್ಲಿ ಏಕಾಂಗಿ. ಶಿಸ್ತಿಗೆ ಹೆಸರಾಗಿ 'ಏಕಶಿಲೆ' ಎಂದೆನಿಸಿಕೊಂಡ ಪಕ್ಷದ ಉನ್ನತ ಧುರೀಣನಾಗಿದ್ದು ಸರಿ ಕಾಣದ್ದನ್ನು ನೇರವಾಗಿ ಖಂಡಿಸಿ ಸ್ವಪಕ್ಷೀಯರನ್ನು ತಬ್ಬಿಬ್ಬುಗೊಳಿಸುತ್ತ, ಕ್ಷಣಮಾತ್ರದಲ್ಲೇ ಮತ್ತೆ ಹುರಿದುಂಬಿಸಿ ಸರಿದಾರಿಗೆ ತರಲು ಯತ್ನಿಸುತ್ತ ಮುಂದುವರಿದಿರುವ ಈ ಜನನಾಯಕನ ವ್ಯಕ್ತಿತ್ವ ಸ್ಫಟಿಕಸದೃಶವಾಗಿರುವಷ್ಟೇ ನಿಗೂಢವೂ ಸಂಕೀರ್ಣವೂ ಹೌದು.

ಅಟಲ್‌ಬಿಹಾರಿಯವರು ಹುಟ್ಟಿದ್ದು ಕ್ರಿಸ್‌ಮಸ್ ದಿನದಂದು ಅರ್ಥಾತ್ ಡಿಸೆಂಬರ್ ೨೫ರಂದು. ಅವರದು ಗ್ವಾಲಿಯರಿನ ಸುಸಂಸ್ಕೃತ ಮನೆತನ. ಅಜ್ಜ ಮಹಾನ್ ಸಂಸ್ಕೃತ ಪಂಡಿತ. ತಂದೆ ಖ್ಯಾತ ಕವಿ. ಗ್ವಾಲಿಯರ್‌ದಿಂದ ಆಗ್ರಾಕ್ಕೆ ವಲಸೆ ಬಂದ ಈ ಕುಟುಂಬದಲ್ಲಿ ಸ್ವಾತಂತ್ರ್ಯ ಹೋರಾಟದ ವಾಹಿನಿಗೆ ಧುಮುಕಿದ ಮೊದಲ ವ್ಯಕ್ತಿ ಅಟಲ್‌ಜಿ. ಆಗ ೪೨ರ ಚಳವಳಿ ಜೋರು.

"ನನ್ನ ಮೇಲೆ ತಂದೆಯವರ ಪ್ರಭಾವ ಅಪಾರ. ಅವರ ವಾಕ್ಪಟುತ್ವ ಅತ್ಯದ್ಭುತವಾಗಿತ್ತು. ನಾನು ಏನಿದ್ದರೂ ಅವರ ಪ್ರಮಾಣದ ಪ್ರತಿಬಿಂಬ ಮಾತ್ರ" ಎಂದು ಅವರು ನೆನಪಿಸಿಕೊಳ್ಳುತ್ತಾರೆ. ಅಜ್ಜನ ಸಂಸ್ಕೃತ ಪಾಂಡಿತ್ಯ, ಅಪ್ಪನ ಕವಿತ್ವ-ವಾಕ್ಪಟುತ್ವ ಇವರಲ್ಲೂ ಹರಿದು ಬಂದದ್ದೇನೂ ಸುಳ್ಳಲ್ಲ.

"ನಿಮಗೆ ವಿಚಿತ್ರವೆನಿಸಿದರೂ ಸತ್ಯಸಂಗತಿಯೊಂದನ್ನು ಹೇಳುತ್ತೇನೆ. ಮಗ ಕಾನೂನು ಓದಿ ವಕೀಲನಾಗಬೇಕೆಂಬ ಇಚ್ಛೆ ತಂದೆಯವರಿಗೆ. ಅವರಿಗೂ ಕಾನೂನು ಅಧ್ಯಯನ ಇಷ್ಟ. ಹಾಗೆಂದ ಮಾತ್ರಕ್ಕೆ ವಕೀಲನಾಗುವ ಇರಾದೆಯೇನೂ ಅವರಿಗಿರಲಿಲ್ಲ. 'ನೀನು ಕಾನೂನು ಅಭ್ಯಾಸ ಮಾಡುವುದಾದರೆ ನಾನೂ ಜತೆಯಲ್ಲಿ ಓದಬಲ್ಲೆ' ಎಂದು ಅಪ್ಪ ನನಗೆ ಹೇಳಿದ್ದರು. ಇಬ್ಬರೂ ಕೂಡಿ ಕಾಯಿದೆ ಅಭ್ಯಾಸಕ್ಕೆ ತೊಡಗಿದೆವು," ಎನ್ನುವ ವಾಜಪೇಯಿ ಕಾನೂನು ಪದವಿ ಪಡೆಯಲಿಲ್ಲ ಎಂಬುದು ಬೇರೆ ವಿಷಯ.

"ದೇಶ ವಿಭಜನೆಯಿಂದ ವ್ಯಾಕುಲಗೊಂಡಿದ್ದ ನಾನು ವಿದ್ಯಾಭ್ಯಾಸಕ್ಕೆ ವಿದಾಯ ಹೇಳಿ ಸಾರ್ವಜನಿಕ ಸೇವೆಗಾಗಿ ಜೀವನ ಮುಡಿಪಾಗಿಡಲು ನಿರ್ಧರಿಸಿದೆ," ಎನ್ನುತ್ತಾರೆ.

ದೇಶವಿಭಜನೆ ಅವರನ್ನು ಅಕ್ಷರಶಃ ಕದಲಿಸಿ ಬದಲಿಸಿಬಿಟ್ಟಿತು. ಅದಾಗಿರದಿದ್ದರೆ ಇಂದು ಅಟಲ್‌ಜಿ ನಮಗೆ 'ಭಾಜಪ'ದ ಮುಖಂಡರಾಗಿ ತೋರಿಬರುತ್ತಿರಲಿಲ್ಲ. 'ಭಾಕಪ'ದ ಮುಂದಾಳುವಾಗಿ ಕಂಗೊಳಿಸುತ್ತಿದ್ದರು.

"ಹೌದು. ನಾನು ಭಾರತೀಯ ಕಮ್ಯುನಿಸ್ಟ್ ಪಕ್ಷದವನಾಗಿಯೇ ಮುಂದುವರಿದಿರುತ್ತಿದ್ದೆ. ಯಾಕೆಂದರೆ ನನ್ನ ರಾಜಕೀಯ 'ಅರಂಗೇಟ್ರಂ' ಆದದ್ದೇ ಆ ಪಕ್ಷದ ಮೂಲಕ. ಸಿ.ಪಿ.ಐ.ನ ಅಂಗಸಂಸ್ಥೆಯಾದ 'ಅಖಿಲ ಭಾರತ ವಿದ್ಯಾರ್ಥಿ ಒಕ್ಕೂಟ' (A.I.S.F.)ದ ಸದಸ್ಯನಾಗಿ ಕ್ರಿಯಾಶೀಲನಾಗಿದ್ದೆ. ಆದರೇನು ಮಾಡುವುದು? ಅಖಂಡ

**ಹೋಗಲೆಲ್ಲಿಗೆ?**

ಕನಸೊಂದು ಹುಟ್ಟಿ ಸತ್ತಿತು
ಶಿಶಿರದಲ್ಲಿ
ನಂದನವನ ಬರಿದೋ ಬರಿದು
ಉದುರಿದ ಎಲೆಗಳ,
ಬಿದ್ದ ಟೊಂಗೆಗಳ
ಆಯ್ದುಕೊಳ್ಳಲೆ?
ಅಥವಾ
ಹೊಸದೊಂದು ಗೂಡು ಕಟ್ಟಲೆ?
ಇಲ್ಲಿಂದ ಹೋಗಲೆಲ್ಲಿಗೆ ನಾನು?

• ಅಟಲ್ ಬಿಹಾರಿ ವಾಜಪೇಯಿ

ಭಾರತ ಆಗಲೂ ನನ್ನ ಆದರ್ಶವಾಗಿತ್ತು. ಕಮ್ಯುನಿಸ್ಟರು ದೇಶವಿಭಜನೆಯನ್ನು ಸಮರ್ಥಿಸಿ ಬೆಂಬಲಿಸಿದರು. ನಾನು ಆ ಪಕ್ಷದಿಂದ ಹೊರಬಂದೆ. ನಾನು ಎ.ಐ.ಎಸ್.ಎಫ್.ನ ಯುವನೇತಾರನಾಗಿದ್ದಂತೆಯೇ ಕಾಲೇಜಿನಲ್ಲಿ ವಿದ್ಯಾರ್ಥಿ ಸಂಘದ ಪ್ರಧಾನ ಕಾರ್ಯದರ್ಶಿಯೂ ಆಗಿದ್ದೆ." ಅವರು ಆ ನೆನಪುಗಳ ಸುರಳಿ ಬಿಚ್ಚುತ್ತಾರೆ.

ರಾಜಕಾರಣವೇ ತಮ್ಮ ಗುರಿ ಎಂದು ಒಂದೊಮ್ಮೆ ಘೋಷಿಸಿದ್ದ ವಾಜಪೇಯಿ, ಪತ್ರಿಕೋದ್ಯಮದಲ್ಲೂ ಶ್ರಮಿಸಿದರು. 'ರಾಷ್ಟ್ರ ಧರ್ಮ', 'ಸ್ವದೇಶ', 'ಪಾಂಚಜನ್ಯ' ಪತ್ರಿಕೆಗಳಲ್ಲಿ ಕೆಲಸ ಮಾಡಿದ ಅವರು ದಿಲ್ಲಿಯ 'ವೀರ ಅರ್ಜುನ್'ದ ಸಂಪಾದಕರಾಗಿಯೂ ಕಾರ್ಯನಿರ್ವಹಿಸಿದರು. (೧೯೫೨-೫೩) ಈ ಸಂದರ್ಭದಲ್ಲಿಯೇ ಅವರಿಗೆ ಶ್ಯಾಮ್ ಪ್ರಸಾದ ಮುಖರ್ಜಿ ಅವರ ಸಂಪರ್ಕ ಬಂದದ್ದು. ಮುಖರ್ಜಿ ಅವರಿಂದ ಬಹಳಷ್ಟು ಪ್ರಭಾವಿತರಾದ ವಾಜಪೇಯಿ, ಅವರನ್ನು ತಮ್ಮ ಗುರು ಎಂದೇ ಗೌರವಿಸತೊಡಗಿದರು. ಮುಖರ್ಜಿಯವರಿಂದಾಗಿ ವಾಜಪೇಯಿಯವರ ಜೀವನದ ದಿಶೆಯೇ ಸಂಪೂರ್ಣ ಪರಿವರ್ತನೆಗೊಂಡಿತು. 'ಜನಸಂಘ'ದ ಸಂಸ್ಥಾಪಕ ಸದಸ್ಯರಲ್ಲಿ ಒಬ್ಬರಾದ ಅಟಲ್‌ಜಿ ತುರ್ತುಪರಿಸ್ಥಿತಿಯ ನಂತರ ರೂಪುಗೊಂಡ ಜನತಾಪಕ್ಷದ ಸಂಸ್ಥಾಪಕರಲ್ಲಿ ಒಬ್ಬರೂ ಹೌದು. ಕಾಲಾಂತರದಲ್ಲಿ ಜನತಾಪಕ್ಷದಿಂದ ಸಿಡಿದ ಮೂಲ ಜನಸಂಘದ ಮತ್ತೊಂದು ರೂಪವಾಗಿರುವ ಭಾರತೀಯ ಜನತಾ ಪಕ್ಷದ ಹುಟ್ಟಿಗೂ ಅವರು ನೆರವಾದರು.

ದ್ವಿತೀಯ ಲೋಕಸಭೆಯ ಸದಸ್ಯನಾಗಿ ೧೯೫೭ರಲ್ಲಿ ಸಂಸತ್ತು ಪ್ರವೇಶಿಸಿದ ಅವರು, ಎರಡುಬಾರಿ ರಾಜ್ಯಸಭಾ ಸದಸ್ಯರಾಗಿಯೂ ಸೇವೆ ಸಲ್ಲಿಸಿದ್ದಾರೆ. ಮೊರಾರ್ಜಿ ದೇಸಾಯಿ ನೇತೃತ್ವದ ಸಚಿವ ಸಂಪುಟದಲ್ಲಿ ವಿದೇಶಾಂಗ ಸಚಿವರಾಗಿ ಅದ್ಭುತ ಕಾರ್ಯ ನಿರ್ವಹಿಸಿದ ವಾಜಪೇಯಿ ವಿಶ್ವಸಂಸ್ಥೆಯಲ್ಲಿ ಭಾರತದ ನಿಲುವಿಗೆ ಬಲ ತಂದುಕೊಟ್ಟರಲ್ಲದೆ ರಶಿಯ, ಪಾಕಿಸ್ತಾನಗಳಿಗೂ ಭೇಟಿ ನೀಡಿದರು. ಪಾಕಿಸ್ತಾನಕ್ಕೆ ಭೇಟಿ ನೀಡಿದ ಭಾರತೀಯ ವಿದೇಶಾಂಗ ಸಚಿವರಲ್ಲಿ ಅವರೇ ಮೊದಲಿಗರು. ತಮ್ಮ ರಾಜತಾಂತ್ರಿಕ ಪರಿಣತಿಯಿಂದ, ಕುಶಲ ಮಾತುಗಾರಿಕೆಯಿಂದ ಎಲ್ಲರ ಮನಗೆದ್ದ ಈ ಧೀಮಂತ ೧೯೯೧ರಲ್ಲಿ ಆರನೆಯ ಬಾರಿ ಲೋಕಸಭೆ ಪ್ರವೇಶಿಸಿದ್ದೇ ಅಲ್ಲದೆ ಸದ್ಯ ವಿರೋಧ ಪಕ್ಷದ ನಾಯಕನಾಗಿ ಆಡಳಿತಕ್ಕೆ ಅಂಕುಶ ಹಿಡಿದಿದ್ದಾರೆ. ೧೯೯೪ರ 'ವರ್ಷದ ಶ್ರೇಷ್ಠ ಸಂಸದೀಯ ಪಟು' ಪ್ರಶಸ್ತಿಗೂ ಅವರು ಪಾತ್ರರು. ಅರ್ಧಶತಮಾನದಿಂದ ರಾಜಕೀಯ ರಂಗದಲ್ಲಿ ಮಿನುಗುತ್ತಿರುವ ವಾಜಪೇಯಿ, ಸಂಸತ್ತಿನಲ್ಲಿ ಕಳೆದದ್ದು ೩೮ ವರ್ಷಗಳಿಗೂ ಹೆಚ್ಚು ಕಾಲ.

ಈಗ ೭೦ರ ಗಡಿಯಲ್ಲಿರುವ ಈ ಹಿರಿಯ ರಾಜಕಾರಣಿ ನೋಡಲು ಹಾಸ್ಯ ಕವಿಯಂತೆ ಕಾಣುತ್ತಾರೆ. ಅವರೊಬ್ಬ ಒಳ್ಳೆಯ ಕವಿಯೂ ಹೌದು. ಈ ಹಿಂದೆ ಓರ್ವ ಪತ್ರಕರ್ತ ಅವರನ್ನು 'ಡೊಣ್ಣ ಮೆಣಸಿನಕಾಯಿ'ಗೆ ಹೋಲಿಸಿದ್ದೂ ಉಂಟು. ಹೊರನೋಟದಲ್ಲಿ ಭಯಂಕರ ಖಾರವೇನೋ ಎನಿಸಿದರೂ ಒಳಗೆ ಮಾತ್ರ ಮೃದುವಾಗಿ ವಿಶಿಷ್ಟ ರುಚಿಯದಾಗಿರುವ ಡೊಣ್ಣ ಮೆಣಸಿನಕಾಯಿಯಂತೆ, ಅಬ್ಬರದ ಈ ಮಾತುಗಾರ ಅಂತರ್ಯದಲ್ಲಿ ಮೌನಿ. ಕಾರ್ಯಕರ್ತರು, ಅಭಿಮಾನಿಗಳ ನಡುವೆಯೇ ದಿನಗಳೆದರೂ ವಾಜಪೇಯಿ ನಿಜಕ್ಕೂ ಏಕಾಂಗಿ.

ಭಾರತದ ಪ್ರಸಕ್ತ ರಾಜಕಾರಣದಿಂದ ಅವರಿಗೆ

ಭ್ರಮನಿರಸನ ಉಂಟಾಗಿದೆಯೆ? ಅವರ ಕೆಲ ಹೇಳಿಕೆಗಳಿಂದ ಹಾಗೆ ಅನ್ನಿಸುವುದಿದೆ. ರಾಜಕೀಯದಲ್ಲಿ ಹೆಚ್ಚುತ್ತಿರುವ ಭ್ರಷ್ಟಾಚಾರ, ಸ್ವಪ್ರತಿಷ್ಠೆ ಹಾಗೂ ಸ್ವಾರ್ಥಪರತೆ ಅವರಲ್ಲಿ ಆಕ್ರೋಶ ಹುಟ್ಟಿಸಿವೆ.

"ಈಗ ರಾಜಕಾರಣ ಒಂದು ವೃತ್ತಿಯಾಗಿದೆ. ಇದು ವಿಷಾದಿಸಬೇಕಾದ ಸಂಗತಿ. ಉನ್ನತ ಧುರೀಣರಲ್ಲಿ ಕೇಂದ್ರಿಕೃತವಾಗುತ್ತಿರುವ ಅಧಿಕಾರ ಅಪಾಯಕಾರಿ. ಜವಾಹರಲಾಲ ನೆಹರೂ ಅವರ ಕಾಲದಲ್ಲಿ ರಾಜ್ಯಗಳ ರಾಜಕೀಯ ಪಟುಗಳು ಅವರನ್ನು ಸಲೀಸಾಗಿ ಭೆಟ್ಟಿ ಆಗಬಹುದಿತ್ತು. ಆದರೆ ಅದೇ ಅವರ ಮಗಳು ಪ್ರಧಾನಿಯಾಗಿದ್ದ ಸಂದರ್ಭದಲ್ಲಿ? ಮುಖ್ಯಮಂತ್ರಿಯೊಬ್ಬರಿಗೆ ಭೇಟಿಯ ಅವಕಾಶವನ್ನೇ ನಿರಾಕರಿಸಲಾಯಿತಲ್ಲ!

"ನೆಹರೂ ಸಂಪುಟದಲ್ಲಿ ತೈಲೋದ್ಯಮ ಸಚಿವರಾಗಿದ್ದ ಕೆ.ಡಿ. ಮಾಳವೀಯ ಅವರ ಮೇಲೆ ಒಮ್ಮೆ ಭ್ರಷ್ಟಾಚಾರದ ಅಪಾದನೆ ಮಾಡಲಾಯಿತು. ಅದೂ ನೇರವಾಗಿ ಅವರ ವಿರುದ್ಧವೂ ಅಲ್ಲ, ಅವರ ಆಪ್ತ ಸಹಾಯಕರೊಬ್ಬರು ಕಲಕತ್ತಾ ಮೂಲದ ಕಂಪನಿಯೊಂದರಿಂದ ಹತ್ತು ಸಾವಿರ ರೂಪಾಯಿ ಲಂಚ ಪಡೆದಿದ್ದರೆಂಬುದೇ ಆ ಆರೋಪವಾಗಿತ್ತು. ಈ ಬಗ್ಗೆ ವಿಚಾರಣೆಯೂ ಆಯಿತು. ರಾಜೀನಾಮೆ ನೀಡುವಂತೆ ಮಾಳವೀಯ ಅವರಿಗೆ ಸೂಚನೆಯೂ ಹೋಯಿತು. ಇದೆಲ್ಲ ಅಂದಿನ ಮಾತು. ಆದರೆ ಈಗ? ಯಾರ ವಿರುದ್ಧವಾದರೂ ಭ್ರಷ್ಟಾಚಾರ, ಲಂಚ, ರುಷುವತ್ತುಗಳ ಆರೋಪ ಬಂದರೆ ಅದು ಕನಿಷ್ಠ ಕೋಟಿ ರೂಪಾಯಿಗಳನ್ನು ಒಳಗೊಂಡಿರುತ್ತದೆ. ಆದಾಗ್ಯೂ ಯಾರ ವಿರುದ್ಧವೂ ಯಾವ ಕ್ರಮವನ್ನೂ ಕೈಗೊಳ್ಳುವದಿಲ್ಲ. ಮೊದಲು ಆರೋಪ ನಿರಾಕರಣೆ, ನಂತರ ವಿಚಾರಣೆಯ ಭರವಸೆ, ಸಮಿತಿಗಳ ರಚನೆ, ವರದಿ ಸಲ್ಲಿಕೆ ಆ ಬಗ್ಗೆ ಬಿರುಸಿನ ಚರ್ಚೆ.... ಬರೀ ಇಂತಹದರಲ್ಲಿಯೇ ದೇಶದ, ಸಂಸತ್ತಿನ ಅಮೂಲ್ಯ ವೇಳೆ ಹಾಳಾಗುತ್ತಿದೆಯೇ ವಿನಾ ಯಾವ ಇತ್ಯರ್ಥವೂ ಆಗುವದಿಲ್ಲ. ಆಪಾದನೆಗೊಳಗಾದವರು ಎಂದಿನ ಹುದ್ದೆಗಳಲ್ಲಿಯೇ ಮುಂದುವರೆದಿರುತ್ತಾರೆ, ಎಂದಿನಂತೆಯೇ ಇರುತ್ತಾರೆ. ಹೇಳಿಕೆ- ಪ್ರತಿಹೇಳಿಕೆಗಳ ಸಮರದಲ್ಲಿ ರಾಜಕೀಯ ಪಕ್ಷಗಳು ಬಸವಳಿಯುತ್ತವೆ. ಅಷ್ಟರಲ್ಲಿ ಮತ್ತೆ ಚುನಾವಣೆ ಬರುತ್ತದೆ. ಪಕ್ಷಗಳೊಂದಿಗೆ ಜನತೆಯೂ ಆರೋಪ-ಅಪಾದನೆಗಳ ಬಗ್ಗೆ ಬಿಸಿಬಿಸಿ ಚರ್ಚೆ ನಡೆಸುತ್ತದೆ. ಕಾಲ ಉರುಳುತ್ತದೆ. ಎಲ್ಲರೂ ಎಲ್ಲವನ್ನೂ ಮರೆಯುತ್ತಾರೆ. ಇದು ಅವನತಿಯ ಪರಾಕಾಷ್ಠೆ. ಇದರಿಂದ ದೇಶವನ್ನು ಮೇಲಕ್ಕೆತ್ತುವವರು ಯಾರು? ಈ ಸ್ಥಿತಿಯಿಂದ ಎಲ್ಲಿದೆ ಬಿಡುಗಡೆ? ಎಲ್ಲಿದೆ ಸಮಸ್ಯೆಗಳಿಗೆ ಪರಿಹಾರ?" ವಾಜಪೇಯಿ ಕ್ರುದ್ಧರಾಗಿ ಪ್ರಶ್ನಿಸುತ್ತಾರೆ.

"ಜಾತಿವಾದದ ವಿರೋಧಿ ನಾನು. ಜಾತ್ಯತೀತತೆ ಎಂದು ದೊಡ್ಡ ದೊಡ್ಡ ಮಾತಾಡುವವರೆಲ್ಲ ಮಿಥ್ಯಾಜಾತ್ಯತೀತವಾದಿಗಳು. ಅಂಥವರ ಬಣ್ಣ ಬಯಲಿಗೆಳೆಯುತ್ತಲೇ ಬಂದಿದ್ದೇನೆ. ನನ್ನ ಪಕ್ಷದಲ್ಲಿಯೇ ಇರುವ ಕಠೋರವಾದಿಗಳನ್ನೂ ನಾನು ಬಿಟ್ಟಿಲ್ಲ," ಎನ್ನುವ ಈ ಮಧ್ಯಮವರ್ಗದ ಉದಾರವಾದಿ, "ಆರ್ಥಿಕ ಉದಾರೀಕರಣ ನೀತಿಯು ಆಂತರಿಕವಾಗಿ ಅನ್ವಯವಾಗಬೇಕೇ ಹೊರತು ಬಹುರಾಷ್ಟ್ರೀಯ ಕಂಪನಿಗಳನ್ನು ಸ್ವಾಗತಿಸುವ ರತ್ನಗಂಬಳಿಯಾಗಬಾರದು," ಎಂಬ ನಿಲುವು ಅವರದು.

## "ನನ್ನ ತಂದೆ-ತಾಯಿ ಯಾರೂ ಪ್ರಧಾನಿ ಅಲ್ಲ"

ಜನತಾ ಪಕ್ಷದಿಂದ ಹೊರಬಂದ ನಂತರ ಬಿ.ಜೆ.ಪಿ. ಸ್ಥಾಪನೆಯಾದ ಸಂದರ್ಭ ಅದು. ದೇಶಾದ್ಯಂತ ಅಟಲ್‌ಬಿಹಾರಿ ವಾಜಪೇಯಿ ಅವರನ್ನು 'ಭಾವಿ ಪ್ರಧಾನಿ' ಎಂದೇ ಭಾವಿಸಲಾಗಿತ್ತು. ಸಾರ್ವಜನಿಕ ಸಭೆಗಳಲ್ಲೆಲ್ಲ ಅವರನ್ನು ಹಾಗೆಂದು ಸಂಬೋಧಿಸುವದು ವಾಡಿಕೆ ಎಂಬಷ್ಟು ಬಳಕೆಯಲ್ಲಿ ಬಂದಿತ್ತು. ಆದರೆ, ಈ ಸಮಚಿತ್ತದ ಧುರೀಣ ಈ ವಿಶೇಷಣವನ್ನು ವಿನಯಪೂರ್ವಕವಾಗಿಯೇ ತಳ್ಳಿಹಾಕುತ್ತಿದ್ದರು.

"ನನ್ನ ತಂದೆ ಪ್ರಧಾನಿಯಾಗಿರಲಿಲ್ಲ, ನನ್ನ ತಾಯಿ ಪ್ರಧಾನಮಂತ್ರಿಯಾಗಿರಲಿಲ್ಲ. ಅಂದ ಮೇಲೆ ನಾನು ಅದು ಹೇಗೆ ಪ್ರಧಾನಿಯಾಗಲು ಸಾಧ್ಯ?" ಎಂದು ವ್ಯಂಗ್ಯದ ಬಾಣ ಎಸೆಯುತ್ತಿದ್ದ

ಅಟಲ್‌ಜಿ, "ಮುಂದಿನ ಪ್ರಧಾನಿ ಯಾರೆಂಬ ಬಗ್ಗೆ ಜಿಜ್ಞಾಸೆ ನಡೆಸುವದಕ್ಕಿಂತ ದೇಶದ ಭವಿತವ್ಯದ ಬಗ್ಗೆ ತಲೆಕೆಡಿಸಿಕೊಳ್ಳುವ ಅಗತ್ಯ ಈಗಿದೆ," ಎಂದು



ಜನತೆಯನ್ನು ಎಚ್ಚರಿಸುತ್ತಿದ್ದರು. ಆಗೆಲ್ಲ ಅವರು ಬಿಡಿಸಿಡುತ್ತಿದ್ದ 'ಭಾರತದ ಚಿತ್ರ' ಭೀಕರವಾಗಿರುತ್ತಿತ್ತು.

ಅಧಿಕಾರ-ರಾಜಕಾರಣದ ಬೆನ್ನು ಹತ್ತದ ವಾಜಪೇಯಿ ಇತ್ತೀಚಿನ ಕೆಲ ಧುರೀಣರಂತೆ ಪಕ್ಷಾಂತರ ಮನೋಭಾವದವರಾಗಿದ್ದರೆ ಶಾಶ್ವತವಾಗಿ ಸಚಿವರಾಗಿರಬಹುದಿತ್ತೇನೋ? ಆದರೆ ಈ ನಿಸ್ವಾರ್ಥಿ ಧುರೀಣ ತಾವು ನಂಬಿದ ತತ್ವ, ಸಿದ್ಧಾಂತಗಳಿಗೆ ಬೆಲೆ ನೀಡುವ ಸ್ವಭಾವದವರೇ ವಿನಾ ಅಧಿಕಾರಕ್ಕೆ ತಲೆಬಾಗಿ ತತ್ವಗಳನ್ನು ಗಾಳಿಗೆ ತೂರುವವರಲ್ಲ. ಗಾಳಿ ಬಿಟ್ಟ ಕೈಯಲ್ಲಿ ತೂರಿಕೊಳ್ಳುವವರೂ ಅಲ್ಲ.

ಜನತೆಯ ನಾಡಿ ಮಿಡಿತವನ್ನು ಅರಿತುಕೊಳ್ಳುವಲ್ಲಿ ಸಿದ್ಧಹಸ್ತರಾಗಿರುವ ಅಟಲ್‌ಬಿಹಾರಿ ವಾಜಪೇಯಿ ಅವರು ತಾವು ಅಧ್ಯಕ್ಷರಾಗಿದ್ದ ಸಂದರ್ಭದಲ್ಲಿ ಬಿ.ಜೆ.ಪಿ.ಗೆ ಸಮಾಜವಾದದ ಕವಚ ತೊಡಿಸಿದರು. ಮುಂಬಯಿಯಲ್ಲಿ ಜರುಗಿದ ಮಹಾಧಿವೇಶನದಲ್ಲಿ (ಎಂ.ಸಿ.ಛಗಲಾ ಮಂಟಪ) ಗಾಂಧಿ ಪ್ರಣೀತ ಸಮಾಜವಾದವನ್ನು ಪಕ್ಷ ಘೋಷಿಸಿತು. ಇದು ವಾಜಪೇಯಿ ಅವರ ಸಾಧನೆ.

ಸಂಸತ್ತಿನಲ್ಲಿ ಅವರು ಮಾಡಿದ ಕೆಲ ಭಾಷಣಗಳು ಅತ್ಯಂತ ವಿಚಾರಪ್ರಚೋದಕವಾಗಿವೆ. ಅಲ್ಲಿ ಬರಿ ಶಬ್ದಾಡಂಬರವಿಲ್ಲ, ಅನಗತ್ಯ ಭಾವಾವೇಶವಿಲ್ಲ, ನಮ್ಮ ದೂರದರ್ಶನ 'ಸರಕಾರಿ' ನಿಯಂತ್ರಣದಲ್ಲಿದ್ದರೂ ಕೂಡಾ ಒಮ್ಮೆ ಲೋಕಸಭೆಯಲ್ಲಿ ಅವರ ಮಾಡಿದ ಭಾಷಣವನ್ನು ಇಡಿಯಾಗಿ ಪ್ರಸಾರ ಮಾಡಿದಾಗ ವೀಕ್ಷಕರಿಗೇ ಅಚ್ಚರಿಯಾಯಿತು. ಆ ಭಾಷಣ ಕೇಳಿ ಅಷ್ಟೇ ಸಂತೋಷವೂ ಆಯಿತು.

ಗುಣಗ್ರಾಹಿಯಾಗಿರುವ ವಾಜಪೇಯಿ ಅವರು ಅಪ್ರತಿಮ ಸಂಸದೀಯ ಪಟುಗಳ ಪಟ್ಟಿಯನ್ನೇ ನಿಮ್ಮ ಮುಂದೆ ಇಡುತ್ತಾರೆ. ಜವಾಹರಲಾಲ್ ನೆಹರೂ, ಗೋವಿಂದ ವಲ್ಲಭ ಪಂತ್ ಹೀರೇನ್ ಮುಖರ್ಜಿ, ಶ್ಯಾಮ ಪ್ರಸಾದ ಮುಖರ್ಜಿ ಮುಂತಾದವರ ಮಾತುಗಾರಿಕೆ ಅಪ್ರತಿಮವಾಗಿತ್ತು ಎಂದು ಅವರು ಅಂದಿನ ದಿನಗಳ ಆ ಅಮೋಘ ಭಾಷಣಗಳ ಮೆಲುಕು ಹಾಕುತ್ತಾರೆ.

## ಕೊನೆಯವರೆಗೂ ಹೋರಾಟ

ಇಷ್ಟೆಲ್ಲ ಏರಿಳಿತ, ಭ್ರಮನಿರಸನ, ವಿಷಾದಗಳ ಮಧ್ಯೆಯೂ "ನಾನು ಈಗಲೇ ರಾಜಕೀಯದಿಂದ

# ವಿಮಾನ ಅಪಹರಣದ ಕತೆ

೧೯೯೩ರ ಜನವರಿ ೨೨.

ಪಕ್ಷದ ಸಂಘಟನೆ, ಸಂಸದೀಯ ಬಿಕ್ಕಟ್ಟು, ಅಂತಾರಾಷ್ಟ್ರೀಯ ಕಗ್ಗಂಟು..... ಹೀಗೆ ಹಲವು ಹನ್ನೆರಡು ಸಂದರ್ಭಗಳಲ್ಲಿ ತಮ್ಮ ಕೌಶಲಪೂರ್ಣ ಮಾತುಗಾರಿಕೆ, ನಿಶಿತಬುದ್ಧಿ ಹಾಗೂ ಸಾತ್ವಿಕ ವಿವೇಚನೆ ಮೆರೆದ ಅಟಲ್‌ಜಿ ಅಂದು ಓರ್ವ ವಿಮಾನ ಅಪಹರಣಕಾರನೊಂದಿಗೆ ಸಂಧಾನಕ್ಕೆ ಮುಂದಾಗಬೇಕಾಯಿತು. ಅಪಹರಣಕಾರ ಅವಾಕ್ಕಾದನಷ್ಟೇ ಅಲ್ಲ, ವಾಜಪೇಯಿಯವರಿಗೆ ಶರಣು ಬಂದ!

''ಸಾಮಾನ್ಯವಾಗಿ ಇಂಥ ಸಂದರ್ಭಗಳಲ್ಲಿ ಸಂಧಾನದ ಮಾತುಕತೆ ದಿನಗಟ್ಟಲೆ ನಡೆಯುತ್ತದೆ. ಆತಂಕವೇ ಅಲ್ಲೆಲ್ಲ ತಾಂಡವವಾಡುತ್ತಿರುತ್ತದೆ. ಆದರೆ ಲಖನೌ ವಿಮಾನ ನಿಲ್ದಾಣದಲ್ಲಿ ನಾನು ಏಳೇ ನಿಮಿಷಗಳಲ್ಲಿ ಕಾರ್ಯಾಚರಣೆ ಮುಗಿಸಿದೆ. ನನ್ನ ಬಳಿ ಇದ್ದದ್ದು ಕೇವಲ ಮಾತಿನ ಮುಕ್ತಾಫಲ,'' ಎಂದು ಅವರು ತಮಾಷೆ ಮಾಡುತ್ತಾರೆ.

''ಲಖನೌದಿಂದ ಅಂದು ರೈಲು ಮೂಲಕ ನಾನು ದಿಲ್ಲಿಗೆ ಹೋಗಬೇಕಾಗಿತ್ತು. ಪ್ರಯಾಣಕ್ಕೆ ಸ್ವಲ್ಪ ಸಮಯ ಮುಂಚೆ, ನಾನಿಳಿದಿದ್ದ ಅತಿಥಿಗೃಹಕ್ಕೆ ಲಖನೌ ಜಿಲ್ಲಾಧಿಕಾರಿ ಅಶೋಕ ಪ್ರಿಯದರ್ಶಿ ಅವರು ಫೋನ್ ಮಾಡಿ, 'ವಿಮಾನ ನಿಲ್ದಾಣದಲ್ಲಿ ಒಂದು ಗಂಭೀರ ಸಮಸ್ಯೆ ತಲೆದೋರಿದ್ದು ಯಾವುದೇ ಸಂದರ್ಭದಲ್ಲಿ ನಿಮ್ಮ ನೆರವು ಬೇಕಾಗಬಹುದು ಸರ್. ಆದ್ದರಿಂದ ಇಲ್ಲಿಯೇ ಉಳಿದು ಬಿಡಿ,' ಎಂದು ಕೋರಿದರು. ಸಮಸ್ಯೆ ಏನೆಂಬುದು ತಿಳಿಯದಿದ್ದರೂ ಜಿಲ್ಲಾಧಿಕಾರಿಯ ವಿನಂತಿಯಂತೆ ನಾನು ಪ್ರಯಾಣ ರದ್ದು ಪಡಿಸಿ ಅತಿಥಿಗೃಹದಲ್ಲಿಯೇ ಉಳಿದೆ.

''ಕೆಲ ಸಮಯದ ನಂತರ ಆಗಮಿಸಿದ ಜಿಲ್ಲಾಧಿಕಾರಿಯೊಂದಿಗೆ ವಿಮಾನ ನಿಲ್ದಾಣಕ್ಕೆ ಹೊರಟೆ. ದಾರಿಯಲ್ಲಿ ವಿಮಾನ ಅಪಹರಣದ ಸಾದ್ಯಂತ ವಿವರಣೆ ನೀಡಿದರು,'' ವಾಜಪೇಯಿ ನೆನಪಿಸಿಕೊಂಡರು.

ಸಂಜೆ ೫-೫ಕ್ಕೆ ಲಖನೌದಿಂದ ದಿಲ್ಲಿಗೆ ಹೊರಟಿದ್ದ ವಿಮಾನ ಅದು. ಸುಲ್ತಾನಪುರದ ಸತೀಶಚಂದ್ರ ಪಾಂಡೆ ಎಂಬ ಯುವಕ ಮಾರ್ಗ ಮಧ್ಯದಲ್ಲಿ ಬಾಂಬ್ ಬೆದರಿಕೆ ಒಡ್ಡಿ ಅಪಹರಿಸಿ ವಿಮಾನವನ್ನು ಲಖನೌಕ್ಕೆ ಮರುಳುವಂತೆ ಮಾಡಿದ್ದ. ಅಯೋಧ್ಯೆಯಲ್ಲಿ ರಾಮಮಂದಿರ ನಿರ್ಮಾಣ, ಆರ್.ಎಸ್.ಎಸ್., ವಿಶ್ವ ಹಿಂದೂ ಪರಿಷತ್ ಹಾಗೂ ಬಜರಂಗದಳಗಳ ಮೇಲೆ ಆಗ ವಿಧಿಸಲಾಗಿದ್ದ ನಿಷೇಧ ವಾಪಸಾತಿ ಇವೇ ಮೊದಲಾದವು ಆತನ ಬೇಡಿಕೆಗಳು ಹಿರಿಯ ಅಧಿಕಾರಿಗಳು ಎಷ್ಟೇ ಮನವೊಲಿಸುವ ಯತ್ನ ನಡೆಸಿದರೂ ಜಗ್ಗದ ಆತ ಕೊನೆಕೊನೆಗೆ ತಾನು ಶರಣಾಗತನಾಗುವದಾದರೆ ಕೇವಲ ವಾಜಪೇಯಿ ಅವರಿಗೆ ಮಾತ್ರ ಎಂದು ಘೋಷಿಸಿದ್ದ. ವಾಜಪೇಯಿ ಅವರು ಆಗ ಲಖನೌದಲ್ಲಿಯೇ ಇದ್ದದ್ದು ಜಿಲ್ಲಾಧಿಕಾರಿಯಲ್ಲಿ ಹೊಸ ಆಶೆ ಚಿಗುರಿಸಿತ್ತು.

''ನಾನು ನಿಲ್ದಾಣ ತಲುಪಿದಾಗ ರಾತ್ರಿ ೯ ಗಂಟೆ. ವಿಮಾನ ನಿಲ್ದಾಣದಲ್ಲೆಲ್ಲ ಕಡುಗತ್ತಲು. ೯-೧೦ಕ್ಕೆ ಕಂಟ್ರೋಲ್ ರೂಮ್ ಪ್ರವೇಶಿಸಿದ ನಾನು ಅಲ್ಲಿಂದಲೇ ವಿಮಾನದಲ್ಲಿದ್ದ ಅಪಹರಣಕಾರನನ್ನು ಸಂಪರ್ಕಿಸಿದೆ. ಮೊದಲು ನನ್ನ ಧ್ವನಿಯನ್ನು ಗುರುತಿಸದ ಆ ಯುವಕ ನಂತರ 'ಕತ್ತಲೆಯಲ್ಲಿ ವ್ಯವಹಾರ ಅಸಾಧ್ಯವಾದುದರಿಂದ ಬೆಳಗ್ಗೆ ಮಾತುಕತೆ ಮುಂದುವರೆಸಬೇಕು' ಎಂದು ಹಠ ಹಿಡಿದ. 'ಬೆಳಗಿನವರೆಗೆ ಇಲ್ಲಿರಲು ನನ್ನಿಂದ ಆಗದು. ನಾನೇ ವಿಮಾನದೊಳಗೆ ಬರುತ್ತೇನೆ' ಎಂದೆ. ಮೊದಲು ಈ ಸೂಚನೆಗೆ ನಕಾರ ಸೂಚಿಸಿದ ಅಪಹರಣಕಾರ 'ನೀವೊಬ್ಬರೇ ಬರಬೇಕು' ಎಂಬ ಕರಾರನ್ನೊಡ್ಡಿದ. ಆದರೂ ರಾಜ್ಯಪಾಲರ ಸಲಹೆಗಾರರಾಗಿದ್ದ ಬಿ.ಕೆ.ಗೋಸ್ವಾಮಿ, ಜಿಲ್ಲಾಧಿಕಾರಿ ಅಶೋಕ ಪ್ರಿಯದರ್ಶಿ ಹಾಗೂ ಉತ್ತರ ಪ್ರದೇಶ ಬಿ.ಜೆ.ಪಿ. ಘಟಕದ ಅಧ್ಯಕ್ಷ ಕಲರಾಜ್ ಮಿಶ್ರಾ ಅವರೊಂದಿಗೆ ಅರ್ಧ ಕಿಲೋಮೀಟರ್ ದೂರದಲ್ಲಿದ್ದ ವಿಮಾನದತ್ತ ಕಾರಿನಲ್ಲಿ ತೆರಳಿದೆ.

''ವಿಮಾನದ ಕಾಕ್‌ಪಿಟ್ ಬಳಿಯ ಬಾಗಿಲಲ್ಲಿ ಅಪಹರಣಕಾರ ನಿಂತಿದ್ದ. ಆ ಕತ್ತಲೆಯಲ್ಲಿ ನನ್ನನ್ನು ಗುರುತಿ

ಸಲು ಸಾಧ್ಯವಾಗದ್ದರಿಂದ ಆ ಯುವಕ ವಿಮಾನದಲ್ಲಿದ್ದ ಪ್ರಯಾಣಿಕನೊಬ್ಬನ ನೆರವಿನಿಂದ ನಾನೇ ವಾಜಪೇಯಿ ಎಂಬುದನ್ನು ಖಚಿತಪಡಿಸಿಕೊಂಡು ಮಾತುಕತೆಗೆ ಆರಂಭಿಸಿದ. ತನ್ನ ಬೇಡಿಕೆಗಳಿಗೆ ಆತ ಬಲವಾಗಿ ಅಂಟಿಕೊಂಡಂತಿದ್ದ. 'ನಿನ್ನ ಬೇಡಿಕೆಗಳೇನೇ ಇರಲಿ, ನೀನು ಆಯ್ದುಕೊಂಡ ವಿಧಾನ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸರಿಯಾದುದಲ್ಲ' ಎಂದು ಅವನಿಗೆ ಹೇಳಿದೆ. ಅವನು ಹಠ ಬಿಡದಿದ್ದಾಗ 'ಅನಗತ್ಯವಾಗಿ ಮುಗ್ಧ ಪ್ರಯಾಣಿಕರಿಗೆ ತೊಂದರೆ ಕೊಡುವದು ಸರಿಯಲ್ಲ' ಎಂದು ಹೇಳಿದೆ.

"ಸ್ವಲ್ಪ ಮೆತ್ತಗಾದಂತೆ ಕಂಡ ಆ ಯುವಕ ನಾನು ವಿಮಾನದೊಳಗೆ ಬರಲು ಸಮ್ಮತಿಸಿದ.

"ಅಲ್ಲಿಯೂ ಅವೇ ಬೇಡಿಕೆಗಳ ಗಿಳಿಪಾಠದ ಜೊತೆಗೆ ತತ್‌ಕ್ಷಣಕ್ಕೆ ತೋಚಿದ ಬೇರೆ ಬೇಡಿಕೆಗಳನ್ನು ಮುಂದಿಟ್ಟ. 'ಈ ಬೇಡಿಕೆಗಳು ಈಡೇರದಿದ್ದರೆ ನನ್ನ ಬಳಿ ಇರುವ ಬಾಂಬನ್ನು ಈಗಿಂದೀಗಲೇ ಸ್ಫೋಟಿಸುವೆ' ಎಂದು ಬೆದರಿಕೆ ಹಾಕಿದ. ನಾನು 'ಒಂದೊ, ನಿನ್ನೊಂದಿಗೆ ಈ ವಿಮಾನದಿಂದ ನಾನು ಹೊರ ನಡೆಯಬೇಕು ಇಲ್ಲವೆ, ನೀನೂ ಸೇರಿದಂತೆ ಇಲ್ಲಿಯವವರೊಂದಿಗೆ ನಾನು ಬಾಂಬಿಗೆ ಬಲಿಯಾಗಬೇಕು' ಎಂದು ದೃಢವಾಗಿ ಹೇಳಿಬಿಟ್ಟೆ. ಪ್ರಾಯಶಃ ಈ ಮಾತು ಅವನ ಮೇಲೆ ಪರಿಣಾಮ ಬೀರಿರಬೇಕು. ಶರಣಾಗತನಾಗಲು ಮುಂದಾದ ಆ ಅಪಹರಣಕಾರ ತನ್ನ ಬಳಿ ಇರುವುದು ನಿಜವಾದ ಬಾಂಬ್ ಅಲ್ಲವೇ ಅಲ್ಲ; ಅದೊಂದು ಬಾಂಬಿನಾಕಾರದ, ದಾರ ಸುತ್ತಿದ್ದ, ಹಿಟ್ಟಿನ ಮುದ್ದೆ ಮಾತ್ರ ಎಂದು ಹೇಳಿದ! ಅನಂತರ ಪ್ರಯಾಣಿಕರಿಗೆ 'ನೀವೆಲ್ಲ ಈಗ ಮುಕ್ತರು' ಎಂದು ಘೋಷಿಸಿ ನನ್ನೊಂದಿಗೆ ವಿಮಾನದಿಂದ ಕೆಳಗಿಳಿದ.

"ಇದಿಷ್ಟು ವಿಮಾನಾಪಹರಣವೊಂದು ಸುಖಾಂತ ಕಂಡ ಕಥೆ. ಅನಂತರದ ವಿಚಾರಣೆಯಲ್ಲಿ ಆ ಯುವಕ ನಿವೃತ್ತ ಮೇಜರ್ ಒಬ್ಬರ ಮಗನೆಂದೂ, ಅವನೆಂದೂ ಬಿ.ಜೆ.ಪಿ. ಅಥವಾ ಆರ್.ಎಸ್.ಎಸ್. ಕಾರ್ಯಕರ್ತನಾಗಿರಲಿಲ್ಲವೆಂದೂ ಕೇವಲ ದಿಢೀರ್ ಖ್ಯಾತಿಗಾಗಿ ಈ ಸಾಹಸಕ್ಕೆ ಕೈ ಹಾಕಿದ್ದನೆಂದೂ ತಿಳಿದುಬಂತು."

ಮಾತು ಬಲ್ಲ ವಾಜಪೇಯಿ ಹಲವರ ಆತಂಕ ದೂರಮಾಡಿದ ಈ ಪ್ರಸಂಗ ಅವಿಸ್ಮರಣೀಯ.

ನಿವೃತ್ತನಾಗುವದಿಲ್ಲ. ಕೊನೆಯವರೆಗೂ ಹೋರಾಡುವೆ" ಎಂಬುದು ಈ ಹುಟ್ಟು ಹೋರಾಟಗಾರನ ಘೋಷಣೆ.

"ಹೋರಾಟ? ಯಾರ ವಿರುದ್ಧ? ಎಲ್ಲಿಯವರೆಗೆ?"

ಈ ಎಲ್ಲ ಪ್ರಶ್ನೆಗಳಿಗೂ ಅವರ ಉತ್ತರ ಪುಂಖಾನುಪುಂಖವಾಗಿ ಹೊರಹೊಮ್ಮುತ್ತದೆ:

"ಇಡೀ ವ್ಯವಸ್ಥೆಯ ವಿರುದ್ಧ" ಎಂದು ಆಕ್ರೋಶ ವ್ಯಕ್ತಪಡಿಸುತ್ತಾರೆ. "ಸಾಮಾಜಿಕ-ರಾಜಕೀಯ-ಆರ್ಥಿಕ ವ್ಯವಸ್ಥೆಗಳ ಸುಧಾರಣೆಯೊಂದಿಗೆ ಚುನಾವಣಾ ವ್ಯವಸ್ಥೆಯಲ್ಲಿಯೂ ಸುಧಾರಣೆ ಅತ್ಯಗತ್ಯ" ಎನ್ನುತ್ತಾರೆ ವಾಜಪೇಯಿ.

"ಚುನಾವಣಾ ನಿಯಮಗಳಲ್ಲಿ ಆಮೂಲಾಗ್ರ ಬದಲಾವಣೆ ಆಗಬೇಕು. ಚಲಾಯಿಸಲ್ಪಟ್ಟದ್ದರಲ್ಲಿ ಕನಿಷ್ಠ ಶೇಕಡಾ ೫೦ರಷ್ಟು ಮತ ಪಡೆದ ಅಭ್ಯರ್ಥಿ ಮಾತ್ರ 'ಜಯಶಾಲಿ' ಎಂದು ಘೋಷಿಸಲ್ಪಡುವಂತಾಗಬೇಕು. ತಮಗೆ ಬೇಡವಾದ ಅಭ್ಯರ್ಥಿಗಳಿಗೆ ನಕಾರಾತ್ಮಕ ಮತ ನೀಡುವ ಅಧಿಕಾರವೂ ಮತದಾರನಿಗೆ ಇರಬೇಕು. ಚುನಾವಣಾ ಕಣಗಳೆಂದರೆ ಕಾಳಧನ ಚಲಾವಣೆಯ ಮಾರುಕಟ್ಟೆಗಳಂತಾಗಿದ್ದು ಚುನಾವಣೆಯಲ್ಲಿ ಹಣದ ಪ್ರಭಾವವನ್ನು ಅಳಿಸಿಹಾಕಬೇಕು," ಹೀಗೆ ಹತ್ತು ಹಲವಾರು ಸುಧಾರಣೆಗಳನ್ನು ಜಾರಿಗೊಳಿಸುವ ತವಕ ಅವರಿಗೆ

"ರಾಷ್ಟ್ರದ ಪರಿಸ್ಥಿತಿ, ರಾಜಕೀಯರಂಗದ ಸ್ಥಿತಿಗತಿ, ರಾಜಕಾರಣವನ್ನು ನಿಯಂತ್ರಿಸುತ್ತಿರುವ ಕುದುರೆವ್ಯಾಪಾರ, ಆಡಳಿತಪಕ್ಷದ ವಿಳಂಬನೀತಿ, ಔದಾಸೀನ್ಯ, ಕುಸಿಯುತ್ತಿರುವ ಸಂಸದೀಯ ಮೌಲ್ಯಗಳು.... ಇವೆಲ್ಲ ನನ್ನನ್ನು ಕಳವಳಕ್ಕೀಡುಮಾಡಿವೆ. ಶೇರು ಹಗರಣವನ್ನು ತನಿಖೆ ಮಾಡಿ ಜೆ.ಪಿ.ಸಿ.ಯಂಥ ಉನ್ನತ ಪ್ರಾತಿನಿಧಿಕ ಸಮಿತಿ ಸಲ್ಲಿಸಿದ ವರದಿಯಲ್ಲಿ ದೋಷಾರೋಪಣೆಗೆ ಒಳಗಾದ ಸಚಿವರನ್ನು ಸಂಪುಟದಿಂದ ಕೈ ಬಿಡಲು ಪ್ರಧಾನಿ ಹಿಂದೆಮುಂದೆ ನೋಡಿದರಲ್ಲ! ಮೌಲ್ಯದ ಅರ್ಥವೂ ಕಾಲದೊಂದಿಗೆ ಬದಲಾಗುತ್ತಿದೆಯೇ?" ಎಂದು ಅವರು ಅತ್ಯಂತ ಖಿನ್ನರಾಗಿ ಪ್ರಶ್ನಿಸುತ್ತಾರೆ.

"ಲಕ್ಷಾಂತರ ಜನ ಸೇರಿದ್ದರೂ, ಆ ಜನಜಂಗುಳಿಯ ಮಧ್ಯೆಯೇ ನುಗ್ಗಿ ಜವಾಹರಲಾಲ್ ನೆಹರೂ ಜನರೊಂದಿಗೆ ಕೈ ಕುಲುಕುತ್ತ ಸಾಗುತ್ತಿದ್ದ. ಆ ದಿನಗಳು ಎಲ್ಲಿ ಹೋದವು? ಅಂಗರಕ್ಷಕರ ಬಿಗಿಭದ್ರತೆಯ ಮಧ್ಯೆ ಗುಂಡು ನಿರೋಧಕ ಗಾಜಿನ ಪರದೆಯ ಹಿಂದೆ ನಿಂತು ಇಂದಿನ ಧುರೀಣರು ಭಾಷಣ ಮಾಡುತ್ತಿದ್ದಾರೆ. ನಾವು ಎಂಥ ಪ್ರಗತಿ ಸಾಧಿಸಿದ್ದೇವೆ ನೋಡಿ!" ಎಂದವರು ವಿಷಾದಿಸುತ್ತಾರೆ.

"ಎಲ್ಲ ಸರಕಾರಗಳೂ ಅಷ್ಟೇ. ಅಧಿಕಾರ ಎಲ್ಲರನ್ನೂ ಭ್ರಷ್ಟಗೊಳಿಸುತ್ತದೆ. ಇದಕ್ಕೆ ನನ್ನ ಪಕ್ಷದ ಸರಕಾರಗಳೂ ಹೊರತಲ್ಲ. ಇದೆಲ್ಲವನ್ನೂ ನೋಡಿ ಅದೆಷ್ಟು ಬೇಸರವಾಗುತ್ತದೆಂದರೆ ಈ ರಂಗದಿಂದ ದೂರ ಸರಿದು ಬಿಡಬೇಕೆಂದು ನಾನು ಆಗಾಗ ಯೋಚಿಸುತ್ತೇನೆ" ಎಂದು ಖೇದ ವ್ಯಕ್ತಪಡಿಸುವ ಅವರು ಕೂಡಲೇ, "ಆದರೆ ದೂರ ಸರಿದು ಹೋಗುವುದಾದರೂ ಎಲ್ಲಿಗೆ?" ಎಂಬ ಪ್ರಶ್ನೆಯನ್ನೂ ಮುಂದಿಟ್ಟು, "ಅದು ಆಗದ ಮಾತು. ನಾನು ಮತ್ತೆ ಮತ್ತೆ ದೇಶ ಸುತ್ತಬೇಕು. ಮತ್ತೆ ಮತ್ತೆ ಜನರೊಂದಿಗೆ ಬೆರೆಯಬೇಕು. ಅವರನ್ನು, ಅವರ ಸಂಸ್ಕೃತಿಗಳನ್ನು ಅರಿಯಬೇಕು. ಹೋರಾಟಕ್ಕೆ ಅವರನ್ನು ಅಣಿಗೊಳಿಸಬೇಕು," ಎಂಬ ಸಂಕಲ್ಪವನ್ನು ಪುನರುಚ್ಚರಿಸುತ್ತಾರೆ.

### ಪಾಕಶಾಸ್ತ್ರ ಪ್ರವೀಣ!

ಅಟಲ್‌ಜಿ ಅಡಿಗೆ ಎಂದರೆ ಮಿತ್ರರು ನಾಲಿಗೆಯ ಮೇಲೆ ನೀರೂರಿಸಿಕೊಳ್ಳುತ್ತಾರೆ. "ನಾನು ಮಾಡಿದ ಖಿಚಡಿಯ ರುಚಿ ಗೊತ್ತೇನು ನಿಮಗೆ? ಗೊತ್ತಿಲ್ಲದಿದ್ದರೆ ಒಮ್ಮೆ ಮುಂಚಿತವಾಗಿ ತಿಳಿಸಿ "ಬನ್ನಿ. ತಿಂದು ತೃಪ್ತಿಪಡುವಿರಂತೆ," ಎಂಬ ಆತ್ಮೀಯ ಆಮಂತ್ರಣ ಅವರಿಂದ ಬರುವುದೂ ಉಂಟು.

"ಒಳ್ಳೆಯ ಆಹಾರ-ವಿಹಾರವನ್ನು ಬಯಸುವವ ನಾನು. ಅದು ನನ್ನನ್ನು ಸದೃಢನನ್ನಾಗಿರಿಸುತ್ತದೆ," ಎನ್ನುವ ವಾಜಪೇಯಿಯವರಿಗೆ ಆಗೀಗ ಸ್ವಲ್ಪ ಮದ್ಯದ ರುಚಿಯನ್ನೂ ನೋಡುವ ಚಟವಿದೆ.

"ಹೌದು, ಹಿಂದಿಯಲ್ಲಿ 'ಶೋರ್-ಶರಾಬಾ' ಎಂಬ ಮಾತೊಂದಿದೆಯಲ್ಲ. ಅಷ್ಟೆಲ್ಲ ಶೋರ್ (ಗದ್ದಲ) ಆದ ಮೇಲೆ ಶರಾಬು ಇಲ್ಲದಿದ್ದರೆ ಹೇಗೆ? ಆದರೆ ಅದು ಮಿತಿಯಲ್ಲಿರಬೇಕು ಎಂಬುದನ್ನು ನಾನೆಂದೂ ಮರೆತಿಲ್ಲ," ಎಂದವರು ಪ್ರಾಂಜಲವಾಗಿ ಹೇಳುತ್ತಾರೆ.

"ಅಟಲ್‌ಜಿ, ನೀವೊಬ್ಬ ಬ್ರಹ್ಮಚಾರಿ ಎಂದು ಗೊತ್ತಿದೆ. ಆದರೂ ನಿಮ್ಮ ಬಗ್ಗೆ ಇಲ್ಲ ಸಲ್ಲದ ಸುದ್ದಿಗಳೂ ಇವೆಯಲ್ಲ!" ಎಂದು ಕೇಳುವವರೂ ಇದ್ದಾರೆ.

"ನೀವು ಹೇಳಿದ ಹಾಗೆ, ಅವು ಇಲ್ಲ ಸಲ್ಲದ ಸುದ್ದಿಗಳೇ ಸೈ."

"ಹಾಗಾದರೆ ನೀವ್ಯಾಕೆ ಮದುವೆ ಮಾಡಿಕೊಳ್ಳಲಿಲ್ಲ? ಅದಕ್ಕೇನು ಕಾರಣ?"

"ಮದುವೆಯಾಗಬಾರದೆಂಬ ನಿರ್ಧಾರಕ್ಕೆ ನಾನು ಮತ್ತು ಮಿತ್ರ ಥ್ಯಾಕರೆ ಎಂಬವರು ಬಂದೆವು. ದೇಶಕ್ಕಾಗಿ ದುಡಿಯಬೇಕೆಂಬ ಆದರ್ಶಕ್ಕೆ ಅಂಟಿಕೊಂಡೆವು. ಪದವಿ ಮುಗಿಸಿದ ಮೇಲೆ ನಾನು ನಿರ್ಧರಿಸಿದಂತೆಯೇ ನಡೆಯಲಾರಂಭಿಸಿದೆ. ಮದುವೆ-ಗಿದುವೆ ಅಂತ ಯೋಚಿಸಲಿಕ್ಕೂ ಸಮಯವಿರಲಿಲ್ಲ. ಈ ನಿರ್ಧಾರ ೧೯೪೭ರಲ್ಲೆ ತೆಗೆದುಕೊಂಡದ್ದು."

"ಮದುವೆಯಾಗದಿರುವ ಬಗ್ಗೆ ಪಶ್ಚಾತ್ತಾಪವಿದೆಯೆ?"

"ಹೂಂ, ಒಂದೊಂದು ಸಲ ಮದುವೆಯಾಗಿದ್ದರೇ ಚೆನ್ನಾಗಿತ್ತು ಅನಿಸುತ್ತದೆ."

"ಹೌದು, ನೀವು ಮದುವೆಯಾಗಿದ್ದರೇ ಚೆನ್ನಾಗಿತ್ತು."

"ಯಾಕೆ?"

"ಅಂದರೆ ಒಬ್ಬ ಮಗನೋ ಮಗಳೋ ಹುಟ್ಟಬಹುದಿತ್ತು."

"ಹುಟ್ಟಬಹುದಿತ್ತು. ಆದರೆ ಆತ ಇಲ್ಲವೆ ಆಕೆ ಪ್ರಧಾನಿಯಾಗುವುದು ಸಾಧ್ಯವಿತ್ತೇ?" ಎಂಬ ಪ್ರಶ್ನೆಯೊಂದಿಗೆ ಗಹಗಹಿಸಿ ನಕ್ಕು ಬಿಡುತ್ತಾರೆ ವಾಜಪೇಯಿ.

ಆಗ ಅವರನ್ನು ನೋಡುವಾಗ ನಗುವ ಬೆಟ್ಟ ಕಂಡಂತಾಗುತ್ತದೆ. ●

# ನಿಮಗೆ ಯಾವ ವೃತ್ತಿ ಸೂಕ್ತ?

• ಬಿ.ವಿ. ಗುರುನಂಜಯ್ಯ

ನಮ್ಮ ವ್ಯಕ್ತಿತ್ವದ ಬೆಳವಣಿಗೆಗೆ, ನಮ್ಮ ಕುಟುಂಬ, ನಮ್ಮ ಜ್ಞಾನಾರ್ಜನೆ, ಅಧಿಕಾರ, ನೈತಿಕ ನೆಲೆಗಟ್ಟು, ಸ್ನೇಹ–ಸಾಂಗತ್ಯಗಳು, ಸಾಮಾಜಿಕ ಅಂಗೀಕಾರ, ಸೃಜನ ಶೀಲತೆ, ಸೌಂದರ್ಯೋಪಾಸನೆ ಮುಂತಾದ ಅಪವ ರ್ತನ ಮೌಲ್ಯಗಳು ಬಹಳ ಮುಖ್ಯ. ಈ ಮೌಲ್ಯಗಳಿಗೆ ಬೇರೆ ಬೇರೆ ವ್ಯಕ್ತಿಗಳು ಕೊಡುವ ಪ್ರಾಮುಖ್ಯ ಬೇರೆ ಬೇರೆ. ಬದುಕಿನಲ್ಲಿ ಯಾವ 'ಮೌಲ್ಯ' ಅತಿಮುಖ್ಯವೆಂಬುದನ್ನು ತಿಳಿದುಕೊಂಡಲ್ಲಿ, ನಿಮ್ಮ ಭವಿಷ್ಯವನ್ನು ಸೂಕ್ತ ರೀತಿಯಲ್ಲಿ ರೂಪಿಸಿಕೊಳ್ಳಬಹುದು.

ನಿಮಗೆ ಯಾವ ಅಪವರ್ತನಾ ಮೌಲ್ಯ ಅತಿಮುಖ್ಯ ಎಂಬುದನ್ನು ಕೆಳಕಂಡ ಕೆಲವು ಪ್ರಶ್ನಾವಳಿಗೆ ಉತ್ತರಿಸುವ ಮೂಲಕ ತಿಳಿದುಕೊಳ್ಳಬಹುದು. ಒಮ್ಮೆ ಆ ಮೌಲ್ಯವನ್ನು ಗುರುತಿಸಿಕೊಂಡಲ್ಲಿ, ನಿಮ್ಮ ಬದುಕಿಗೆ ಸೂಕ್ತ 'ವೃತ್ತಿ' ಯಾವುದೆಂಬುದನ್ನು ಸುಲಭವಾಗಿ ನಿರ್ಧರಿಸಬಹುದು.

ಪ್ರತಿಯೊಂದು ಪ್ರಶ್ನೆಯ ಮುಂದೆ, ಚೌಕಟ್ಟಿನ ಮೇಲೆ, ನೀಡಿರುವ ಉತ್ತರಗಳಲ್ಲಿ ಯಾವುದು ನಿಮಗೆ ಸರಿ ಎನಿ ಸುತ್ತದೆಯೋ, ಅದನ್ನು ಗುರುತಿಸಿಕೊಳ್ಳಿ. ಎಲ್ಲ ಪ್ರಶ್ನೆಗ ಳಿಗೂ ಉತ್ತರ ಕಂಡುಕೊಂಡ ನಂತರ, ಕೊಟ್ಟಿರುವ ಉತ್ತರಗಳ ಮೌಲ್ಯಗಳನ್ನು ತಾಳೆ ನೋಡಿ ತಿಳಿದುಕೊಳ್ಳಿ. ನಿಮಗೆ ಹೆಚ್ಚು ಅಂಕಗಳು ಬಂದಿರುವ ಅಪವರ್ತನಾ ಮೌಲ್ಯ ಯಾವುದೆಂಬುದನ್ನು ತಿಳಿದುಕೊಂಡು, ಅದ ರಿಂದ, ನಿಮಗೆ ಯಾವ ವೃತ್ತಿ ಸೂಕ್ತ ಎಂಬುದನ್ನು ನೀವೇ ನಿರ್ಧರಿಸಿ.

ಮುಂದಿನ ಪುಟಗಳಲ್ಲಿ ಕೊಟ್ಟಿರುವ ಚೌಕಗಳಲ್ಲಿ ಹೀಗಿರುತ್ತದೆ;

೧. ಖಂಡಿತ ನಿಜ
೨. ಕೆಲವು ಸಾರಿ ನಿಜ
೩. ಖಚಿತವಾಗಿ ಹೇಳಲಾರೆ
೪. ನಿಜವಲ್ಲ

# ನಿಮಗೆ ಯಾವ ವೃತ್ತಿ ಸೂಕ್ತ?

## ೧) ಕುಟುಂಬ

೧) ಮನೆಯಲ್ಲಿನ ಎಲ್ಲಾ ಕೆಲಸವನ್ನೂ ಕುಟುಂಬ ಸದಸ್ಯರೆಲ್ಲ ಸೇರಿ ಮಾಡಬೇಕೆಂದು ಅಪೇಕ್ಷಿಸುತ್ತೇನೆ.

೨) ನನ್ನ ಕುಟುಂಬದವರ ಸಂಗಡ ಸಂತೋಷದಿಂದ ಕಾಲ ಕಳೆಯಲು ಅವಕಾಶವಿರುವಂಥ ಉದ್ಯೋಗ ದೊರಕಬೇಕೆಂದು ಇಷ್ಟಪಡುತ್ತೇನೆ.

೩) ಹತ್ತಿರವಾದ ನನ್ನ ಕುಟುಂಬದ ಸದಸ್ಯರುಗಳು ನನಗೆ ಬಹಳ ಮುಖ್ಯ.

೪) ಸಮಸ್ಯೆಗಳನ್ನು ಚರ್ಚಿಸಿ, ಸೂಕ್ತ ತೀರ್ಮಾನ ತೆಗೆದುಕೊಳ್ಳಲು ಪೂರಕವಾಗಿರುವಂಥ ಕುಟುಂಬವಿರಬೇಕೆಂದು ಇಚ್ಛಿಸುತ್ತೇನೆ.

## ೨) ಜ್ಞಾನಾರ್ಜನೆ

೧) ಚರಿತ್ರೆಯನ್ನು ತಿಳಿದುಕೊಳ್ಳಬೇಕಾದದ್ದು ಅತಿ ಮುಖ್ಯ.

೨) ಜ್ಞಾನಾರ್ಜನೆ ನನಗೂ ನನ್ನ ಭವಿಷ್ಯಕ್ಕೂ ಅತೀ ಮುಖ್ಯವೆಂದು ನಂಬಿದವ ನಾನು.

೩) ಪ್ರತಿದಿನ ಯಾವುದಾದರೂ ಹೊಸ ಪ್ರಯೋಗ ಮಾಡಬೇಕು ಹಾಗೂ ಹೊಸದನ್ನು ಅರಿಯಬೇಕೆಂಬುದು ನನ್ನ ಅಭಿಲಾಷೆ.

೪) ಪ್ರಕೃತಿಯ ಸಮಸ್ತ ರೂಪರೇಷೆಗಳನ್ನು ಅರಿಯಬೇಕೆಂಬುದು ನನ್ನ ಇಚ್ಛೆ.

## ೩) ಸಾಹಸ ಪ್ರವೃತ್ತಿ

೧) ನಾನು ದೂರ-ದೂರ ಪ್ರದೇಶಗಳಿಗೆ ಪ್ರವಾಸ ಮಾಡಲು ಇಚ್ಛಿಸುತ್ತೇನೆ.

೨) ಇದುವರೆಗೂ ಮಾಡದೇ ಇರುವ ಕಾರ್ಯಗಳನ್ನು ನಿರ್ವಹಿಸುವುದರಲ್ಲಿ ಖುಷಿ ಎನಿಸುತ್ತದೆ.

೩) ನನಗೆ ಅಪರಿಚಿತ ಪಟ್ಟಣದಲ್ಲಿ ಉದ್ಯೋಗ ಮಾಡಬೇಕೆಂಬ ಹಂಬಲವಿದೆ.

೪) ನನ್ನ ಜೀವನ ಲವಲವಿಕೆಯಿಂದ ಕೂಡಿರಬೇಕೆಂದು ಅಪೇಕ್ಷಿಸುತ್ತೇನೆ.

## ೪) ಸ್ನೇಹ ಮತ್ತು ಸಾಂಗತ್ಯ

೧) ನಂಬಲರ್ಹರಾದ ಒಳ್ಳೆಯ ಸ್ನೇಹಿತರಿರುವುದು ನನಗೆ ಮುಖ್ಯ.

೨) ನನ್ನ ಜೀವನವನ್ನು ಮತ್ತೊಂದು ವ್ಯಕ್ತಿಯ ಸಂಗಡ ಹಂಚಿಕೊಂಡು ಬದುಕುವುದು ಮುಖ್ಯ.

೩) ನಾನು ಹೆಚ್ಚಾಗಿ, ಏಕಾಕಿತನವನ್ನು ಬಯಸುವುದಿಲ್ಲ.

## ನಿಮಗೆ ಯಾವ ವೃತ್ತಿ ಸೂಕ್ತ?

೪) ಮಾಡುತ್ತಿರುವ ಉದ್ಯೋಗದ ನಿಮಿತ್ತ ಪ್ರವಾಸಗಳಲ್ಲಿ ಒದಗಿ ಬರುವ ಸಂಬಂಧಗಳು ದೀರ್ಘಕಾಲ ಉಳಿಯದಿದ್ದರೆ ಅಂಥ ಉದ್ಯೋಗವನ್ನು ನಾನು ಇಷ್ಟಪಡುವುದಿಲ್ಲ.

### ೫) ಅಧಿಕಾರ

೧) ನಾನು ಒಂದು ಕ್ಲಬ್ಬಿನ ಸಾಮಾನ್ಯ ಸದಸ್ಯನಾಗಿರುವುದಕ್ಕಿಂತ ಅದರ ಅಧ್ಯಕ್ಷನಾಗಿರಲು ಹೆಚ್ಚು ಇಷ್ಟಪಡುತ್ತೇನೆ.

೨) ನಾನು ಯಾವಾಗಲೂ ಯಾವುದಾದರೂ ಒಂದು ಗುಂಪಿನ ನಾಯಕನಾಗಿರಬೇಕೆಂದು ಅಪೇಕ್ಷಿಪಡುತ್ತೇನೆ.

೩) ಸಾಮಾನ್ಯ ನೌಕರನಾಗಿರುವುದಕ್ಕಿಂತಲೂ ಅಧಿಕಾರಿಯಾಗಿರಲು ನನಗೆ ಬಹಳ ಇಷ್ಟ.

೪) ಕ್ಲಿಷ್ಟಕರವಾದ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಲು ಯಾರಾದರೂ ನನ್ನ ಸಹಾಯ ಕೋರಿದರೆ ಅದರಿಂದ ನನಗೆ ಸಂತಸ ಎನಿಸುತ್ತದೆ.

### ೬) ಹಣ

೧) ನಾನು ಸಾಮಾನ್ಯ ಗೃಹಸ್ಥನಾಗಿ ಬಾಳುವುದಕ್ಕಿಂತ ಹೆಚ್ಚಾಗಿ, ಶ್ರೀಮಂತನಾಗಿ ಭೋಗಿಸಲು ಅಪೇಕ್ಷಿಸುತ್ತೇನೆ.

೨) ಆಧುನಿಕ ಹಾಗೂ ಶ್ರೀಮಂತಿಕೆಯ ವಸ್ತುಗಳು ನನಗಿರಬೇಕೆಂದು ಅಪೇಕ್ಷಿಸುತ್ತೇನೆ.

೩) ಹಣದಿಂದ, ಸಂತೋಷವನ್ನು ಕೊಳ್ಳಲಾಗುವುದಿಲ್ಲ, ನಿಜ; ಆದರೆ, ಅದು ನಮ್ಮ ಸಂತಸಕ್ಕೆ ಪೂರಕವಾಗಿದೆ.

೪) ನನಗೆ ದೊರಕಿರುವ ಉದ್ಯೋಗ ಅತೃಪ್ತಿಕರವಾಗಿದ್ದರೂ ಪರವಾಗಿಲ್ಲ, ಹಣ ಸಂಪಾದನೆ ಮಾತ್ರ ತೃಪ್ತಿಕರವಾಗಿರಬೇಕು. ತೃಪ್ತಿಕರ ವೃತ್ತಿಯಾಗಿದ್ದರೂ, ಅತೃಪ್ತಿಕರ ಹಣ ಸಂಪಾದನೆ ಇರುವಂಥ ಉದ್ಯೋಗಗಳನ್ನು ನಾನು ಇಷ್ಟಪಡುವುದಿಲ್ಲ.

### ೭) ಸಾಮಾಜಿಕ ಅಂಗೀಕಾರ ಅಥವಾ ಮಾನ್ಯತೆ

೧) ನಾನು ಮಾಡಿದ ಸ್ತುತ್ಯ ಕಾರ್ಯಗಳೆಲ್ಲವೂ, ಜನರಿಗೆ ಗೊತ್ತಾಗಬೇಕೆಂದು ಅಪೇಕ್ಷಿಪಡುತ್ತೇನೆ.

೨) ಜನರ ಮನಸ್ಸಿನಲ್ಲಿ ಬಹುಕಾಲ ಉಳಿಯುವಂಥದ್ದನ್ನೇನಾದರೂ ಸಾಧಿಸಬೇಕೆಂದು ಅಪೇಕ್ಷಿಸುತ್ತೇನೆ.

೩) ನಾನು ಸಮಾಜದಲ್ಲಿ ಪ್ರತಿಷ್ಠಿತ ವ್ಯಕ್ತಿಯಾಗಿರಬೇಕೆಂದು ಇಚ್ಛಿಸುತ್ತೇನೆ.

೪) ಒಲಂಪಿಕ್ ಪಂದ್ಯಗಳಲ್ಲಿ ಚಿನ್ನದ ಪದಕವನ್ನು ಪಡೆಯುವುದೆಂದರೆ ಕೀರ್ತಿ ಅಥವಾ ಮಾನ್ಯತೆ ಸಂಪಾದಿಸದಂತಲ್ಲವೇ?

**೮) ಸೃಜನಶೀಲತೆ**

೧) ನಾನೇ ಸ್ವತಃ ಮಾಡಬೇಕೆಂಬುದು ನನಗೆ ಪ್ರಿಯ.

೨) ನನಗೆ ಕತೆ, ಕಾದಂಬರಿ, ಕವನ ಮತ್ತು ನಾಟಕಗಳನ್ನು ಬರೆಯುವದೆಂದರೆ ಬಹಳ ಇಷ್ಟ.

೩) ಸ್ವತಃ ನಾನೇ ಮಾಡಿದ ವಸ್ತುಗಳು ಅಥವಾ ಕಾರ್ಯಗಳು ನನಗೆ ತುಂಬಾ ತೃಪ್ತಿತರುತ್ತವೆ.

೪) ಇದುವರೆವಿಗೂ, ನಾನು ಮಾಡದೇ ಇರುವ ಸಾಹಸಕಾರ್ಯವೇನನ್ನಾದರೂ, ಸಾಧಿಸಬೇಕೆಂಬುದು ನನ್ನ ಹಂಬಲ.

**೯) ಸೌಂದರ್ಯೋಪಾಸನೆ**

೧) ಶಾಲೆ ಕಾಲೇಜುಗಳಲ್ಲಿ, ಸಂಗೀತ ಮತ್ತು ಕಲಾ ವಿಭಾಗ ಇರಲೇಬೇಕೆಂದು ಇಚ್ಛಿಸುತ್ತೇನೆ.

೨) ನಾನು ವಾಸಿಸುವ ಪರಿಸರ ಸುಂದರವಾಗಿರಬೇಕೆಂದು ಅಪೇಕ್ಷಿಪಡುತ್ತೇನೆ.

೩) ನಮ್ಮ ಪ್ರಪಂಚ, ಒಂದು ವೇಳೆ, ಸೌಂದರ್ಯರಹಿತವಾಗಿದ್ದಲ್ಲಿ ಅತಿಭಯಾನಕವೆನಿಸುತ್ತಿತ್ತು.

೪) ಪುರಾತನ ಸಾರ್ವಜನಿಕ ಗುಡಿ-ಗೋಪುರಗಳನ್ನು, ಅಲಂಕರಿಸಿಡಲು, ಪ್ರತಿಯೊಬ್ಬ ನಾಗರಿಕನೂ ತಮ್ಮ ದುಡಿಮೆಯಲ್ಲಿ, ಸ್ವಲ್ಪ ಹಣ ನೀಡಬೇಕೆಂದು ಬಯಸುತ್ತೇನೆ.

**೧೦) ನೈತಿಕತೆ ಮತ್ತು ಸ್ಥಿರ ಸ್ವಭಾವ**

೧) ನಾನು, ನನ್ನ ಸಾಧನೆಗಳ ಬಗ್ಗೆ ಹೆಮ್ಮೆ ಪಡುವುದೇ ಮುಖ್ಯ.

೨) ನನ್ನ ಸ್ನೇಹಿತರು ಮಾಡು ಎಂದು ಹೇಳಿದ ಕಾರ್ಯಗಳು ನನ್ನ ದೃಷ್ಟಿಯಲ್ಲಿ ಅಹಿತಕರವೆಂದು ಕಂಡು ಬಂದಲ್ಲಿ, ಅಂಥ ಕಾರ್ಯಗಳನ್ನು ಖಂಡಿತ ಮಾಡಲಾರೆ.

೩) ನಾನು ನಂಬಿರುವ ತತ್ವಗಳಿಗೆ ವಿರುದ್ಧವಾಗಿ ನನ್ನ ಮೇಲಧಿಕಾರಿಗಳು ಏನಾದರೂ ಮಾಡು ಎಂದು ಹೇಳಿದಲ್ಲಿ ನಾನು ಅವರ ಆಜ್ಞೆಯನ್ನು ಧಿಕ್ಕರಿಸುತ್ತೇನೆ. ಕೆಲಸದಿಂದ ಕಿತ್ತು ಹಾಕುತ್ತೇನೆಂದು ಹೆದರಿಸಿದರೂ, ನಾನು ಅಂಜುವುದಿಲ್ಲ.

೪) ಹಣ ಸಂಪಾದನೆಗಿಂತ, ಹೆಚ್ಚಾಗಿ ನನ್ನ ನಂಬಿಕೆಗಳ ಮತ್ತು

ತತ್ವಗಳ ಸಾಧನೆ ನನಗೆ ಮುಖ್ಯ.

**೧೧) ಸ್ವಾತಂತ್ರ್ಯ**

೧) ಮನೆಯಲ್ಲಿಯೇ ಇದ್ದು ಕಾಲಹರಣ ಮಾಡುವುಕ್ಕಿಂತ ಹೊರಗೆ ಸುತ್ತಾಡುವುದೆಂದರೆ ನನಗೆ ಬಹಳ ಇಷ್ಟ.

೨) ನಾನು ಮಾಡುತ್ತಿರುವ ಉದ್ಯೋಗದಲ್ಲಿ ನಾನು ಯಾವಾಗ ಮತ್ತು ಯಾವ ದಿನದಲ್ಲಿ ಎಷ್ಟು ಕೆಲಸ ಮಾಡಬೇಕೆಂಬುದನ್ನು ನಿರ್ಧರಿಸುವ ಅಧಿಕಾರ ನನಗೇ ಇರಬೇಕು.

೩) ನನ್ನ ಉದ್ಯೋಗದಲ್ಲಿ, ನಾನು ಮಾಡುವ ಎಲ್ಲಾ ಕೆಲಸಕ್ಕೂ ನನ್ನ ಮೇಲಧಿಕಾರಿಗಳಿಗೆ ವಿವರಣೆ ನೀಡಲು ಇಚ್ಛಿಸುವುದಿಲ್ಲ.

೪) ಹಣ ಸಂಪಾದನೆ ಕಡಿಮೆ ಎನಿಸಿದರೂ ಪರವಾಗಿಲ್ಲ, ಪರರ ಅಡಿಯಾಳಾಗಿ ದುಡಿಯುವುದಕ್ಕಿಂತ, ಸ್ವತಂತ್ರವಾಗಿ ದುಡಿಯುವುದು ಒಳ್ಳೆಯದು ಎನ್ನುವುದು ನನ್ನ ಅಭಿಮತ.

**೧೨) ಪರರಿಗೆ-ಸಹಾಯ**

೧) ನನಗೆ ಸಾಧ್ಯವಾದಲ್ಲಿ ಸಮಾಜದಲ್ಲಿನ ಅನ್ಯಾಯ, ಅನೀತಿಗಳನ್ನು ಎತ್ತಿ ತೋರಿಸಿ, ಜನರಲ್ಲಿ ತಿಳಿವಳಿಕೆ ಮೂಡಿಸಲು ಒಂದು ಸಿನೆಮಾ ತೆಗೆಯಲು ಇಚ್ಛಿಸುತ್ತೇನೆ.

೨) ಜನ ಸಾಮಾನ್ಯರಿಗೆ ಅನುಕೂಲಕರವಾದದ್ದೇನಾದರೂ ಸಾಧಿಸಬೇಕೆಂಬುದು ನನ್ನ ಅಭಿಲಾಷೆ.

೩) ಜನಸಾಮಾನ್ಯರಿಗೆ ಉಪಯುಕ್ತವಾದಂತಹ ಪುಸ್ತಕಗಳನ್ನು ಬರೆಯಬೇಕೆಂಬ ಹಂಬಲ ನನಗಿದೆ.

೪) ನಿರ್ಗತಿಕನಿಗೆ ದಾನ ಮಾಡುವುದು ಬಹು ಮುಖ್ಯ.

**೧೩) ಭದ್ರತೆ**

೧) ಅಲ್ಪಕಾಲದಲ್ಲೇ ಅಧಿಕ ಹಣ ನೀಡುವ ಆದರೆ, ಅಸ್ಥಿರವಾಗಿರುವ ಉದ್ಯೋಗಕ್ಕಿಂತ ಅಲ್ಪ ಆದಾಯ ತರುವ ಸ್ಥಿರವಾದ ಹಾಗೂ ಶಾಶ್ವತವಾದ ಉದ್ಯೋಗವೇ ಒಳ್ಳೆಯದೆಂದು ನನ್ನ ಭಾವನೆ.

೨) ಗಂಡಾಂತರದ ಉದ್ಯೋಗಗಳು ನನಗೆ ಅಷ್ಟಾಗಿ ಹಿಡಿಸುವುದಿಲ್ಲ.

೩) ಅದೃಷ್ಟದ ಮೇಲೆ ನಂಬಿಕೆ ಇಟ್ಟು ಏನನ್ನಾದರೂ ಮಾಡಲೇಬೇಕಾಗಿಬಂದರೆ, ನನಗೆ ಖಂಡಿತ ಅಂಜಿಕೆಯಾಗುತ್ತದೆ.

# ನಿಮಗೆ ಯಾವ ವೃತ್ತಿ ಸೂಕ್ತ?

೪) ನಾನು ಈ ಮೊದಲು ಕಾಣದಿರುವ ಸ್ಥಳಗಳಿಗಿಂತ ನನಗೆ ಪರಿಚಿತವಾದ ಸ್ಥಳಗಳು ಹೆಚ್ಚು ಇಷ್ಟ.

| | | | |
|---|---|---|---|
| | | | |

ಒಟ್ಟು ______________

ಲೇಖನದ ಕೊನೆಗೆ ಕೊಟ್ಟಿರುವಂತೆ ಲೆಕ್ಕಹಾಕಿದ ನಂತರ ಈಗ ಹೇಳಿ, ನಿಮಗೆ ಯಾವ ಯಾವ ಭಾಗಗಳಲ್ಲಿ ಅತ್ಯಧಿಕ ಗುಣಗಳು ಬಂದಿವೆ ಎಂದು. ಈ ಅಪವರ್ತನ ಮೌಲ್ಯಗಳು, ನಿಮ್ಮ ಈಗಿನ ಸ್ಥಿತಿಗೆ ಬಹಳ ಮುಖ್ಯವಾಗಿರುತ್ತವೆ. ಅವು ನಿಮ್ಮ ಉದ್ಯೋಗ ಅಥವಾ ವೃತ್ತಿಯನ್ನು ನಿರ್ಧರಿಸುವಲ್ಲಿ ನಿರ್ಣಾಯಕವಾಗಬಲ್ಲವು. ಯಾವ ಉದ್ಯೋಗವೂ ನಮಗೆ ಬೇಕಾದ್ದನ್ನೆಲ್ಲಾ ನೀಡಲಾರದು ನಿಜ. ಆದರೆ, ನಿಮ್ಮ ಅಂತರಾಳದ ಮೌಲ್ಯಗಳಿಗೆ ಹತ್ತಿರವಾಗಿ ಕಾಣುವ ಉದ್ಯೋಗವನ್ನೇ ನೀವು ಆರಿಸಿಕೊಂಡಲ್ಲಿ ನಿಮ್ಮ ಜೀವನ ಇನ್ನಷ್ಟು ಸಂತಸಮಯವಾಗುವುದರಲ್ಲಿ ಸಂಶಯವಿಲ್ಲ.

೧) **ಕುಟುಂಬ:** ಈ ಭಾಗದಲ್ಲಿ ನಿಮಗೆ ಹೆಚ್ಚಿಗೆ ಅಂಕ ಸಿಕ್ಕಿದ್ದರೆ ಅದು ನಿಮಗೂ ನಿಮ್ಮ ಕುಟುಂಬಕ್ಕೂ ಇರುವ ನಿಕಟ ಸಂಬಂಧವನ್ನು ತೋರಿಸಿಕೊಡುತ್ತದೆ. ನಿಮಗೆ ಕುಟುಂಬವೇ ಸರ್ವಸ್ವ. ಹೀಗಾಗಿ ನಿಮ್ಮ ಕುಟುಂಬದ ಸದಸ್ಯರ ಸಂಗಡ ಕಳೆಯಲು ಸಾಕಷ್ಟು ಕಾಲಾವಕಾಶವಿರುವಂತಹ ಉದ್ಯೋಗವನ್ನೇ ನೀವು ಅಪೇಕ್ಷಿಸುತ್ತೀರಿ. ಕುಟುಂಬಕ್ಕೋಸ್ಕರ ನೀವು ದೂರದ ಸ್ಥಳಗಳಲ್ಲಿ ದೊರಕಬಹುದಾದ ಉದ್ಯೋಗಗಳನ್ನು ಅನೇಕ ವೇಳೆ ತಿರಸ್ಕರಿಸಲೂಬಹುದು. ನಿಮ್ಮಂಥವರಿಗೆ ಪ್ರವಾಸಿ ಉದ್ಯೋಗಗಳು ಮತ್ತು ಅಲೆದಾಡುವಂತಹ ಮತ್ತು ಅಪಾಯಕರ ಹುದ್ದೆಗಳು ಉದಾಹರಣೆಗೆ- ಅರಣ್ಯ ಇಲಾಖೆ ಅಧಿಕಾರಿ, ಮೆಡಿಕಲ್ ರಿಪ್ರಸೆಂಟೇಟಿವ್ ಇತ್ಯಾದಿ ನಿಮಗೆ ಹೇಳಿಮಾಡಿಸಿದಂಥವುಗಳಲ್ಲ.

೨) **ಜ್ಞಾನಾರ್ಜನೆ:** ಈ ವಿಭಾಗದಲ್ಲಿ ನಿಮಗೆ ಅತ್ಯಧಿಕ ಅಂಕಗಳು ಬಂದಿದ್ದಲ್ಲಿ ಯಾವಾಗಲೂ ಏನನ್ನಾದರೂ ಕಲಿಯುವ ಅಥವಾ ತಿಳಿಯುವ ಉತ್ಕಟ ಭಾವವನ್ನು ನಿಮ್ಮಲ್ಲಿ ತುಂಬಿಕೊಂಡಿರುತ್ತೀರಿ. ನೀವು ಅಂಥ ಉದ್ಯೋಗನನ್ನೇ ಆರಿಸಿಕೊಳ್ಳಲು ಅಪೇಕ್ಷಿಸುತ್ತೀರಿ. ಉಪಾಧ್ಯಾಯ ವೃತ್ತಿ, ಅನ್ವೇಷಣೆ, ವಿಜ್ಞಾನ, ಚರಿತ್ರೆ ಅಥವಾ ರಾಜಕೀಯ ಇವುಗಳು ನಿಮಗೆ ಸೂಕ್ತ ಉದ್ಯೋಗಗಳಾಗಬಹುದು. ಹಲವರು ಪತ್ರಿಕೋದ್ಯಮಿಯೂ ಆಗಬಹುದು.

೩) **ಸಾಹಸ:** ಈ ವಿಭಾಗದಲ್ಲಿ ಅಧಿಕ ಅಂಕಗಳಿಸಿದವರು ಮೇಲಿಂದ ಮೇಲೆ ಪ್ರಯಾಣ ಅಥವಾ ಪ್ರವಾಸ ಸಂದರ್ಭಗಳು ಒದಗಿಬರುವ ಉದ್ಯೋಗವನ್ನೇ ಹೆಚ್ಚು ಇಷ್ಟಪಡುತ್ತಾರೆ. ಕುರ್ಚಿಗೆ ಅಂಟಿಕೊಂಡು ಮಾಡುವ ಕೆಲಸ ಅವರಿಗೆ ಒಗ್ಗುವುದಿಲ್ಲ. ಅಂಥವರು ವೃತ್ತಿಯು ವೈವಿಧ್ಯಮಯವಾಗಿರಬೇಕೆಂದು ಅಪೇಕ್ಷಿಸುತ್ತಾರೆ. ಅವರು ಸಾಹಸ ಮನೋಭಾವದವರಿದ್ದು ಅಪಾಯಕರ ಸನ್ನಿವೇಶಗಳನ್ನು ಎದುರಿಸಲೂ ಸಿದ್ಧರಿರುತ್ತಾರೆ. ಪೋಲಿಸು ಅಧಿಕಾರಿ, ಅರಣ್ಯಾಧಿಕಾರಿ, ಪತ್ತೇದಾರಿ ವೃತ್ತಿ ಇಂತಹ ನೌಕರಿಗಳು ಅವರಿಗೆ ಸೂಕ್ತ.

೪) **ಸ್ನೇಹ-ಸಾಂಗತ್ಯ:** ಈ ವಿಭಾಗದ ಜನರು, ಸ್ನೇಹಮಯಿಗಳು. ನಾನಾ ತರಹ ಜನರ ನೌಕರಿ ಮಾಡುತ್ತಿರುವಂತಹ ವೃತ್ತಿ ನಿಮಗೆ ಬೇರೆ ಬೇರೆ ತರಹದ ಜನರು ಪರಿಚಯ ಮತ್ತು ಸ್ನೇಹ ಒದಗಿಸಬಲ್ಲದು. ನಾಲ್ಕು ಗೋಡೆಗಳ ಮಧ್ಯೆ ಏಕಾಕಿಯಾಗಿ ಕುಳಿತು ಕೆಲಸಮಾಡುವ ಸ್ವಭಾವ ನಿಮ್ಮದ್ದಲ್ಲ. ಆದ್ದರಿಂದ, ಲ್ಯಾಬೊರೇಟರಿ ವೃತ್ತಿಯೋ ಅಥವಾ ಯಾವುದಾದರೂ ಕಾಂಪ್ಯೂಟರ್‌ಗೆ ಸಂಬಂಧಿಸಿದ ನೌಕರಿಯೋ ನಿಮಗೆ ಸೂಕ್ತವಲ್ಲ. ನೀವು ಮಾತಿನ ಮಲ್ಲರು. ಆದ್ದರಿಂದ ನಿಮ್ಮ ವೃತ್ತಿಯಲ್ಲಿ ನಿಮ್ಮ ಜೊತೆ ಮಾತನಾಡಲು ಜನ ಬೇಕೇ ಬೇಕು. ನಿಮಗೆ ಸೇಲ್ಸ್‌ಮನ್, ಮಾರ್ಕೆಟಿಂಗ್

## ನಿಮಗೆ ಯಾವ ವೃತ್ತಿ ಸೂಕ್ತ?

ಅಧಿಕಾರಿ ಅಥವಾ ಸಾರ್ವಜನಿಕ ಸಂಪರ್ಕಾಧಿಕಾರಿಯ ಸ್ಥಾನಗಳು ಸೂಕ್ತ.

೫) **ಅಧಿಕಾರ:** ಈ ವಿಭಾಗದ ಜನರಿಗೆ, ಪ್ರಾರಂಭದಲ್ಲೆ ಅಧಿಕಾರವಿರುವ ಉದ್ಯೋಗ ದೊರಕುವುದು, ಈಗಿನ ವಾತಾವರಣದಲ್ಲಿ ಅತಿಕಷ್ಟ. ಆದರೆ, ಯಾವುದೇ ಕಾರ್ಯನಿರ್ವಾಹಕ ಹುದ್ದೆ ನಿಮಗೆ ಸೂಕ್ತ. ಮುಂದೆ ಬಡ್ತಿ ಸಿಕ್ಕಾಗ, ನೀವು ಬಯಸಿದ ಅಧಿಕಾರ ಚಲಾಯಿಸುವ ಅವಕಾಶ ದೊರಕಬಲ್ಲದು. ನಿಮಗೆ ದೊರಕಿದ ಹುದ್ದೆಯಲ್ಲಿಯೇ ಮುಂದಾಳತ್ವವಹಿಸಿ ಕೆಲಸ ಮಾಡಿರಿ. ಹೆಚ್ಚಿನ ಪರಿಣತಿ ಪಡೆಯಿರಿ. ಹೆಚ್ಚಿನ ವ್ಯಾಸಂಗ ಮಾಡಿರಿ. ಆದರಿಂದಾಗಿ ನಿಮ್ಮ ಆಸೆಯನ್ನು ಪೂರೈಸಿಕೊಳ್ಳ ಬಹುದು. ಇಲ್ಲವೇ ಸ್ವಂತ ಉದ್ಯೋಗ ನಿಮಗೆ ಸೂಕ್ತ. ಏಕೆಂದರೆ ಅಲ್ಲಿ ಒಬ್ಬನಾದರೂ ನೌಕರ ನಿಮ್ಮ ಕೈ ಕೆಳಗೆ ಕೆಲಸಮಾಡುತ್ತಿರುತ್ತಾನೆ.

೬) **ಹಣ:** ಈ ವಿಭಾಗದಲ್ಲಿ ಹೆಚ್ಚು ಅಂಕಗಳನ್ನು ಪಡೆದವರು ನೀವಾಗಿದ್ದರೆ ಎದುರಾಗುವ ಉದ್ಯೋಗದಲ್ಲಿ ಎಷ್ಟು ಆದಾಯ ಬರಲಿದೆ ಎಂಬುದನ್ನು ತಾಳೆ ಹಾಕಿ ನೋಡುತ್ತೀರಿ. ಹಣ ಸಂಪಾದನೆಗೋಸ್ಕರ ದಿನದ ವೇಳೆಯನ್ನೆಲ್ಲಾ ಅದಕ್ಕೇ ಮೀಸಲಿರಿಸಬೇಕಾಗಿ ಬರುತ್ತದೆ. ಯಾವಾಗಲೂ ಹಣದ ಬಗ್ಗೆಯೇ ಯೋಚಿಸುತ್ತೀರಿ. ಹೀಗಾಗಿ ನಿಮ್ಮ ಕುಟುಂಬ, ಸ್ನೇಹಿತರು ಇವರತ್ತ ಹೆಚ್ಚ ಗಮನಹರಿಸಲು ಆಗುವುದಿಲ್ಲ. ಅಲ್ಲದೇ ಆಟದಂತಹ ಯಾವುದೇ ಹವ್ಯಾಸವನ್ನು ಬೆಳಸಿಕೊಂಡು ಹೋಗುವುದು ಅಸಾಧ್ಯ. ಇಲ್ಲಿ ಹಣವೇ ಪ್ರಧಾನ.

೭) **ಸಾಮಾಜಿಕ ಅಂಗೀಕಾರ ಮಾನ್ಯತೆ:** ಈ ವಿಭಾಗದ ವ್ಯಕ್ತಿಗಳು ತಮ್ಮನ್ನು ಸಮಾಜ ಗುರುತಿಸಬೇಕು, ಅಥವಾ ಮಾನ್ಯತೆ ನೀಡಬೇಕು ಎಂದು ಅಪೇಕ್ಷಿಸುತ್ತಾರೆ. ಹಾಗೆ ಆಗಲು ನಿಮ್ಮಲ್ಲಿ ಯಾವುದಾದರೂ ನಿಪುಣತೆ ಅಥವಾ ವಿಶೇಷ ಪರಿಣತಿ ಇರಬೇಕಾಗುತ್ತದೆ. ನಿಮಗೆ ಸಿಕ್ಕುವ ಉದ್ಯೋಗದಲ್ಲಿ ಅದನ್ನು ಉತ್ತಮಗೊಳಿಸಿಕೊಳ್ಳಬಹುದೆಂಬ ಅಪೇಕ್ಷೆ ನಿಮಗಿರುತ್ತದೆ. ಆದರೆ ನೆನಪಿಡಿ, 'ಮಾನ್ಯತೆ' ಎನ್ನುವುದು ಬೇಡಿ ಪಡೆಯುವಂಥಾದ್ದಲ್ಲ. ಅದು ಇತರರಿಂದ ತಾನಾಗಿಯೇ ಬರುವಂಥಾದ್ದು. ನೀವು ಮಾಡುವ ಉದ್ಯೋಗ ಯಾವುದೇ ಇರಲಿ ಅದನ್ನು ಒಂದೇ ಮನಸ್ಸಿನಿಂದ ಮಾಡಿ. ಆಗ ನಿಮಗೆ ಮಾನ್ಯತೆ ದೊರೆಯುವುದು ಖಂಡಿತ.

೮) **ಸೃಜನಶೀಲತೆ:** ಇದು ಬರಹಗಾರರಿಗೆ, ಕವಿಗಳಿಗೆ ಅಥವಾ ಕಲಾವಿದರಿಗೆ ಅಷ್ಟೇ ಮೀಸಲಾದದ್ದಲ್ಲ, ನೀವು ಮಾಡುವ ಉದ್ಯೋಗದಲ್ಲೂ ಕ್ರಿಯಾತ್ಮಕತೆಯನ್ನು ತೋರಿಸಬಹುದು. ನೀವು ಆರಿಸಿಕೊಳ್ಳುವ ಉದ್ಯೋಗದಲ್ಲಿ ನಿಮ್ಮ ಸಲಹೆಗಳಿಗೆ, ತೀರ್ಮಾನಗಳಿಗೆ ಮಾನ್ಯತೆ ದೊರೆಯಬೇಕೆಂದು ನೀವು ಅಪೇಕ್ಷಿಸುತ್ತೀರಿ. ಸೀಮಿತ ಉದ್ಯೋಗ ನಿಮ್ಮಂಥವರಿಗೆ ಸೂಕ್ತವಲ್ಲ. ನೀವು ಕಾರ್ಯಕಾರಿ ನಿರ್ದೇಶಕರಾಗಬಹುದು, ವಾಸ್ತುಶಿಲ್ಪಿಗಳಾಗಬಹುದು, ನಾಟಕ ಅಥವಾ ಸಿನೇಮಾ ನಿರ್ದೇಶಕನಾಗಬಹುದು.

೯) **ಸೌಂದರ್ಯೋಪಾಸನೆ:** ಈ ವಿಭಾಗದಲ್ಲಿ ಹೆಚ್ಚು ಅಂಕಗಳನ್ನು ಪಡೆಯುವವರು ಸೌಂದರ್ಯೋಪಾಸಕರಾಗಿರುತ್ತಾರೆ. ನೀವು ಮಾಡುವ ನೌಕರಿಯ ಪರಿಸರ ರಮಣೀಯವಾಗಿರಬೇಕೆಂದು ಅಪೇಕ್ಷಿಸುತ್ತೀರಿ. ನಿಮ್ಮಂಥವರಿಗೆ ಸೂಕ್ತ ವೃತ್ತಿಗಳೆಂದರೆ ಇಂಟೀರಿಯರ್ ಡಿಸೈನಿಂಗ್ ಅಥವಾ ಗೃಹಾಲಂಕಾರ ಕಲಾಕೃತಿಗಳ ಮಾರಾಟ. ಪ್ರಕೃತಿಪ್ರಿಯರಾಗಿದ್ದರೆ ನೀವು ಅರಣ್ಯಾಧಿಕಾರಿಯಾಗಬಹುದು.

೧೦) **ನೈತಿಕತೆ ಮತ್ತು ಸ್ಥಿರ ಸ್ವಭಾವ:** ಈ ವ್ಯಕ್ತಿಗಳಿಗೆ, ತಾವು ನಿರ್ವಹಿಸುತ್ತಿರುವ ಉದ್ಯೋಗ ಮಹತ್ವಪೂರ್ಣದ್ದಾಗಿರಬೇಕು. ಮತ್ತು ಶಾಶ್ವತ ಸ್ವರೂಪದ್ದಾಗಿರಬೇಕು. ಈ ವ್ಯಕ್ತಿಗಳು ತಾವು ನೆಚ್ಚಿಕೊಂಡ ಮೌಲ್ಯಗಳನ್ನು ಹೊರತುಪಡಿಸಿ ಇತರೆ ಮೌಲ್ಯಗಳಿಗೆ ಮಾನ್ಯತೆ ನೀಡಲಾರರು. ತಮ್ಮ ಹುದ್ದೆಯಿಂದ ಅವರಿಗೆ ಮಾನಸಿಕ ಸಮಾಧಾನ ದೊರೆಯುವಂತಿರಬೇಕು. ಮತ್ತು ನೈತಿಕತೆ ಹೆಚ್ಚುವಂತಿರಬೇಕು. ನೀವು ಇಂಥವರಾಗಿದ್ದರೆ ಸೇವಾ ಕಾರ್ಯಗಳು ಬಹಳ ಸೂಕ್ತ.

೧೧) **ಸ್ವಾತಂತ್ರ್ಯ:** ಈ ವಿಭಾಗದಲ್ಲಿ ಹೆಚ್ಚು ಅಂಕಗಳನ್ನು ಪಡೆದಿದ್ದರೆ ನೀವು ಸ್ವಾತಂತ್ರ್ಯಪ್ರಿಯರು. ಆದ್ದರಿಂದ, ಅತಿ ಶಿಸ್ತಿನಿಂದ ಕೂಡಿದ ಉದ್ಯೋಗಗಳಿಂದ ದೂರವಿರಿ. ನಿಮಗೆ ಸೇಲ್ಸ್‌ಮನ್ ಹುದ್ದೆ, ಕಾನೂನು ಸಲಹೆ ಅಥವಾ ವಕೀಲಿ ವೃತ್ತಿಗಳು ಸೂಕ್ತ.

೧೨) **ಸಹಾಯ:** ಈ ವಿಭಾಗದಲ್ಲಿ ಹೆಚ್ಚು ಗುಣಗಳನ್ನು ಪಡೆದವರು ಉಪಾಧ್ಯಾಯರಾಗಬಹುದು, ಶುಶ್ರೂಷಕರಾಗಬಹುದು ಅಥವಾ ವೈದ್ಯರಾಗಬಹುದು. ಸಮಾಜಸೇವಕನಾಗಬಹುದು, ಮನೋವೈಜ್ಞಾನಿಯಾಗಬಹುದು ಅಥವಾ ವಕೀಲನಾಗಬಹುದು.

೧೩) **ಭದ್ರತೆ:** ಈ ವ್ಯಕ್ತಿಗಳಿಗೆ ಸಾಮಾಜಿಕ ಭದ್ರತೆಯೆ ಅತಿ ಮುಖ್ಯ. ಇಂಥವರು ಹೆಸರಾಂತ ಕಂಪನಿಗಳಲ್ಲಿ ನೌಕರಿಮಾಡುವುದು ಒಳ್ಳೆಯದು. ನಿರ್ವಹಿಸುತ್ತಿರುವ ಹುದ್ದೆ ಮೂಲಭೂತ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಅನುವಾಗುವಂತಿರಬೇಕು. ಸಮಸ್ಯಾತ್ಮಕವಾಗಿಯೋ ಅಥವಾ ಅಲ್ಪಕಾಲಾವಕಾಶದ್ದೋ ಆಗಿರುವ ಅವಕಾಶಗಳು ಅಂಥವರಿಗೆ ಸೂಕ್ತವಲ್ಲ.

## ಮೌಲ್ಯಮಾಪನ

| | |
|---|---|
| ೧) ಖಂಡಿತ ನಿಜ -- | ೯ ಗುಣಗಳು. |
| ೨) ಕೆಲವು ಸಾರಿ ಮಾತ್ರ ನಿಜ -- | ೬ ಗುಣಗಳು |
| ೩) ಖಚಿತವಾಗಿ ಹೇಳಲಾರೆ -- | ೩ ಗುಣಗಳು |
| ೪) ನಿಜವಲ್ಲ -- | ೦ ಗುಣ |

ಈ ಗುಣಗಳನ್ನು ನೀವು ಆರಿಸಿದ ಉತ್ತರಗಳಿಗೆ ನೀಡಿ ಪ್ರತಿಯೊಂದು ಅಪವರ್ತನಾ ಮೌಲ್ಯದ ಒಟ್ಟುಗುಣಗಳನ್ನು ತಿಳಿದುಕೊಳ್ಳಿ. ಆ ಮೂಲಕ ನಿಮಗೆ ಸೂಕ್ತ ವೃತ್ತಿ ಯಾವುದೆಂಬುದನ್ನು ತಿಳಿದುಕೊಳ್ಳಬಹುದು.

# ಅಚ್ಚಳಿಯದ ಪುಟಗಳು

## 'ಜೀವನ ಪುಸ್ತಕ'

ಇದು ಈ ಶತಮಾನದ ಮಹಾನ್ ದಾರ್ಶನಿಕ ತತ್ವಜ್ಞಾನಿ ಜೆ. ಕೃಷ್ಣಮೂರ್ತಿಯವರ ಜನ್ಮ ಶತಮಾನೋತ್ಸವ ಸಂದರ್ಭ. ಅವರ 'ಜೀವನದ ಪುಸ್ತಕ' (Book of Life)ದಲ್ಲಿನ ದಿ. ೯.೧೧ ೮೦ ರಂದು ಕೊಲಂಬೋದಲ್ಲಿ ಮಾಡಿದ ಭಾಷಣದ ಅಂಶಗಳಿವು. (ಮೂಲ ಇಂಗ್ಲೀಷ್: ಜೆ. ಕೃಷ್ಣಮೂರ್ತಿ, ಕನ್ನಡ ಅನುವಾದ: ಲೀಲಾ ಗಾರ್ಡಿ, ಪ್ರಕಾಶಕರು: ಬೆಂಗಳೂರು ಎಜ್ಯುಕೇಶನ್ ಸೆಂಟರ್, ಕೃಷ್ಣಮೂರ್ತಿ ಫೌಂಡೇಶನ್, ಇಂಡಿಯಾ -೧೯೯೫).

"ಇಡೀ ಮಾನವಕುಲದ ಕಥೆಯೇ ನಿಮ್ಮಲ್ಲಿದೆ. ಯುಗ ಯುಗಗಳಿಂದ ಮಾನವನು ಯಾವ ಅಪಾರ ಅನುಭವಗಳನ್ನು, ಆಳವಾಗಿ ಬೇರು ಬಿಟ್ಟ ನಾನಾ ಭೀತಿ ಚಿಂತೆಗಳನ್ನು, ಸುಖ ದುಃಖಗಳನ್ನು ಅನೇಕ ನಂಬಿಕೆಗಳನ್ನು ತನ್ನಲ್ಲಿ ಕೂಡಿ ಹಾಕಿದ್ದಾನೆಯೋ ಅವೆಲ್ಲ ನಿಮ್ಮಲ್ಲಿಯೂ ಇವೆ. 'ನೀವು' ಎನ್ನುವುದೇ ಆ ಪುಸ್ತಕ. ಅದನ್ನು ನೀವು, ಗಮನವಿಟ್ಟು ತಾಳ್ಮೆಯಿಂದ ಓದದೆ, ನೀವಿರುವ ಭ್ರಷ್ಟ ಮತ್ತು ನೀತಿಗೆಟ್ಟ ಸಮಾಜವನ್ನು ಎಂದಿಗೂ ಬದಲಾಯಿಸಲಾರಿರಿ.

"ಈ ಪುಸ್ತಕವನ್ನು ಓದಲು ವ್ಯಕ್ತಿಯು, ಈ ಪುಸ್ತಕ, ಏನು ಹೇಳುತ್ತಿದೆ ಎಂಬುದನ್ನು ಕೇಳಿಸಿಕೊಳ್ಳುವ ಕಲೆಯನ್ನು ತಿಳಿದಿರಬೇಕು. ನೀವೇ ಆ ಪುಸ್ತಕ: ಅದು ಎಲ್ಲವನ್ನೂ ತಿಳಿಸುತ್ತದೆ.

"ನನಗೆ ಗೊತ್ತು, ನೀವೆಲ್ಲರೂ ಬಹಳ ಓದಿದವರು ಮತ್ತು ಸುಶಿಕ್ಷಿತರು ಎಂದು ಆದರೂ ನಾನು ಇದೆಲ್ಲವನ್ನು ಬಹಳ ಸರಳವಾದ ಭಾಷೆಯಲ್ಲಿ ಹೇಳುತ್ತಿದ್ದೇನೆ. ಆದರೆ ಯಾವುದೇ ವಸ್ತುವಿಗಾಗಿ ಉಪಯೋಗಿಸಿದ ಪದವು ವಾಸ್ತವಿಕವಾಗಿ ಆ ವಸ್ತುವೇ ಅಲ್ಲ. ಅದು ಕೇವಲ ಪದ. ಪ್ರತೀಕವು ಪ್ರತೀಕವೇ ಹೊರತು ನಿಜವಾದದ್ದಲ್ಲ. ಆದ್ದರಿಂದ ನಾನು ಮೊದಲೇ ಹೇಳಿದಂತೆ ನೋಡುವದು, ಕೇಳಿಸಿಕೊಳ್ಳುವುದು ಮತ್ತು ಕಲಿಯುವದು ಒಂದು ಕಲೆ. ತಾನು ತಿಳಿದುಕೊಂಡದ್ದರಿಂದ ಮನುಷ್ಯನಿಗೆ ಎಂದೂ ಬಿಡುಗಡೆಯೇ ಇಲ್ಲ. ಆದರೆ ಕಲಿಯುವ ಕಲೆ ಇನ್ನೇನೋ ಬೇರೆಯದೆ. ಕಲಿಯುವದು ಎಂದರೆ ಜ್ಞಾನದ ಮಿತಿಗಳನ್ನು ಅನ್ವೇಷಿಸುವದು ಮತ್ತು ಮುನ್ನಡೆಯುವದು. ನಾವೇ ಆಗಿರುವ ಈ



ಪುಸ್ತಕವನ್ನು ಹೇಗೆ ಓದುವದು ಎಂಬುದು ನಮಗೆ ತಿಳಿದಿದ್ದರೆ ಎಲ್ಲ ನೋವುಗಳು ತುಮುಲಗಳು ಕೊನೆಗೊಳ್ಳುತ್ತವೆ. ಈ ರೀತಿಯ ಮನಸ್ಸೇ ಧಾರ್ಮಿಕ ಮನಸ್ಸು ಎನಿಸಿಕೊಳ್ಳುತ್ತದೆಯೇ ಹೊರತು ನಂಬುವ, ಮತಾಚರಣೆಗಳನ್ನು ಮಾಡುವ ಮನಸ್ಸಲ್ಲ. ಮುಕ್ತವಾದ ಮನಸ್ಸೇ ನಿಜವಾದ ಧಾರ್ಮಿಕ ಮನಸ್ಸು. ಮೇಲೆ ಹೇಳಿದ ಪುಸ್ತಕವನ್ನು ಸಂಪೂರ್ಣವಾಗಿ ಓದಿದ ಇಂತಹ ಮನಸ್ಸೇ ಸತ್ಯದ ಅನುಗ್ರಹ ಪಡೆಯುತ್ತದೆ.

"ನೀವು ನಿಮ್ಮ ಮುಖವನ್ನು ನೋಡಿಕೊಂಡಿರಬಹುದು, ತಲೆ ಬಾಚಿಕೊಂಡಿರಬಹುದು, ಮುಖಕ್ಕೆ ಪೌಡರ್ ಲೇಪಿಸಿಕೊಂಡಿರಬಹುದು, ಹೀಗೆಯೇ ಉಳಿದದ್ದೆಲ್ಲ ಮಾಡಿರಬಹುದು. ಆದರೆ ನೀವು ನಿಮ್ಮ ಒಳಗನ್ನೇ ಎಂದೂ ನೋಡಿಕೊಂಡಿಲ್ಲ. ನೀವು ನಿಮ್ಮ ಒಳಗನ್ನು ನೋಡಿಕೊಂಡರೆ ನಿಮಗೆ ನೀವೊಬ್ಬ ಸೆಕೆಂಡ್‌ಹ್ಯಾಂಡ್ ಮನುಷ್ಯನೆಂದು ತಿಳಿಯದೆ? ನಿಮ್ಮನ್ನು ನೀವು ಸೆಕೆಂಡ್ ಹ್ಯಾಂಡ್ ಮನುಷ್ಯನೆಂದು ಪರಿಗಣಿಸುವುದು ಸ್ವಲ್ಪಮಟ್ಟಿಗೆ ಅಸಂತೋಷಕರವೆನಿಸಬಹುದು. ಆದರೆ, ನಮ್ಮೆಲ್ಲರಲ್ಲಿಯೂ ಬೇರೆಯವರ ತಿಳಿವಳಿಕೆಯೇ ತುಂಬಿದೆ- ಯಾವುದೊ ವ್ಯಕ್ತಿ ಹೇಳಿದುದು, ಯಾರೂ ಶಿಕ್ಷಕ ಅಥವಾ ಗುರುವು ಹೇಳಿದುದು, ಬುದ್ಧನು ಕ್ರಿಸ್ತನು ಹೇಳಿದುದು. ಹೀಗೆ ಇನ್ನಾರೋ ಹೇಳಿದುದೇ ನಮ್ಮಲ್ಲಿ ತುಂಬಿರುವುದು. ಅದೂ ಅಲ್ಲದೇ ನೀವು ಶಾಲೆ, ಕಾಲೇಜು ಅಥವಾ ವಿಶ್ವವಿದ್ಯಾಲಯದಲ್ಲಿ ಕಲಿತಿದ್ದರೆ ನೀವು ಏನೇನು ಮಾಡಬೇಕು, ನೀವು ಹೇಗೆ ಯೋಚಿಸಬೇಕು ಎಂದು ಅಲ್ಲಿ ಕೂಡ ಹೇಳಿಕೊಟ್ಟಿರುತ್ತಾರೆ. ಆದ್ದರಿಂದ ನೀವೊಬ್ಬ ಸೆಕೆಂಡ್‌ಹ್ಯಾಂಡ್ ಮನುಷ್ಯ ಎಂಬ ಅರಿವು ನಿಮಗಾದರೆ ಆಗ ನೀವು ಆ ಸೆಕೆಂಡ್‌ಹ್ಯಾಂಡ್ ಗುಣಗಳನ್ನೆಲ್ಲ ಬದಿಗಿರಿಸಿ ನೋಡಬಹುದು.

"ಈ ಪುಸ್ತಕದ ಮೊದಲನೆಯ ಅಧ್ಯಾಯದಲ್ಲಿ ನಾವು ಅತ್ಯಂತ ಅಸಮಂಜಸವಾದ, ಓರಣವಿಲ್ಲದ ಜೀವನವನ್ನು ಸಾಗಿಸುತ್ತಿದ್ದೇವೆ, ಒಂದನ್ನು ಯೋಚಿಸುತ್ತ ಇನ್ನೊಂದನ್ನು ಮಾಡುತ್ತ ಅತ್ಯಂತ ಗೊಂದಲಮಯ ಬಾಳನ್ನು ಬಾಳುತ್ತಿದ್ದೇವೆ ಎಂಬುದನ್ನು ಕಂಡುಕೊಳ್ಳುತ್ತೇವೆ. ಆದ್ದರಿಂದ ಇಲ್ಲಿ ನಿರಂತರವಾದ ವಿರೋಧಾಭಾಸವಿದೆ. ವಿರೋಧಾಭಾಸವಿರುವಲ್ಲಿ ತುಮುಲ, ಸಂಘರ್ಷ ಇದ್ದೇ ಇರುತ್ತದೆ. ಈ ತುಮುಲವೇ ಘರ್ಷಣೆಯೇ ಮಹತ್ವಾಕಾಂಕ್ಷೆ, ಅತೃಪ್ತಿ.

"ನಾವು ವ್ಯವಸ್ಥೆ ಅಥವಾ ಓರಣವೆಂದರೇನು ಎಂಬುದನ್ನು ಕಂಡುಕೊಳ್ಳಬೇಕು. ಈ ಪುಸ್ತಕವನ್ನು ಹೇಗೆ ಓದಬೇಕೆಂದು ತಿಳಿದಿದ್ದರೆ ಅದು ಇದನ್ನೂ ತಿಳಿಸುತ್ತದೆ. ನೀವು ಅವ್ಯವಸ್ಥೆಯಲ್ಲಿದ್ದೀರಿ ಎಂದು ಅದು ಹೇಳುತ್ತದೆ. ಅದನ್ನು ಅರ್ಥಮಾಡಿಕೊಂಡು ಮುಂದಿನ ಪುಟವನ್ನು ತಿರುವಿರಿ, ಆಗ ನಿಮಗೆ ಅವ್ಯವಸ್ಥೆಯಲ್ಲಿರುವುದು ಎಂದರೇನು ಎಂಬುದು ತಿಳಿಯುತ್ತದೆ. ಈ ಅವ್ಯವಸ್ಥೆಯ ಸ್ವರೂಪ ಹೇಗೆ, ಏನು ಎಂಬುದನ್ನು ತಿಳಿದುಕೊಂಡರೆ, ಪುಸ್ತಕವು ಹೇಳುತ್ತಿದೆ- ಅದರ ಅನುವಾದ ಮಾಡಬೇಡಿರಿ. ಆದರೆ ಅದನ್ನು ಸರಿಯಾಗಿ ಓದಿರಿ ಎಂದು. ನೀವು ಓದಿದಾಗ ಅದು ಹೇಳುತ್ತದೆ: ವಿರೋಧಭಾವಗಳು ಇರುತ್ತವೆ. ಮತ್ತು ನೀವು ವಿರೋಧಭಾವದ ಸ್ವರೂಪವನ್ನು ತಿಳಿದಾಗ ಮಾತ್ರ ಅವು ಕೊನೆಗೊಳ್ಳುತ್ತವೆ ಎಂದು. ಎಲ್ಲೆಲ್ಲಿ ಹಿಂದುಗಳು, ಮುಸಲ್ಮಾನರು, ಜ್ಯೂ ಜನರು ಮತ್ತು ಅರಬರು, ಕಮ್ಯುನಿಷ್ಟರು ಮತ್ತು ಕಮ್ಯುನಿಷ್ಟರಲ್ಲದವರು ಎಂಬ ಭೇದಭಾವವಿರುತ್ತದೆಯೋ ಅಲ್ಲೆಲ್ಲ ಪರಸ್ಪರ ವಿರೋಧಭಾವ ತುಮುಲ ಇದ್ದೇ ಇರುತ್ತದೆ. ಈ ತುಮುಲವೇ ಅವ್ಯವಸ್ಥೆಯಾಗಿದೆ. ನೀವು ಯಾವಾಗ ಅವ್ಯವಸ್ಥೆಯ ಗುಣಸ್ವರೂಪವನ್ನು ಸಂಪೂರ್ಣವಾಗಿ ತಿಳಿಯುತ್ತೀರೋ ಆಗ ಆ ತಿಳಿವಳಿಕೆಯ ಆಳದಿಂದ ವ್ಯವಸ್ಥೆಯು ತಾನೇ ತಾನಾಗಿ ಮೂಡುತ್ತದೆ.

"ವ್ಯವಸ್ಥೆ ಅಥವಾ ಓರಣ ಸಹಜವಾಗಿ ಅರಳುವ ಹೂವಿನಂತಹದು: ಆ ಹೂವು, ಆ ಓರಣ ಎಂದೂ ಬಾಡುವದಿಲ್ಲ. ಎಲ್ಲಿ ಭೇದಭಾವವಿದೆಯೋ ಅಲ್ಲಿ ತುಮುಲವಿದ್ದೇ ಇದೆ ಎಂದು ಈ 'ಪುಸ್ತಕ'ವು ಹೇಳುತ್ತದೆ. ಇದನ್ನು ಓದುವದರಿಂದ ಜೀವನದಲ್ಲಿ ಸದಾ ಓರಣವಿರುತ್ತದೆ." ●

● ಸಂಗ್ರಹ : **ಕೆ.ಜಿ. ಕುಲಕರ್ಣಿ**

ಕಥೆ

# ಸೂರ್ಯ ಕಾಣದ ಕಣಿವೆ

• ರಾಜಗೋಪಾಲ ಎಂ.

ಇಂಥಾದ್ದೊಂದು ಪ್ರಸಂಗ:

ದಕ್ಷಿಣಾಪಥದಿಂದ ಬಂದ 'ಯಕ್ಷ' ಉತ್ತರಾಖಂಡದ ಡೆಹರಾಡೂನ್ ತಲುಪಿದ. ಬಸ್ಸು ಇಳಿವಾಗ ಸಂಜೆ ಗಂಟೆ ಐದು. ಈಗಾಗಲೇ ರಂಗೇರಿದ ಬಾನು. ಮಹಾಡೆ ಮಲಗಿದ ಮಂಜು. ಗಪ್ಪೆಂದು ಆವರಿಸಿದ ಚಳಿಗಾಳಿ. ಜರ್ಕಿನ್, ಸ್ವೆಟ್ಟರ್, ಅಂಗಿ, ಬನಿಯನ್ನುಗಳನ್ನೂ ನುಗ್ಗಿ ಎಲುಬು ಹಿಡಿದೆಳೆದ ಚಳಿಗೆ ನಡುಗಿದ. ಬರೇ ಕಿರಿಕಿರಿ ಅನ್ನಿಸಿದ, 'ಎಟಾಚ್ಡ್' 'ಎ ಕ್ಲಾಸ್' 'ಮಾಲಿಕ್' 'ಮಹಾರಾಜ್' ಹೊಟೇಲ್ ಏಜೆಂಟರುಗಳಿಂದ ಪಾರಾಗಲು ನೆನಪಿಗೆ ಬಂದ 'ಮಹಲ್' ಹೆಸರು ಒರಲಿದ. ತಕ್ಷಣ ಉಳಿದವರನ್ನು ಬದಿಗೆ ತಳ್ಳಿ, 'ಹ, ಹ, ಬನ್ನಿ ಬನ್ನಿ' ಅಂದ ಹುಡುಗನಿಗೆ ಬೆಂಜೋಳಿಗೆ ಒಪ್ಪಿಸಿ, ಹೆದ್ದಾರಿ, ಓಣಿ, ಕಾಲ್ದಾರಿಗಳನ್ನು ಎಡವುತ್ತಾ ಹೆಜ್ಜೆ ಹಾಕುತ್ತಿದ್ದಂತೆ ಯಕ್ಷನಿಗೆ ಅನ್ನಿಸಿತು- ಅಬ್ಬಾ ಎಷ್ಟು ದೂರ!

ಮಂಚರೂಪದ ನಾಲ್ಕು ಚಿಲ್ಲರೆ ಕಾಲುಗಳು. ಹಾಸುವ ರಜಾಯಿ, ಹೊದೆಯುವ ರಜಾಯಿ, ತಲೆಕೆಳಗೆ ಇಡಲೂ ರಜಾಯಿ. ಆರಡಿ ಗುಣಿಲೆ ಎಂಟಡಿಯನ್ನು ಆವರಿಸಿದ ಕಾರ್ಡ್‌ಬೋರ್ಡ್ ಗೋಡೆಗಳು. ಕಿಟಕಿ ಇರುವಲ್ಲಿ ಗೋಡೆಯಲ್ಲೊಂದು ತೂತು. ಮೇಲೆ ಮೊಳೆ ಬಡಿದು ಶಿಲುಬೆಗೇರಿದ ಕೊಳೆಬಟ್ಟೆ. ತಲೆ ತಗುಲಿ ಎಚ್ಚೆಯಾಡುವ ವಿದ್ಯುತ್ ವಯರುಗಳು. ಸೂರಿನಲ್ಲಿ ತೂಗುವ ಮಿಣುಕು ವಿದ್ಯುದ್ದೀಪ. ಸರ್ವತ್ರ ಹರಿದಾಡುವ ತಿಗಣೆಗಳು; ಇಂತಹ ಎಷ್ಟೋ ಕೋಣೆಗಳಿರುವ ಇಡೀ ಕಟ್ಟಡಕ್ಕೆ 'ಎಟಾಚ್ಡ್' ಶೌಚಾಲಯ! ಬಹುಶಃ ಶಬ್ದಗಳಾಚೆಗಿನ ಅರ್ಥ ಹುಟ್ಟಿಸಲು ಇದಕ್ಕೆ 'ಮಹಲ್' ಎಂದು ಹೆಸರಿಟ್ಟಿರಬಹುದು ಎನ್ನುವ ಯಕ್ಷನ ಊಹೆಗೆ ಪುಷ್ಟಿ ಕೊಡಲು ಕಾರಣಗಳಿಲ್ಲ! ಒಂದಿಷ್ಟು ಸ್ವಚ್ಛ ಗಾಳಿಯ ಸುಳಿವೂ ಇಲ್ಲದ ಈ ಗುಹೆಯಲ್ಲಿ ಹೇಗಿರಲಿ? 'ಬೇಡ' ಅನ್ನಲೇ. ಆದರೆ ಎದುರು ನಿಂತ ಹುಡುಗನ ಹ್ಯಾಪು ಮೋರೆ ನೋಡಿ 'ಹೂಂ' ಅಂದ.

'ಮಹಲ್' ಎದುರಿನ ನಲ್ಲಿ ನೀರಿನಲ್ಲಿ ಮುಖ ತೊಳೆದು ಡ್ರೆಸ್ ಬದಲಿಸುತ್ತಿದ್ದಂತೆ ಮತ್ತೊಮ್ಮೆ ಆವರಿಸಿದ ಚಳಿ. 'ಆಹಾರ ತರಲೇ ಸಾರ್?' 'ಏನಿದೆ?' 'ರೋಟೀ, ಆಲೂಮಟರ್, ಸಬ್ಜೀ ಬಾಜೀ...' ರೂಮಿನಲ್ಲೇ ರೋಟೀ ಜಗಿಯುತ್ತಿದ್ದಂತೆ ಯಕ್ಷನಿಗೆ ತೋರಿತು. ರೋಟೀ, ಆಲೂ ಮಟರ್ ಪರವಾಗಿಲ್ಲ. ಈ ತಿಗಣೆಗಳ ಕಾಟದ ನಡುವೆಯೂ ನಿದ್ದೆ ಬಂದರೆ ನಾಳೆ ಸುಸ್ತು ಇರದು. ಇಲ್ಲಿನ ತಿರುಗಾಟವನ್ನು ಒಂದೇ ದಿನದಲ್ಲಿ ಮುಗಿಸಿ ನಾಳಿದ್ದು ಯಾನ ಮುಂದುವರಿಸಬಹುದು.

ಗೈಡ್‌ನ ಆಗಮನ. ವಿನಂತಿ. 'ಎಲ್ಲಿಂದ ಬಂದ್ರೀ ಸಾರ್? ಮೊದಲ ಬಾರಿಗೆ ಬರ್ತಿದ್ದೀರಾ ಸಾರ್? ಕ್ಯಾಂಟ್ ವಲಯ ಸುತ್ತಿಸ್ಲೇ ಸಾರ್? ಊಟ, ತಿಂಡಿ ಕಳ್ದು ಇಡೀ ದಿನಕ್ಕೆ ಐವತ್ತು ಕೊಡಿ ಸಾರ್. I most knowledge man ಸರ್' 'ಬೇರೆ ಏನಿದೆಯಪ್ಪಾ. ನಡೆದು ನೋಡಲು?' 'ಸಹಸ್ರಧಾರಾ ಸಾರ್. ಬ್ಯೂಟಿಫುಲ್ ಸಾರ್. ತಪಕೇಶ್ವರ ಸಾರ್, ಫೇಮಸ್ ಸಾರ್. ಗೌರೀಶಂಕರ ಸಾರ್, ವಂಡರಫುಲ್ ಸಾರ್...' 'ನಾನು ಪ್ರಕೃತಿ ಪ್ರೇಮಿಯಪ್ಪ... ಚಾರಣ ಪ್ರಿಯರಿಗೆ ಪ್ರಿಯವಾದ ಜಾಗ ಯಾವುದಿದೆ, ಹೇಳು ಯಜಮಾನಾ...'

'ನಮ್ಮ ಗಚ್ಛೂ ಪಾನೀ- ಇದೆಯಲ್ಲಾ ಸಾರ್.... ತುಂಬಾ ಸುಂದರ. ಕ್ಯಾಂಟಿನ ಹೊರಗೇ ಇದೆ ಸಾರ್. ಕೇವಲ ಎಂಟು ಕಿಲೋಮೀಟರ್ ಸಾರ್. ಅಂಥಾ ಜಾಗ ಇಡೀ ಜಗತ್ತಿನಲ್ಲಿ ಬೇರೆಲ್ಲೂ ಇಲ್ಲ ಸಾರ್. ದೊಡ್ಡ ಕಣಿವೆ ಸಾರ್.... ನಡುವೆ ದಾರಿ ಇದೆ ಸಾರ್. ಅಲ್ಲಿ ಹಕ್ಕಿ ಹಾರೋದೇ ಇಲ್ಲ, ಸೂರ್ಯ ಕಾಣೋದೇ ಇಲ್ಲ ಸಾರ್.' 'ಮತ್ತೆ.... ಅಲ್ಲಿ ಗಾಳಿ ಇದೆಯೇನಪ್ಪ?' 'ಅದೇ ಸಾರ್, ಜಗನ್ಮಾತೆಯ ಅನುಗ್ರಹ ಸಾರ್. ಗಾಳಿ ಇದೆ, ಸ್ವಲ್ಪ ಚಳಿ ಇದೆ. ಜರ್ಕಿನ್, ಸ್ವೆಟ್ಟರ್ ಇದ್ರೆ ನಾಳೆಯೇ ಹೋಗಿ ಬರಬಹುದು ಸಾರ್. ಹೋಗೋಣವೇ ಸಾರ್?' 'ನಾಳೆ ನೋಡೋಣ'. 'ಸಾರ್, ಸಾರ್, ದಯವಿಟ್ಟು ಈಗ್ಲೇ ಹೇಳಿ ಸಾರ್.... ಇಲ್ದಿದ್ರೆ ಬೇರಾರಾದ್ರೂ ಗಿರಾಕಿ ಕುದುರಿಸ್ಬೇಕೂ ಸಾರ್. ತಪ್ಪು ತಿಳ್ಕೋಬೇಡಿ ಸಾರ್. ಬಡವಾ ಸಾರ್. ಹೊಟ್ಟೆ ಪಾಡು ಸಾರ್.'

### ಹೀಗೆ ಯಾತ್ರೆಗೆ ತಯಾರಿ

ಬೆಂಜೋಳಿಗೆ, ನೀರಿನ ಬ್ಯಾಗ್‌ಗಳನ್ನು ಹೊತ್ತ ಗೈಡ್ ಮುಂದೆ, ಕ್ಯಾಮರಾ ಹಿಡಿದ ಯಕ್ಷ ಹಿಂದೆ. ಪವಡಿಸಿದ, ಕುಂತ, ನಿಂತ, ತುದಿ ಕಾಲಲ್ಲಿ ಆತು ಆಕಳಿಸುವ ಗುಡ್ಡಗಳು. ಬೆಟ್ಟಗಳು ಹಿಮಟೋಪಿಯ ಪರ್ವತಗಳು. ಧೂಮ ಎದ್ದಲ್ಲಿ ಧಾಮ



ಗಳು. ದಾರಿ ಕವಲೊಡೆದಲ್ಲಿ ಹೊಟೇಲುಗಳು. ಗುಡಾಣ ಹೊಟ್ಟೆಯ ನೀರಿನ ಟಾಕಿ. ಪುಟ್ಟ ಉದ್ಯಾನಗಳು. ಬೀದಿ ಬದಿಯ ಬಿಡುಜಾಗದಲ್ಲೆಲ್ಲ ಪಸರಿಸಿದ ಹಸುರು. ಅಲ್ಲಲ್ಲಿ ಲಿಲ್ಲಿ, ಗುಲಾಬಿ, ಕಾಡು ಗುಲಾಬಿ, ಕಣಗಿಲ, ಹೆಸರರಿಯದ ಬಣ್ಣ ಬಣ್ಣದ ಹೂಗಳು. ಹಿಮಾಲಯದ ದೊಡ್ಡ ಕರ್‍ರಗಿನ ಕಾಗೆಗಳು, ಪುಟಾಣಿ ಗುಬ್ಬಿಗಳು, ಸುಂದರ ಪಾರಿವಾಳಗಳು, ಡೊಳ್ಳುಹೊಟ್ಟೆಯ ಪುಟ್ಟ ಬೆಟ್ಟದಿಲಿಗಳು... ಯಕ್ಷನಿಗೆ ಚಿರನೂತನ ಪ್ರಕೃತಿಯ ವ್ಯಕ್ತ ತೇಜಸ್ಸಿನ ಒಂದೊಂದು ಬಿಂದುವನ್ನೂ ತಿಳಿಯುವ ತವಕ, ಅನುಭವಿಸುವ ಉದ್ವೇಗ. ಗೈಡ್‌ನಿಗೆ ಪ್ರಶ್ನೆಗಳ ಮೇಲೆ ಪ್ರಶ್ನೆಗಳು. ಗೈಡ್‌ನದು ಚುರುಕಾದ ಮತ್ತು ಚುಟುಕಾದ ಉತ್ತರಗಳು.

## ಅಭ್ಯಾಸ ಬಲ

ಸಾಲು ಮನೆಗಳು. ಒಂದು ಜಗಲಿಯಲ್ಲಿ "ರೈ" ಆರಿಸುತ್ತಿದ್ದ ಹೆಣ್ಣಿನ ಲೋಕ ಗೀತದ



ಸೊಲ್ಲು, ಸ್ಪಷ್ಟ ನಿಖರ. ಅದರದ್ದೇ ಆದ ಧಾಟಿ. ವಿಶಿಷ್ಟ ಲಯ.

**ಕನಲಿ ಕೆಂಡವಾದ, ತಂದೆ ಸೂರ್ಯ;**
**ಗಚ್ಛು ಗೋಳಿಟ್ಟ, 'ತೋರು ಔದಾರ್ಯ'**
ಈಗ ಗೈಡ್ ಮುಂದುವರಿಸಿದ-
**ಲೋಕದ ತಂದೆ, ಕತ್ತಲಿನ ಶತ್ರು ಅಟ್ಟಿಸಿದ;**
**ಗಚ್ಛೂ ಓಡಿದ ಮುಂದೆ,**
**ಪ್ರಿಯೆ ಪಾನಿ ಹಿಂದೆ**

ಯಾರೋ, ಪರಕೀಯ ಸಂಗಡ ಇರುವ ಅರಿವಾಗಿ ಗೈಡ್ ಒಮ್ಮೆಲೇ ಹಾಡು ನಿಲ್ಲಿಸಿದ. ಯಕ್ಷನ ಗಮನ ತನ್ನತ್ತಲೇ ಇದೆಯೆಂದು ಅರಿವಾಗುತ್ತಿದ್ದಂತೆ ನಾಚಿ ಕೆಂಪಾದ. ಯಕ್ಷ ಕೇಳಿದ, 'ಇದು ಏನಪ್ಪಾ ಗಚ್ಛೂ-ಪಾನೀ. ಕತೆ?' ಗೈಡ್ ತೊದಲಿದ. 'ಬೇಡ ಬಿಡಿ ಸಾರ್, ಏನಿಲ್ಲ.' 'ಹೇಳಪ್ಪಾ ಯಜಮಾನಾ, ಕತೆ ಚೆನ್ನಾಗಿಯೇ ಇರುವಂತಿದೆ.' ಯಕ್ಷನ ಒತ್ತಾಸೆ. ಗೈಡ್‌ನಿಗೆ ಮತ್ತೂ ಮುಜುಗರ. 'ಇದೆಲ್ಲ ಹಳ್ಳಿ ಮುಕ್ಕರ ಕತೆ ಸಾರ್. ನಿಮ್ಗೆ ಕಲಿತವ್ರಿಗೆ ನಗು ತರ್ಬಹುದು ಸಾರ್, ಬೇಡ, ಬಿಡಿ' ಯಕ್ಷನ ಸಮಜಾಯಿಷಿ 'ನನಗೆ ಜಾನಪದ ಕತೆ ಅಂದ್ರೆ ಭಾರೀ ಇಷ್ಟ. ಅದಕ್ಕೂ ಅದರದ್ದೇ ಆದ ಸೌಂದರ್ಯ ಇದೆಯಪ್ಪಾ. ಹೂಂ ಹೂಂ ಹೇಳೂ,' ಮಾತಿಗೆ ಕಟ್ಟು ಬಿದ್ದೋ ಎನ್ನುವಂತೆ, ಅಥವಾ ಗಿರಾಕಿ ತಪ್ಪಿ ಹೋದ್ರೆ ಅನ್ನೋ ಭಯದಿಂದೆನ್ನುವಂತೆ ಗೈಡ್‌ನ ಕಥಾರಂಭ.

## ಹೀಗೊಂದು ಉಪಕತೆ

'ಹಿಂದೆ ಅಂದ್ರೆ ತುಂಬಾ ಹಿಂದಿನ ಕತೆ ಸಾರ್, ಇದು. ಸೂರ್ಯನಿಗೆ ದೂನ್ ಅಪ್ಸರೆಯಲ್ಲಿ ಹುಟ್ಟಿದ ಮಗಳು ಪಾನೀ ಸಾರ್. ಅವ್ಳನ್ನು ನಮ್ಮೂರಿನ 'ಗಚ್ಛೂ' ಪ್ರೀತಿಸಿದ. ಪಾನೀಗೂ ಗಚ್ಛೂ ಅಂದ್ರೆ ಪ್ರಾಣ. ಆದ್ರೆ 'ಅಗ್ನಿ'ಯ ಮಗ 'ದೇಹರಾ' ಇದ್ದಾನಲ್ಲಾ- ಅವ್ನೇ, ಸಿಡುಬಿನ ದೇವತೆ- ಪಾನೀ ಹಿಂದೆ ದುಂಬಾಲು ಬಿದ್ದ. ಆಕೆಯ ಮನಸ್ಸು ತನ್ನ ಮೇಲೆ ನೆಟ್ಟಿಲ್ಲ ಎಂದು ತಿಳಿದೂ ದೇಹರಾ ಕುಂತಲ್ಲಿ, ನಿಂತಲ್ಲಿ, ಹೋದಲ್ಲಿ, ಬಂದಲ್ಲಿ ಆಕೆಯನ್ನು ಕಾಡಿದ ಸಾರ್. ಒಂದಿನ ಐದು ಹೇಸರಗತ್ತೆಗಳ ಬೆನ್ನ ಮೇಲೆ ಚೀಲಗಳನ್ನು ಹೊತ್ತು ನೇರವಾಗಿ ಸೂರ್ಯನ ಬಳಿ ಹೋದ. ಸಂಜೆ ಸೂರ್ಯ, ಕುಡಿದಿದ್ದ. ಎದುರು ಚಿನ್ನದ ರಾಶಿ; ವಿನಯದ 'ಮೂರ್ತಿ'ಯಂತೆ; ಅಡ್ಡ ಬಿದ್ದಲ್ಲೇ ನಿವೇದಿಸುವ ಯುವಕ. 'ಏಳು.' ಅವನ ಮುಖದ ಪೂರ್ತಾ ಕಲೆಗಳು. ಮೊದಲು ಕಸಿವಿಸಿ, ಮತ್ತೊಂದು ಗುಟುಕು ಸೋಮ. ವಿರಾಮ ಇನ್ನೊಂದು ಗುಟುಕು. 'ಹೂ, ಹೋಗು, ಪಾನೀ ನಿನಗೆ' - ತಂದೆ ಸೂರ್ಯ ಮಾತು ಕೊಟ್ಟ ಸಾರ್. ದೇಹರಾನನ್ನು ಅತ್ತ ಕಳಿಸಿ, 'ಮಗಳೇ' ಕರೆದ. ಉತ್ತರವಿಲ್ಲ. ಮತ್ತೊಮ್ಮೆ ತಂದೆಯ ಅಧಿಕಾರ ಯುತ ಅಪ್ಪಣೆ 'ಪಾನೀ, ಇಲ್ಲಿ ಬಾ' ಸುದ್ದಿಯಿಲ್ಲ. 'ಎಲ್ಲಿ ಹೋದ್ಲು ಹುಡುಗಿ; ಕತ್ತಲಾಗ್ತಾ ಬಂತಲ್ಲ'- ಹುಡುಕ್ತಾ ಹೋದ ತಂದೆ ಸೂರ್ಯನಿಗೆ ಕಂಡದ್ದು- ಗಚ್ಛೂವಿನೊಂದಿಗೆ ಲಲ್ಲೆ ಹೊಡೀತಿದ್ದ 'ಪಾನೀ' ಸಿಟ್ಟಿನಿಂದ ಸೂರ್ಯ ಅಟ್ಟಿಸ್ಕೊಂಡು ಬಂದ ಸಾರ್. ಗಚ್ಛೂ ಗೋಳಿಟ್ಟ, ಕೇಳಲೇ ಇಲ್ಲ. ಪಾನೀ ಅತ್ತು ಗೋಗರೆದ್ಲು. ತಂದೆಯ ಮನಸ್ಸು ಕರಗ್ಲಿಲ್ಲ. ಪಾನೀ- ಸೂರ್ಯನ ಮಗಳಲ್ವೇ ಸಾರ್. ಎಲ್ಲಿ ಹೇಗೆ ಬೇಕಿದ್ರೂ ಓಡ್ತಿದ್ಲು, ಆದ್ರೆ ಗಚ್ಛೂ ಮನುಷ್ಯ. ಹೇಗೆ ಓಡಿಯಾನು? ಕೊನೆಗೆ ಪ್ರೇಮಿಗಳು ಹಿಮವಂತನನ್ನೇ ಬೇಡಿದ್ರು ಸಾರ್! ಹಿಮಪ್ಪ, ನಮ್ಮೆಲ್ಲರ ತಂದೆ, ಕರುಣಾಮೂರ್ತಿ. ತನ್ನ ಬಲಗಾಲಿನ ಹೆಬ್ಬೆರಳು ಮತ್ತು ಎರಡನೇ ಬೆರಳುಗಳ ನಡುವೆ-

## ಪ್ರಸಂಗಾವಧಾನ

ಗೈಡ್ ಒಮ್ಮೆಲೇ ಕಿರುಚಿದ 'ಸಾವಧಾನ್.' ಯಕ್ಷ ಬೆಚ್ಚಿ ಸೆಟೆದ. ಧುತ್ತೆಂದು ಎದುರು ಸರಿದ ಅಪಾಯದ ಸಂಕೇತ. ಯಕ್ಷ ನಿಂತಲ್ಲೇ ನಡುಗಿದ. ಎಡ-ಬಲಗಳಲ್ಲಿ ತಳಕಾಣದ ಪ್ರಪಾತಗಳು ನಡೆವ ದಾರಿಯಷ್ಟೇ ಪಡೆವ ಹೆಜ್ಜೆಗುರುತುಗಳು. ಯಕ್ಷ ಕುಳಿತ: ತನ್ಮಯತೆಯಿಂದ ಇಕ್ಕೆಡೆಗಳ ಭಯಾನಕ ಆದರೆ ಅನುಪಮ ದೃಶ್ಯಗಳನ್ನು ಕ್ಲಿಕ್ಕಿಸಿದ. ಈ ಹಾಳು ಗೈಡ್ ಮೊದಲೇ ಹೇಳಲಿಲ್ಲ. ಒಂದು ಬೆತ್ತವನ್ನಾದರೂ ತರಬೇಕಿತ್ತು.

ಈಗ ಗೈಡ್‌ನಿಗೆ ಕತೆಯನ್ನು ಮುಂದುವರಿಸುವ ಅದಮ್ಯ ಉತ್ಸಾಹ. 'ಎಲ್ಲಿವರೆಗೆ ಬಂತು

ಸಾರ್, ಹಾಽಽ ಹಾಽಽ ಅದೇ. ಬೆರಳುಗಳ ನಡುವೆ ಆಳ ಕಂದಕದಲ್ಲಿ ದಾರಿ ಮಾಡಿಕೊಟ್ಟ ಸಾರ್. ಅದೇ 'ಗಚ್ಛೂ -ಪಾನೀ.' ಆದ್ರೆ ಅಲ್ಲಿ ಪ್ರಾಣ ವಾಯು ಇಲ್ದೇ ಪ್ರೇಮಿಗಳಿಗೆ ಉಸಿರುಗಟ್ಟಿದಾಗ ಹಿಮಪ್ಪನ ಗೆಳೆಯ- ವಾಯುದೇವ, ಬಂಡೆಗಳನ್ನು ಊದಿ ಗಾಳಿ ಕಳ್ಸಿದ ಸಾರ್. ಹೀಗೆ ಗಚ್ಛೂ-ಪಾನೀ ಸೂರ್ಯನಿಂದ ತಪ್ಪಿಸ್ಕೊಂಡು ಕಣಿವೆಯ ದೊಡ್ಡ ಮೈದಾನದ ಬಳಿ ಬಂದ್ರು ಸಾರ್. ಹಿಮಪ್ಪ ತನ್ನ ಕಾಲಿನ ಕಿರಿಬೆರಳನ್ನೊತ್ತಿ ಒಂದು ಗುಹೆ ಮಾಡಿದ. ಅದನ್ನೇ 'ಗಚ್ಛೂ ಪಾನೀ' ತಮ್ಮ ಮನೆ ಮಾಡ್ಕೊಂಡ್ರು ಸಾರ್.'

## ವರ್ತಮಾನದ ಗಂಟೆ

ಎದುರೇ ಗೇಟು. ಕ್ಯಾಂಟ್ ವಲಯದ ಕೊನೆ. ಗಡಿ ಭದ್ರತಾ ಪಡೆಯ ಜವಾನರಿಂದ ತಪಾಸಣೆ. 'ನಿಮ್ಮ ಹೆಸರೇನು? ಯಾವ ದೇಶಸ್ಥರು, ಮತಸ್ಥರು? ಎಲ್ಲಿ, ಏಕೆ ಹೋಗುವಿರಿ? ಎಂದು ಹಿಂದಣ ಪಯಣ? ಬೆಂಜೋಳಿಗೆಯಲ್ಲಿ ಏನೇನಿದೆ?' ಹೆಸರೊಂದನ್ನು ಬಿಟ್ಟು ಇತರ ಎಲ್ಲಾ ಪಶ್ನೆಗಳ ಉತ್ತರಗಳಿಗೆ ಗೈಡ್‌ನವೇ ಮುತುವರ್ಜಿ. 'ಸರಿ, ಹೋಗಿ ಬಳಿಯೇ ಚಾ ದುಕಾನು!'

## ಹಣತೆತ್ತು ಆತಿಥ್ಯ ಪಡೆದ ಕತೆ

'ಬನ್ನಿ ಯಜಮಾನ್,' 'ವಿಶ್ರಮಿಸಿ, ಮಹಾರಾಜ್' 'ನಿಮ್ಮ ಸೇವೆಗೆ ಅವಕಾಶಕೊಡಿ ಸಾಹುಕಾರ್' ಯಕ್ಷನಿಗೆ ಹಿಟ್ಟಿನ ಮುದ್ದೆ ನಾದುವ, ಉದ್ದುದ್ದ ಹಾವುಗಳನ್ನು ಬಿಚ್ಚುವ, ತಲೆ ಎತ್ತಿದ ಹೆಡೆಗಳನ್ನು ತುಂಡು ತುಂಡಾಗಿಸಿ, ಚೆಂಡುಗಳನ್ನು ಸೃಷ್ಟಿಸುವ ಒಂದೊಂದೇ ಚೆಂಡಾರಿಸಿ, ಅಂಗೈಯಲ್ಲೇ ತಟ ತಟ ತಟ್ಟಿ ಚಪ್ಪಟೆ ಹಪ್ಪಳವಾಗಿಸುವ ಮುಚ್ಚಿದ ಒಲೆಯೊಳಗೆ ಅವಿತು ಕಾದ ಮಣ್ಣಿನ ಮಡಕೆಯ ಒಳಭಾಗವನ್ನು ಆವರಿಸುವ, ಇಕ್ಕಳದಿಂದ ಹೊರಗೆಳೆದಾಗ ತಾಜಾ ರೋಟೀಯ ರೂಪತಾಳುವ.... ಕಣ್ಣೆದುರೇ ನಡೆವ ಮೂರ್ತ ಕ್ರಿಯೆಯ ವಿವಿಧ ಮಜಲುಗಳು ಒಟ್ಟಾಗಿ ಒಂದು ಅದ್ಭುತ ಸೃಷ್ಟಿಯ ನಾನಾ ಹಂತಗಳು. ಕರಟಿದ ರೋಟೀಗಳನ್ನು ಯಜ್ಞಾಧಿಪತಿ ಬೆಂಕಿಗೆಸೆಯುತ್ತಾನೆ. 'ಸ್ವಾಹಾ' ಎಂದು ಕಬಳಿಸುವ, ಮತ್ತೆ ಉಜ್ವಲವಾಗುವ ಅಗ್ನಿಗೆ ಆಗಾಗ್ಗೆ ನೀರಿನ ಸೇತ. ಕೆಟಲ್‌ನಲ್ಲಿಟ್ಟ ನೀರು ಕುದಿಯುವ ಮೊದಲೇ ಚಹಾಪುಡಿ ನೆಗೆತ. ಎರಡು ಗ್ಲಾಸುಗಳಲ್ಲಿ ಕಾಯುತ್ತಿರುವ ಸಕ್ಕರೆ ಹಾಲಿನ ಪುಡಿಗಳ ಮಿಶ್ರಣವನ್ನು ಅದ್ದುವ, ಚಮಚದ ಸದ್ದಿನೊಂದಿಗೆ ಕಟಕಟಿಸುವ 'ಡಿಕಾಕ್ಷನ್ನು' 'ಚಹಾ' ಹೆಸರಿನಿಂದ ಖ್ಯಾತ. 'ಮಧ್ಯಾಹ್ನಕ್ಕೆ ಏನು ಕೊಡಲಿ ಸಾರ್?' ಕ್ಯಾಮರಾಕ್ಕೆ ಹೊಸ ರೀಲು ಹೊಂದಿಸುತ್ತಿದ್ದ ಯಕ್ಷ ಒಮ್ಮೇಲೇ ಬೆಚ್ಚಿ 'ಏನು?' ಅಂದ. 'ಮಧ್ಯಾಹ್ನಕ್ಕೆ ಏನು ತಿಂಡಿ ಒಯ್ತೀರಾ ಸಾರ್?' 'ರೋಟೀ-ಬಾಜೀ ಕೊಡಪ್ಪ' ನೀರಿನ ಬ್ಯಾಗ್ ತುಂಬಿಸಿ ಅಲ್ಲಿಂದ ಹೊರಟಾಗ ಗಂಟೆ ಹತ್ತೂವರೆ.

> **ಸಲಹೆ!**
>
> *ನೆಬ್ರಾಸ್ಕಾದ 'ಫ್ರೆಸ್ ಟ್ರಿಬ್ಯೂನ್' ಪತ್ರಿಕೆಯಲ್ಲೊಂದು ಸಲಹೆ:*
>
> *'ಹಾಲು ಸಂಪೂರ್ಣ ಆಹಾರ. ದಿನಕ್ಕೆ ನೀವು ಕಾಲು ಲೀಟರಿನಷ್ಟು ಹಾಲನ್ನು ೧೨೦೦ ತಿಂಗಳುಗಳವರೆಗೆ ಕುಡಿಯುತ್ತಲೇ ಹೋಗಿ. ನಿಮಗೆ ನೂರು ವರ್ಷ ಪೂರ್ತಿಯಾಗಿರುತ್ತದೆ!"*

## ಬೀಳ್ಕೊಡುಗೆಯ ನಡುವೆ

ಆಕ್ರೋಟು, ದೇವದಾರು, ಪೈನ್ ಮರಗಳು ಮರಕುಟಿಗನ ಹಕ್ಕಿ ಇಲ್ಲೂ ಮರಕುಟುಕುತ್ತಿದೆ. ಬಂಡೆಗಳು, ಸ್ಲೇಟುಗಳು, ಅಲ್ಲಲ್ಲಿ ನೀರಿನ ಸೆಲೆ. ಜೀರುಂಡೆ ಧ್ವನಿ. ಪುಟ್ಟ ಹಕ್ಕಿಯ ಆರ್ತನಾದ, ಅಟ್ಟಿಸಿಕೊಂಡು ಬರುವ ಕಾಗೆಗಳ ಕರ್ಕಶ ಸ್ವರ.

ಹರಳು ಕಲ್ಲುಗಳು, ಹೊರಳು ಕಲ್ಲುಗಳು, ಸ್ವಲ್ಪ ಎಡವಿದರೂ ಎತ್ತಿ ಎಸೆವ ಉರುಳು ಕಲ್ಲುಗಳು, ಬಂಡೆಗಳೆಡೆಯಿಂದ ಹೊರಗಿಣುಕುವ ಓತಿಕ್ಯಾತಗಳು.... ಇಲ್ಲೆಲ್ಲಾ ಸದಾ ಓಡಿಯಾಡುವ ಗೈಡ್‌ನದು ಅಭ್ಯಾಸೀ ನಡಿಗೆ. ಚುರುಕಾಗಿ ಉಸಿರಾಡುವಷ್ಟೇ ಸಹಜವಾಗಿ ಎಲ್ಲಿಯೂ ಎಡವದೆ ಸಾಗುವ ಅವನ ಹಿಂದೆ ಬೆಳ್ಳಿಬೆಟ್ಟಗಳ ಸೌಂದರ್ಯವನ್ನು ಹೀರುತ್ತಾ ಬರುತ್ತಿರುವ ಯಕ್ಷ.

## ಇದು ಪ್ರಕೃತಿ ಪೂಜೆ

ಎಲ್ಲೋ ಲೋಕಗೀತದ ಅಸ್ಪಷ್ಟ ಧ್ವನಿ. ಎಲ್ಲೂ

ಮನೆಗಳಿಲ್ಲ, ಜನರ ಸುಳಿವೂ ಇಲ್ಲ. ಗೈಡ್ ದೊಡ್ಡ ನಿಟ್ಟುಸಿರುಬಿಟ್ಟ. 'ಇದೇ ಸಾರ್. ಮಕ್ಕಳಿಲ್ಲದ ಗಚ್ಚೂ- ಪಾನೀ ಕೈ ಕೈ ಹೊಸೆದು ತೊಟ್ಟಿಲು ತೂಗುವ ಗೀತ.... ಪಾಪ.' 'ಕತೆ ಅರ್ಧದಲ್ಲೇ ಉಳಿದಿತ್ತಲ್ಲ.' 'ಹೌದು ಸರ್.... ಇನ್ನೆಲ್ಲ ದುಃಖದ್ದೇ ಗೀತ. ಗೋಳಿನದ್ದೇ ಕತೆ ಸಾರ್. ತಂದೆ ಸೂರ್ಯ ಭಾರೀ ಪ್ರಯತ್ನಪಟ್ಟ. ಆದ್ರೆ ಇಬ್ರೂ ದಕ್ಕಲೇ ಇಲ್ಲ. ದೇಹರಾ ಮಾತ್ರ ಕೊಟ್ಟ ಮಾತು ನೆನಪಿಸ್ತಾನೇ ಇದ್ದ. ಕೊನೆಗೆ ಹಿಮಪ್ಪನನ್ನೇ ಇಬ್ರೂ ಕಾಡಿದ್ರು. ಆದ್ರೆ ಹಿಮಪ್ಪ ಪ್ರೇಮಿಗಳನ್ನು ಬಿಟ್ಟು ಕೊಡ್ಲಿಲ್ಲ. ಅಸಹಾಯಕತೆಯಿಂದ, ಸಿಟ್ಟಿನಿಂದ ಸೂರ್ಯ ಶಾಪಕೊಟ್ಟ. ಗಚ್ಚೂ- ಮೇಲೆ ಬಂದ್ರೆ ಸುಟ್ಟು ಭಸ್ಮವಾಗು; ಪಾನೀ ತಂದೆ ಮಾತು ಮುರಿದ ನೀನು ಬಂಜೆಯಾಗು; ಎಂಥ ತಂದೆ ಸಾರ್.... ಕ್ಷಮೆ ಎಂಬುದೇ ಇಲ್ಲ. ಗಚ್ಚೂ- ಪಾನೀ ಗುಹೆಯಲ್ಲಿ ಎದುರಿನ ಮೈದಾನದಲ್ಲಿ, ಕಣಿವೆಯಲ್ಲಿ ಓಡಿಯಾಡ್ತಾ ಬಹುಕಾಲ ಬಾಳಿದ್ರು ಸಾರ್. ಗಚ್ಚೂ-ಪಾನೀಗೆ ಮಕ್ಕಳಾಗ್ಲೇ ಇಲ್ಲ; ನಮ್ಮ ಊರಿನ ಜನ ತುಂಬಾ ಒಳ್ಳೇವ್ರು. ಅವರಿರುವಷ್ಟು ಕಾಲವೂ ಆಹಾರ ಒಯ್ದು ಕೊಡ್ತಿದ್ರು ಸಾರ್. ಪಾನೀ ಹಾಗೇ ಇದ್ಳು. ದೇವ್ರ ಮಗಳಲ್ವೇ ಸಾರ್. ಆದ್ರೆ ಗಚ್ಚೂ ಮನುಷ್ಯ.

ಕಾಲ ಸರಿದಂತೆ ಮುದುಕ ಆದ. ಒಂದಿನ ಆಹಾರ ಒಯ್ದ ಜನ ನೋಡಿದ್ರೆ ಕುಳಿತೇ ಇದ್ದ ಪಾನೀ ತೊಡೆಯಲ್ಲಿ ಗಚ್ಚೂ ಮಲಗಿದ್ದ ಸಾರ್... ಮಾತಿಲ್ಲ, ಚಲನೆಯಿಲ್ಲ, ಮುಟ್ಟಿ ನೋಡಿದ್ರೆ ಎಲ್ಲ ತಣ್ಣಗಾಗಿತ್ತು. ಇಬ್ರನ್ನೂ ಅಲ್ಲೇ ಗೋರಿ ಮಾಡಿದ್ರು. ವಿಚಿತ್ರ ಅಂದ್ರೆ, ತಂದೆ ಸೂರ್ಯ ಮಾತ್ರ, ತನ್ನ ಮಗಳು ಇನ್ನೂ ಜೀವಂತ ಇದ್ದಾಳೇಂತ್ಲೇ ನಂಬಿದ್ದಾನೆ ಸಾರ್. ಪ್ರತಿವರ್ಷ ನಮ್ಮೂರ್ರ ಜಾತ್ರೆಯಲ್ಲಿ ಹಿಮಪ್ಪನ ಪಾತ್ರಿ-ದರ್ಶನ ಬಂದು ಇದನ್ನೇ ಹೇಳಿದ್ರೂ ಸೂರ್ಯನಿಂದು ಒಂದೇ ಪ್ರಶ್ನೆ- ದೇವ್ರ ಮಗಳಿಗೆ ಸಾವಿದೆಯೇ ಅವ್ಳು ಸತ್ತದ್ದೇ ಆದ್ರೆ ನಾನು ದೇವ್ರೇ? ಹೀಗಿದೆ ಸಾರ್ ನಮ್ಮ ಗಚ್ಚೂ-ಪಾನೀ ಕತೆ. ನಿಮಗೆಷ್ಟು ಹಿಡಿಸ್ತೋ ಸಾರ್, ಈ ಹಳ್ಳಿ ಮುಕ್ಕರ ಕತೆ.'

## ಉಪಕತೆ ಸಮಾಪ್ತಿ

ಗಚ್ಚೂ-ಪಾನೀ ಕಣಿವೆಯನ್ನು ಸೂರ್ಯ ನೋಡದಿರುವುದು ಒಂದು ಶಾಶ್ವತ ಸತ್ಯ. ದೇವರ ಮಗಳ ಸಾವಿನದು ಉತ್ತರವಿಲ್ಲದ ಪ್ರಶ್ನೆ. ಹೀಗೆ ಕತೆ ಬೆಳೆಯುವ ಪ್ರಕ್ರಿಯೆಯಲ್ಲೇ ಒಂದು ಬಲು ದೊಡ್ಡ ಒಗಟನ್ನು ಸೃಷ್ಟಿಸುವ ಜಾನಪದ ಕತೆಯ ಅಗಾಧ ಶಕ್ತಿಯನ್ನು, ಅನಂತ ಸೊಗಸನ್ನು ಯಕ್ಷ ಬಹುವಾಗಿ ಮೆಚ್ಚಿದ. ಆದರೆ ಈ ವಿಶಿಷ್ಟ ಆಯಾಮದ ವಿವರಣೆ ಗೈಡ್‌ನ ಅರಿವಿನ ಮಟ್ಟದ ಆಚೆಗಿನದು ಎಂದು ಸುಮ್ಮನಾದ.

ಮರಗಳು ದೂರವಾಗುತ್ತಿವೆ. ಮರಗಳ, ಪೊದರುಗಳ ನೆರಳಿಲ್ಲದಲ್ಲಿ ಪ್ರಖರ ಬಿಸಿಲು. ಯಕ್ಷ ಜರ್ಕಿನ್ ಬಿಚ್ಚಿದ. ಬಂಡೆಗಳ ಸೆರೆಯಿಂದ ಟಿಸಿಲೊಡೆವ ಪುಟ್ಟ ಸಸಿ, ತುದಿಯಲ್ಲೊಂದು ಹೆಸರರಿಯದ ಚಿಕ್ಕ ನೀಲಿ ಹೂ. ಶಿಲೆಯಲ್ಲೂ ಬೇರು ಇಳಿಸುವ ಹುಲ್ಲು. ಹೊಳೆಯುವ ಎಲೆಗಳ ಸಸಿ; ಬಲವಾದ ಕಾಂಡ, ಬೇರು. ಎಲೆಗಳ ಒಂದು ಭಾಗವೇ ಆದ ಕೆಂಪು ನೇರಿಳೆ ಹಣ್ಣುಗಳು. ಯಕ್ಷ ಕ್ಲಿಕ್ಕಿಸುತ್ತಾ ಹೋದ.

ಗೈಡ್‌ಗೆ ಬಹಳ ಬೇಸರ. ತಮ್ಮೂರ್ರಿನ ಉಸಿರೇ ಆದ ಇಷ್ಟು ಚೆಂದದ ಕತೆಯ ಬಗ್ಗೆ ಒಂದು ಮೆಚ್ಚುಗೆಯ ಮಾತೂ ಹೇಳದ ಈ ಆಸಾಮಿ! ಒಟ್ಟಾರೆ ಈ ಕಲಿತ ಜನವೇ ಹೀಗೆ. ನಮ್ಮ ಜನರ ನಡೆ-ನುಡಿ, ಬದುಕೋ ರೀತಿ ಎಲ್ಲ ತಿಳಕೊಳ್ಳ ಬೇಕು; ಆದರೆ ಮೀಸೆಯಡಿ ಗೇಲಿ ಮಾಡಲಷ್ಟೇ ಬೇಕು. ಕತೆ ಹೇಳಲು ಅಷ್ಟು ಪೀಡಿಸಿದ ಈ ಮಹಾಮನುಷ್ಯ ಈಗ ಮಾತ್ರ ಹಾss ಹೂss ಅನ್ನೋದಿಲ್ಲ!

ಯಕ್ಷ ಯೋಚಿಸಿದ ಸಹಜವಾಗಿ ಅರಳುವ ಹೂವಿನ ಸೌಂದರ್ಯ, ನಿಂತಲ್ಲೇ ಹೊಸತಾಗುವ ಗಾಳಿಯ ಮಾದಕತೆ ಕ್ಷಣಕ್ಷಣವೂ ಬಣ್ಣ, ರೇಖೆಗಳನ್ನು ಬದಲಿಸುವ ಬೆಟ್ಟಗಳ ಸೊಗಸನ್ನು ಶಬ್ದಗಳಲ್ಲಿ ವ್ಯಕ್ತಪಡಿಸುವುದು ಕಷ್ಟ. ಈ ಫೋಟೋ ಎನ್ನುವುದು ಹೂ, ಬೆಟ್ಟಗಳ ನೆನಪನ್ನು ಕೊಂಚವಾದರೂ ಶಾಶ್ವತವಾಗಿಸುವ ಮಾಧ್ಯಮವಲ್ಲವೆ?

ತಿರುವಿನಲ್ಲಿ ಗುಡ್ಡ ಜರಿತ. ಮಣ್ಣು ಕುಸಿಯು

ತ್ತಲೇ ಇದೆ. ನೀರು, ಸ್ಲೇಟು ಪದರು, ಮಣ್ಣುಗಳ ಕಲಬೆರಕೆ. ಇದ್ದ ಕಾಲ್ದಾರಿಯನ್ನೂ ಮುಚ್ಚಲು ಬೆಟ್ಟದ ಯತ್ನ ಯಕ್ಷನ ಆತಂಕ. 'ಹೋಗಬಹುದೇ'- ಗೆ ಉತ್ತರ ಹೇಳುವ ಬದಲು ಗೈಡ್ ಮಗುಮ್ಮಾಗಿ ನಿಂತ. ಅತ್ತಿತ್ತ ನೋಡಿದ. ಮತ್ತೆ ಒಂದು ಚಪ್ಪಟೆ ಕಲ್ಲನ್ನು ಆಯ್ದು ತಂದು ಎತ್ತಿ ಕೆಸರಿಗೆ ಎಸೆದ. ಅದರ ಮೇಲೆ ನಿಂತು ಒಂದಾದ ನಂತರ ಇನ್ನೊಂದು ಕಲ್ಲನ್ನು ನಿರ್ದಿಷ್ಟ ಅಂತರದಲ್ಲಿ ಎಸೆಯುತ್ತಾ ಹೋದ. ಆ ತುದಿ ತಲುಪಿದೊಡನೆಯೇ ಯಕ್ಷನಿಗೆ ಬರಲು ಸಂಜ್ಞೆ ಮಾಡಿದ. ಯಕ್ಷನಿಗೆ ಈಗಲೂ ಅನ್ನಿಸಿತು. ಆಧಾರಕ್ಕೊಂದು ಬೆತ್ತ ಇರಬೇಕಿತ್ತು. ಕಲ್ಲುಗಳ ಮೇಲೆ ಕಪ್ಪೆ ಕುಣಿದಂತೆ ಸಾವರಿಸುತ್ತಾ ಸಾಗಿದ ಯಕ್ಷನಿಗೆ, ಮಳೆಗಾಲದಲ್ಲಿ ತನ್ನೂರ ಅಡಿಕೆ ತೋಟಕ್ಕೆ ಹೀಗೆ ಜಿಗಿಯುತ್ತಾ ಹೋಗುವ ನೆನಪಾಯ್ತು.

### ಈ ಹಾಳು ನೆನಪು

ಅಬ್ಬಾ ಸೆಕೆ! ಯಕ್ಷ ಸ್ವೆಟ್ಟರ್ ಕಳಚಿದ. ಬಂಡೆಗಳು ಬೆಳಕನ್ನು ಪ್ರತಿಫಲಿಸುತ್ತವೆ. ಕಣ್ಣು ಕೋರೈಸುತ್ತಿದೆ. ಗಾಳಿಯೂ ಬಿಸಿಯೇರುತ್ತಿದೆ. ದೂರದ ಹಿಮದ ಬೆಟ್ಟಗಳು ಬೆಳ್ಳಿಗಟ್ಟಿಗಳಾಗಿವೆ. ಅಂಚುಗಳಲ್ಲಿ ಕರಗಿ ಹರಿವ ಹಿಮ, ಬೀಸುವ ಗಾಳಿ, ಬೆಳಕಿನ ಪ್ರತಿಫಲವು ಒಟ್ಟಾಗಿ ಬಿಳಿ ರೇಶಿಮೆ ಸೀರೆಯ ಅದುರು ಪದರುಗಳಂತಿವೆ, ಅಥವಾ ಚಲಿಸುವ ಪಾದರಸದಂತಿದೆ. ಅಥವಾ ಯಕ್ಷನಿಗೆ ಫಕ್ಕನೆ ನೆನಪಾಯ್ತು. ಇದು ಮಧ್ಯಾಹ್ನದ ಉರಿಬಿಸಿಲಿಗೆ ಅಲೆಅಲೆಯಾಗಿ ಬಡಿವ ಸಾಗರದ ತೆರೆ ಸುರುಳಿ ಬಿಚ್ಚಿದಂತಿದೆ. ಅಥವಾ.... ಅಥವಾ.... ಯಕ್ಷ ಯೋಚಿಸಿದ. ಇದು ಹೀಗೂ ಇರಬಹುದು, ಅಂದರೆ ಹಿಮದ ಬೆಟ್ಟದ ಅಂಚಿನಂತಿದೆ..... ಹss ಹಾss ಇದನ್ನು ಹೋಲಿಕೆಯಲ್ಲಿ ಹಿಡಿದಿಡಬೇಕೆನ್ನುವ ಕೆಟ್ಟ ಹಟವೇಕೆ!

ಸುಂದರ ಡೂಂಗಾದ ಬೋಗುಣಿಯಲ್ಲಿ ಹೀಗೆ ಒಟ್ಟಾಗಿ ಮಕಾಡೆ ಮಲಗಿದ ಹಿಮಕ್ಕೆ ಗಂಗೆಯ ರೂಪದಲ್ಲೋ ಯಮುನೆಯ ಹೆಸರಿನಲ್ಲೋ ಸಾಗರ ಸೇರುವ ತವಕವಿದೆ. ಈಗ ಯಕ್ಷ ನಕ್ಕ. ನಿಮಿತ್ತಕ್ಕೆ ಭಗೀರಥನಲ್ಲದಿದ್ದರೂ ಒಮ್ಮೆ ದ್ರವರೂಪಕ್ಕೆ ತಿರುಗಿದ ಹಿಮ, ಪರ್ವತದಿಂದ ಕೆಳಗಿಳಿಯಲೇಬೇಕು. ಮುಂದೆ ಹರಿಯಲೇಬೇಕು. ಎತ್ತರದಿಂದ ತಗ್ಗಿಗೆ ಹರಿವ ನೀರಿನ ಸ್ವಾಭಾವಿಕ ಗುಣಧರ್ಮಕ್ಕೆ ಪೂರಕವಾಗಿ ಎಷ್ಟೆಲ್ಲ ಕಲ್ಪನೆಗಳು, ಕತೆಗಳು, ಪುರಾಣಗಳು!

'ಇನ್ನು ಗಚ್ಛೂ ಪಾನೀ ಸಾರ್... ಕೆಳಗಿಳಿಯೋಣವೇ?' ನಡೆಯುತ್ತಿದ್ದಂತೆ ಹಠಾತ್ ಎದುರಾಗುವ ಯಾಣದ ಹೆಬ್ಬಂಡೆಗಳಂತೆ ಧುತ್ತೆಂದು ಪ್ರತ್ಯಕ್ಷವಾಗುವ ಬಂಡೆಗಳ ರಾಶಿ ಅಥವಾ ಬಂಡೆಗಳದ್ದೇ ಬೆಟ್ಟಗಳು. ನಡುವೆ ಇಕ್ಕಟ್ಟಾದ ಕೆಳಗಿಳಿಯುವ ದಾರಿ. ಯಕ್ಷನಿಗೆ ಎಲ್ಲಿಲ್ಲದ ಆಶ್ಚರ್ಯ. ಎಲಾ ಇವನ! ಹಿಮಾಲಯದಲ್ಲಿ ಎಲ್ಲೂ ಬಂಡೆಗಳು ಇಷ್ಟು ಗಟ್ಟಿಯಾಗಿಲ್ಲವಲ್ಲ. ತೀರಾ ಇತ್ತೀಚಿನ ಹಿಮಯುಗದ ನಂತರವಷ್ಟೇ ನಿರ್ಮಿತವಾದ, ಬೆಟ್ಟಗಳ ಶ್ರೇಣಿಯಲ್ಲೇ ಅತಿ ಎಳೆಯದಾದ, ಹಿಮಾಲಯದಲ್ಲಿ ಬಂಡೆಗಳು ಇನ್ನೂ ಪೂರ್ತಿಯಾಗಿ ಬೆಳೆದಿಲ್ಲ. ಅಂಟುಗುಣವೇ ಇಲ್ಲದ ಈ ಮಣ್ಣಿನಲ್ಲಿ ಸದಾ ಬೆಟ್ಟ ಜರಿತ. ಇದಕ್ಕೆ ವ್ಯತಿರಿಕ್ತವಾಗಿ ಈ ಬಂಡೆಗಳು ಇಷ್ಟು ಗಟ್ಟಿಯಾಗಿವೆಯಲ್ಲ. ತನ್ನ ಓದಿನ ಅನುಭವದಿಂದ ವಾಸ್ತವಿಕದ ಅನುಭವ ಬೇರೆಯೇ ಆಗಿದೆಯಲ್ಲ....!

### ಆಭಾಸಗಳ ಸರಮಾಲೆ

ಇಕ್ಕಟ್ಟಾದ ದಾರಿಯ ಇಕ್ಕಡೆಗಳಲ್ಲೂ ಬಂಡೆಗಳ ಸಾಲು; ಮರಗಳಿಲ್ಲ, ಪೊದರುಗಳಿಲ್ಲ, ಒಂದು ಪುಟ್ಟ ಸಸಿಯೂ ಇಲ್ಲ. ಬಂಡೆಗಳ ಸೆರೆಯಿಂದ ಇಳಿದು ಬಂದ ಗಾಳಿ ಎಷ್ಟೋ, ಅಷ್ಟು ಮಾತ್ರ ಇಲ್ಲಿನ ಬೀಸುಗಾಳಿ. ಮೇಲೆ ನೋಡಿದರೆ ಕಡು ನೀಲಿ ಆಕಾಶ. ಸುತ್ತಲಿನ ಬೆಟ್ಟಗಳ ರುಂಡವಷ್ಟೇ ತಡವುವ ಸೂರ್ಯನ ಪ್ರಖರ ಬಿಸಿಲು. ವಾತಾವರಣದಲ್ಲಿ ಆಮ್ಲಜನಕ ಕಡಿಮೆಯಾಗುವುದು, ಹಿಮಾಲಯದಲ್ಲಿ ಬೆಟ್ಟ ಏರಿದಂತೆ ಮಾತ್ರವಲ್ಲ, ಕಣಿವೆ ಇಳಿದಾಗಲೂ ಎಂದು ಯಕ್ಷನಿಗೆ ಮೊದಲ ಅನುಭವ. ನಿಧಾನವಾಗಿ ಆರಂಭವಾದ ತಲೆಸಿಡಿತ, ಕೆಳಗಿಳಿದಂತೆ ಹೆಚ್ಚುತ್ತಿದೆ. ಆದರೂ ಸಾವರಿಸಿಕ್ಕೊಸೋಣವೆಂದರೆ ಎಲ್ಲ ಕಡೆಯಿಂದ ಆವರಿಸಿದ ಬಂಡೆಗಳು. ನಡೆಯಲೆಷ್ಟೋ ಅಷ್ಟು ಕಾಲ್ದಾರಿ,

ಅತ್ತಿತ್ತ ಬಾಗಿದರೂ ಮೈತಾಗುವ ಕಲ್ಲುಗಳು.

ಒಮ್ಮೆಲೇ ಚಳಿಯ ಅನುಭವ. ಯಕ್ಷ ಸ್ವೆಟರ್ ಏರಿಸಿದ. ಮೊದಲ ಬಾರಿಗೆ ಗೈಡ್ ನಕ್ಕ 'ಜರ್ಕಿನ್ ಹಾಕ್ಕೊಳ್ಳಿ ಸಾರ್. ಇನ್ನು ಚಳಿ ಹೆಚ್ಚುತ್ತಾ ಹೋಗ್ತಿದೆ.' ಬಂಡೆಗಳ ಸೆರೆಯಿಂದ ಒಸರುವ ನೀರು, ಹರಿದು ದಾರಿ ಪಸರಿಸುತ್ತಿದೆ. ನೀರನ್ನು ತಪ್ಪಿಸಿ ಮುಂದೆ ಸಾಗುತ್ತಲೇ ಇರುವ ಗೈಡ್. ಈ ಹಾಳು ತಲೆನೋವಿನಿಂದ ಕೊಂಚ ಪಾರಾಗಲಾದರೂ ನೀರು ಮುಖಕ್ಕೆ ಸಿಂಪಡಿಸಬೇಕು. ಮುಟ್ಟಲು ಬಗ್ಗಿದ ಯಕ್ಷನಿಗೆ ಕೈಮರಗಟ್ಟುವ ಚಳಿಯ ಹೊಡೆತ. ಗೈಡ್ ತಿರುಗಿ ಒದರಿದ. 'ಬೇಡ ಸರ್, ನೀರು ಮುಟ್‌ಬೇಡಿ. ಇಲ್ಲಿನ ಹವಾಮಾನದಲ್ಲಿ ಮೈಗೆ ಚಳಿ ಹಿಡಿದ್ರೆ, ಮತ್ತೆ ಏನು ಮಾಡಿದ್ರೂ ಮೈ ಬಿಸಿ ಏರೋದಿಲ್ಲ. ದೇಹ ಸ್ವಸ್ಥ ಸ್ಥಿತಿಗೆ ಮರಳೋದಿಲ್ಲ. ಯಕ್ಷನಿಗೆ ಇದೂ ಒಂದು ಹೊಸ ಅನುಭವ. ಚಳಿಗಾಳಿಗೆ ಸಿಕ್ಕವರ ಕೈಕಾಲು ಎದೆ ತಿಕ್ಕಿದರೆ, ಯಥಾಸ್ಥಿತಿಗೆ ಬರುವರೆನ್ನುವುದೇ ಅವನಿಗೆ ಓದಿನಿಂದ ಗೊತ್ತಿದ್ದ ವಿಷಯ.

ಇಲ್ಲಿ ಗಾಳಿ ಬರೇ ನಿಂತಂತೆ ತೋರುವುದಿಲ್ಲ. ಕೊಂಚ ಬೀಸುತ್ತಿದೆ. ಎಲ್ಲಿಂದ ಬರುತ್ತಿರಬಹುದು? ಎಲ್ಲಿ ನೋಡಿದರೂ ಬಂಡೆಗಳು, ಕಣ್ಣೆತ್ತರ ಹರಿಸಿದಷ್ಟೂ ಕಲ್ಲುಗಳು, ಹೆಜ್ಜೆ ಇಟ್ಟಾಗಲೂ ಮೈತಾಗುವ ಶಿಲೆಗಳು- ಇವುಗಳಿಗೆಲ್ಲಿ ಸೆರೆ? ಎಲ್ಲಿ ಗಾಳಿ ಬರಲು ದಾರಿ? ಬಾಗಿದ ಬಂಡೆಯಿಂದ ತೊಟ್ಟಿಕ್ಕುವ ನೀರು. ಗೈಡ್ ಟೋಪಿ ಓರೆಯಾಗಿಸಿ, ಜರ್ಕಿನ್ ಸರಿಸಿದ. ಒಂದಿಷ್ಟು ನೀರು ದೇಹಕ್ಕೆ ತಾಗದಂತೆ ಮುಂದೆ ಹೋದ. ಯಕ್ಷ ಎಷ್ಟೇ ಯತ್ನಿಸಿದರೂ ಟೋಪಿ ಎಡೆಯಿಂದ ನೀರು ಕುತ್ತಿಗೆಯ ಒಳಗಿಳಿದಾಗ ಮತ್ತೊಮ್ಮೆ ಮೈ ಸೆಟೆಯುವ ಚಳಿ. ಎಲ್ಲೆಲ್ಲೂ ಬಂಡೆಗಳ ಸೆರೆ, ನೀರಿನ ಸೆಲೆಗಳಿರುವಲ್ಲಿ ಹೊರಗಿಣುಕುವ ಕೆಲವೊಮ್ಮೆ ವಿಜೃಂಭಿಸುವ ಹುಲ್ಲು ಸಸಿಗಳು ಇಲ್ಲಿ ಒಂದೂ ಕಾಣುತ್ತಿಲ್ಲವಲ್ಲ. ಯಕ್ಷನಿಗೆ ಫಕ್ಕನೆ ನೆನಪಾಯ್ತು. ಕ್ಯಾಮರಾದೊಳಗೆ ಏನಾದರೂ ನೀರು ನುಗ್ಗಿರಬಹುದೆ... ಮುಂದೆ ಬಿಡುಜಾಗ ಸಿಕ್ಕಲ್ಲಿ ನೋಡಬೇಕು.

ಇಲ್ಲ, ಅಸಾಧ್ಯ ತಲೆಸಿಡಿತ. ಒಂದು ಗುಳಿಗೆಯಾದರೂ ನುಂಗಬೇಕು. ಪ್ಯಾಂಟಿನ ಕಿಸೆ ತಡವಿದ. ಊಹೂಂ. ಬೆಂಜೋಳಿಗೆಯಲ್ಲಾದರೂ ಇರಬಹುದೆ? ಇಲ್ಲ, ನಿನ್ನೆಯೇ ಮುಗಿದುಹೋಗಿರಬೇಕು. ಡೆಹರಾಡೂನ್‌ನಲ್ಲಿ ಖರೀದಿಸಬೇಕಿತ್ತು. ಈ ಹಾಳು ಮರೆವು. ಗೈಡ್‌ಗೆ ಆಶ್ಚರ್ಯ. ಈ ಯಾತ್ರಿಕನಿಗೇನಾಗಿದೆ? ಮೈ-ಕೈ ಪರಚಿಕೊಳ್ತಿದ್ದಾನಲ್ಲ... ಏನೂ ಹೇಳೋದಿಲ್ಲ. ದಕ್ಷಿಣದಿಂದ ಬಂದವನಲ್ವೇ... ಗಾಳಿ ಕಡಿಮೆಯಾದಾಗ ತಲೆ ಸುತ್ತುತ್ತಿರಲೂಬಹುದು. ಅವನಾಗಿ ಕೇಳ್ಲಿ ನನಗೇನು.... ಏನೇ ಹೇಳಿ, ಈ ಗಿರಾಕಿ ಸುಖವಿಲ್ಲ. ಇವನಲ್ಲಿ ಭಾವನೆಗಳೇ ಇಲ್ಲ. ಒಂದು ನಗೆಯಿಲ್ಲ, ಒಂದು ಕಳಕಳಿಯ ಮಾತಿಲ್ಲ. ಒಂದು ಪ್ರೀತಿಯ ವರ್ತನೆಯಿಲ್ಲ.

ಕೊಂಚ ಬಿಡುಜಾಗ. ಒಂದು ಕಬಡ್ಡಿಯಾಟದಷ್ಟು ದೊಡ್ಡ ಮೈದಾನ. ಮೈಬಿಟ್ಟು ಉಸಿರಾಡಬಹುದು. ಯಕ್ಷನ ವಿನಂತಿ- 'ಗೈಡ್ ಕೊಂಚ ನಿಲ್ಲು.' ಆದರೆ ಅದಾಗಲೇ ಗೈಡನದು ಬೀಸುನಡಿಗೆ. ಮೈದಾನ ದಾಟಿ ಅದರ ಬಲಭಾಗದಲ್ಲಿ ಮುಂದರಿದ ದಾರಿಯಲ್ಲಿ ಪಯಣ. ಯಕ್ಷನಿಗೆ ಅಸಹಾಯಕ ಸಿಟ್ಟು. ಇವನಿಗೆಷ್ಟು ಗಡಿಬಿಡಿ; ಭಾರೀ ಗುಡ್ಡ ಕಡಿವ ಕೆಲಸ ರಾಶಿ ಬಿದ್ದಿದೆ. ಏನು ಧಾಡಿ? ಮತ್ತೇಕೆ ಗೈಡ್ ಕೆಲಸ ಒಪ್ಕೊಂಡದ್ದು? ನಿನ್ನೆ ದುಂಬಾಲು ಬಿದ್ದು ಹೊರಡಿಸಿದ್ದೇಕೆ?

ಯಕ್ಷ ನಿಂತ. ಮೇಲೆ ನೋಡಿದ. ಅಂಗೈಯಷ್ಟು ಅಗಲ ಕಡುನೀಲಿ ಬಣ್ಣದ ಆಕಾಶ. ನೋಡುತ್ತಾ ನೋಡುತ್ತಾ ತಲೆ ಸುತ್ತುವಂತೆ ತೋರಿತು. ನಿಶ್ಚಿತ ಕ್ಷಣದಲ್ಲಿ ನಿರ್ಜೀವ ವಸ್ತುಗಳು ಜೀವ ಪಡಕೊಂಡಂತೆ. ಮತ್ತೆ ಅಣಕಿಸಿದಂತೆ ಮತ್ತೆ ನುಂಗಲು ಬಂದಂತೆ ಅನ್ನಿಸಿ ಯಕ್ಷ ಕುಸಿದು ಕುಳಿತ. ಗಂಗಾ ನದಿಯಲ್ಲಿ ಮುಳುಗಿ ಎದ್ದಾಗ ಧುತ್ತೆಂದು ಮುಖ ಬಡಿದ ಅರ್ಧ ತರಚಿದ ಹೆಣ; ಉತ್ಸವದ ಪಟಾಕಿ, ಜನ, ಕುಣಿತಗಳೆದುರು ಥಟ್ಟನೆ ವಿಜೃಂಭಿಸಿದ ದೇವರು; ಇದೀಗ ಕಬಳಿಸಿಯೇಬಿಡಬಹುದೆನ್ನುವ ಬಂಡೆಗಳೆಡೆ ಫಕ್ಕನೆ ಮಿಂಚುವ ಈ ಆಕಾಶ....

ಯಕ್ಷ ಸಾವರಿಸಿ ನಿಂತ. ಹೌದು.... ಹೌದು.... ವಿವಿಧ ನಮೂನೆಯ, ಆಕಾರದ, ಬಣ್ಣದ, ಬಿಳಿಯ, ದೂರದ ಬಂಡೆಗಳ ಒಂದು ಅದ್ಭುತ ಲ್ಯಾಂಡ್‌ಸ್ಕೇಪ್. ಅದರ ಒಂದಂಗವೇ ಆದ ಈ ಬಾನು. ಖಂಡಿತವಾಗಿಯೂ ಕ್ಲಿಕ್ಕಿಸಲೇಬೇಕು... ಆದರೆ ಈಗ ಈ ಹಾಳು ಗೈಡನ ಬೆನ್ನು ಹತ್ತಬೇಕು. ಹಿಂದೆ ಬಂದಾಗ ನೋಡೋಣ.

ದಾಪುಗಾಲು ಹಾಕುತ್ತಾ ನಡೆಯುತ್ತಿದ್ದಂತೆ ಸುಮಾರು ಐವತ್ತು ಮೀಟರ್ ಅಂತರದ ತಿರುವಿನಲ್ಲಿ ಒಮ್ಮೆ ಪ್ರತ್ಯಕ್ಷವಾದ ಬೇತಾಳನಂತೆ ಬಿಮ್ಮನೆ ಸಾಗುವ ಗೈಡ್. ಹಿಂದೆ ತಿರುಗುವ ಗೋಜಿಗೇ ಹೋಗದ ಆತ ಮತ್ತೆ ಕಾಣದಾದಾಗ, ಯಕ್ಷ ಬಾಗಿದ ಬಂಡೆಗಳು ಮೈತಾಕದಂತೆ, ಕುತ್ತಿಗೆ, ದೇಹ, ಕೈಕಾಲುಗಳನ್ನು ತಿರುಚಿಸುತ್ತಾ ಬೇಗ ಬೇಗ ಹೆಜ್ಜೆ ಇಕ್ಕಲಾರಂಭಿಸಿದ.

## ಈ ಕ್ಷಣದ ಅದ್ಭುತಗಳು

ಯಕ್ಷನಿಗೆ ಮೈದಾನ ಮೊದಲು ಕಂಡದ್ದೋ ಅಥವಾ ಗೈಡ್ ಕಾಣಿಸಿದ್ದೋ ಹೇಳಬರುವಂತಿಲ್ಲ! ಗೋಚರವಾದ ಮತ್ತೊಂದು ಕೊಂಚ ದೊಡ್ಡ ಮೈದಾನದಲ್ಲಿ ಗೈಡ್ ಪ್ರತಿಮೆಯಂತೆ ಸಿಂತಿದ್ದ. ಶತಶತಮಾನಗಳಿಂದಲೂ ಹಾಗೇ ಕಟೆದು ನಿಲ್ಲಿಸಿದ ವಿಗ್ರಹದಂತೆ ಈ ಕಣಿವೆಯ ಒಂದು ಭಾಗವೇ ಆದಂತೆ. ಎದುರೇ ದಾರಿ ಕೊನೆಯಾದಂತೆ ಅಥವಾ ಮುಂದಿನ ದಾರಿಯೇ ಕಾಣದಂತೆ... ಇಲ್ಲ, ಇಲ್ಲ... ಇಲ್ಲಿ ಸೂರ್ಯ ಕಾಣುವುದೇ ಇಲ್ಲ. ಸ್ತಬ್ಧ ಆಕಾಶ, ನಿಂತ ಬೆಟ್ಟಗಳು, ಬಾನಳೆಯುವ ಗಿಡುಗ, ನವದಿಕ್ಕುಗಳಿಂದ ಅನಂತ ಕೋನಗಳಿಂದ ಆವರಿಸಿದ ಬಂಡೆಗಳು.... ನೆರಳಿಲ್ಲ. ಕೆಳ ನೋಡಿದರೆ ನಿಂತ ತನಗೂ ನೆರಳಿಲ್ಲ. ಆಗಿನದಕ್ಕಿಂತಲೂ ಸುಂದರ. ಈ ಲ್ಯಾಂಡ್‌ಸ್ಕೇಪು.... ಆಹಾ!

ಈ ಮೈದಾನದಲ್ಲೂ ಅಷ್ಟೆ- ಚೂಪಾದ, ಚಪ್ಪಟೆಯಾದ, ಬಾಗಿದ, ಹಿಂದೆ ಬಾಚಿದ ನಿಂತ ನೆಲದಿಂದ ಆಕಾಶದವರೆಗೂ ತಲುಪಿದ ಬಣ್ಣ ಬಣ್ಣದ ಬಂಡೆಗಳ ಸ್ಥಾಯಿಭಾವ. ಪ್ರಕೃತಿಯ ಈ ಅನಂತ ಲಾಸ್ಯದೆದುರು ವರ್ತಮಾನದ ಲಾವಣ್ಯದೆದುರು, ಉಡುಗಿಹೋದ ತನ್ನ ಚೈತನ್ಯವನ್ನು ಅರಸುವವನಂತೆ, ಅದೇ ಈ ಕ್ಷಣದ ಸರ್ವಸ್ವವೂ ಆಗಿಬಿಟ್ಟಂತೆ, ಆದರೆ ದೇಹ ಒಪ್ಪದ ವಿವಶತನದಿಂದ ಕೇವಲ ಪರದೇಶಿಯಾದಂತೆ ಭಾಸವಾಗಿ ಯಕ್ಷ ಬಾಯ್ಬಿಟ್ಟು ನಿಂತ!

ಇವನೆಂತಹ ಯಾತ್ರಿಕನಪ್ಪ, ಇಲ್ಲಿಗೆ ಬಂದ ಎಲ್ಲ ಜನರೂ ಈ ಮೈದಾನದಲ್ಲಿ ಖುಷಿಯಿಂದ ಹುಚ್ಚು ಹಿಡಿದಂತೆ ಕುಣೀತಾರೆ. ಈ ಮಹಾಮನುಷ್ಯ ಮಾತ್ರ ಗರಬಡಿದಂತೆ ನಿಂತಿದ್ದಾನೆ- ಗೈಡ್‌ನ ಯೋಚನಾ ಲಹರಿ.

ಕಾಲದ ದವಡೆಗೆ ಸಿಕ್ಕೂ ಬದಲಾಗದ ಸತ್ಯದಂತೆ ಈ ಕಣಿವೆಯೇ ಒಂದು ಅದ್ಭುತದಂತೆ, ಈ ಮೈದಾನ ಎಲ್ಲ ಭಯಾನಕ ವೈಚಿತ್ರ್ಯಗಳ ಕೇಂದ್ರವಾದಂತೆ. ಎದುರಿನ ದೊಡ್ಡ ಬಂಡೆಯ ನಡುವೆ ಗುಹೆಯಂತಹ ಏನೋ ಒಂದು ಎಲ್ಲದರ ಕೊನೆಯಾದಂತೆ, ಇದೀಗ ತನ್ನತ್ತ ಕಣ್‌ಬಿಡುವಂತೆ, ಅದರಾಚೆಗೂ ದಾರಿ ಸಾಗುವ ಸಾಧ್ಯತೆಯಿರುವ ಒಂದು ಪುಟ್ಟ ಬೆಳಕಿಂಡಿಯ ಮಂದ ಬೆಳಕನ್ನೂ ಒಳಗೊಂಡ ಈ ಒಟ್ಟಾರೆ ಬದ್ಧ ಪ್ರತಿಮೆಯನ್ನು ಇದೀಗ ಕ್ಲಿಕ್ಕಿಸಲೇಬೇಕು ಎನ್ನುವ ಅದಮ್ಯ ಬಯಕೆಯಿಂದ ಯಕ್ಷ ಕ್ಯಾಮರಾ ಎತ್ತಿದ.

ಗೈಡ್ ಚಿಂತಿಸಿದ. ಇನ್ನೊಂದರ್ಧ ಗಂಟೆಯೋ, ಒಂದು ಗಂಟೆಯೋ ವಿಶ್ರಾಂತಿ. ಯಾತ್ರಿಕ ಬೇಕಷ್ಟು ಫೋಟೋ ತೇಗೀತಿರಲಿ, ನನಗೇನು? ಅಂದುಕೊಂಡ.

ಇನ್ನೊಂದು ದಿಕ್ಕಿನಲ್ಲಿ ಯಕ್ಷನ ಯೋಚನಾ ಸರಣಿ ಅಥವಾ ಬಂಡೆಗಳು ಸ್ಪಂಜಿನಂತೆ ಹೀರಿ ಕಳುಹಿಸಿದ ಗಾಳಿ ಎಷ್ಟೋ ಅಷ್ಟು ಉಂಡು ಪ್ರತಿಫಲಿಸಿದ ಬೆಳಕು ಎಷ್ಟೋ ಅಷ್ಟು ಎನ್ನುವ ಈ ತಾನು ನಿಂತ ನೆಲವೇ ಒಂದು ಗೋರಿಯಾಗಿದೆಯೇ? ಸುತ್ತಲಿನ ಬಂಡೆಗಳು ಈ ಗೋರಿಗೆ ಕಟ್ಟಿದ ಕಲ್ಲುಗಳೇ? ಇದು ಭಾಸವಾಗುತ್ತಿದ್ದಂತೆ ಯಕ್ಷ ಈ ಚಳಿಯಲ್ಲೂ ಬೆವರಿದ; ನಿಂತ ವಿಶಿಷ್ಟ ನೆಲದ ಭಯಾನಕತೆಗೆ ನಡುಗಿದ.

## ವರ್ತಮಾನದ ಕ್ರಿಯೆಗಳು

ಇದೆಂತಹ ಗಿರಾಕಿಯಪ್ಪ, ಒಂದು

ಫೋಟೋ ತೆಗೆಯಲೂ ಈ ಮನುಷ್ಯನಿಗೆಷ್ಟು ಹೊತ್ತು... ಮನಸ್ಸಿನಲ್ಲೇ ಬೈದ ಗೈಡ್. ಅಸಾಧ್ಯ ಹಸಿವು. ಇವನ ಫೋಟೋ ತೆಗೆದಾದಲಾಗಾದ್ರೂ ತಿಂಡಿ ತಿನ್ಬೇಕು. ಪೊಟ್ಟಣ ಬಿಚ್ಚಿ ರೆಡಿ ಮಾಡಿಡ್ತೇನೆ. ತಿಂಡಿ ಪ್ಯಾಕೇಟಿನ ಇಡೀ ಕಟ್ಟು ಹೊರತೆಗೆದ. ಚಪಾತಿ, ಬಾಜಿಗಳನ್ನು ಎರಡು ಕಾಗದಗಳಲ್ಲಿ ಹರವಿದ. ಕೈಗಂಟಿದ ಜಿಡ್ಡನ್ನು ರದ್ದಿಯಲ್ಲಿ ಒರಸಿದ. ತನ್ನ ನೀರಿನ ಚೀಲದಿಂದ ಒಂದು ಗುಟುಕು ನೀರು ಕುಡಿದ.

ಆಗಲೂ ಯಕ್ಷ ನಿಂತೇ ಇದ್ದ.

ಈಗ ಗೈಡನಿಗೆ ಅನುಮಾನ. ಎಲ್ಲಾದ್ರೂ ಮನುಷ್ಯನಿಗೆ ಲಕ್ವಾ ಬಡಿದಿಲ್ಲವಲ್ಲ, ಹಾರ್ಟ್ ಫೇಲು ಆಗಿಲ್ವಲ್ಲ. ಕುಳಿತಲ್ಲಿಂದ್ಲೇ- 'ಸಾರ್, ಸಾರ್' ಅಂದ. ಸುದ್ದಿಯಿಲ್ಲ. ಗಾಬರಿಯಿಂದ ಎದ್ದು ಯಕ್ಷನ ಬಳಿ ಬಂದ. ಕಿವಿಯಲ್ಲಿ 'ಸಾರ್, ಸಾರ್'- ಅಂದ. ಊಹೂಂ. ಮಾತಿಲ್ಲ. ಮೈಕುಲುಕಿದ. ಅಯ್ಯೋ ದೇವ್ರೇ ಅಂದವನೇ ಎತ್ತಿದ ಕೈಯ ನಾಡಿಬಡಿತ ನೋಡಿದ. ಬಚಾವ್! ನಾಡಿ ಬಡೀತಿದೆ. ಲಕ್ವಾ ಹೊಡೆದರೆ ಜನ ಕುಸಿದು ಬೀಳ್ತಾರೆ. ಗೈಡ್ ಅಂತರಂಗದಲ್ಲೆಂಬಂತೆ ಪಿಸು ನುಡಿದ. 'ಏಳಿ ಸಾರ್, ತಿಂಡಿ ತಿನ್ನೋಣ. ಹಸಿವೆಯಾಗೋದಿಲ್ವೇ ಸಾರ್?' ಉತ್ತರವಿಲ್ಲ. ಅರೆತೆರೆದ ಕಣ್ಣುಗಳು. ನಿಂತ ಕಾಲುಗಳು.

ಯಕ್ಷನಿಗೆ ಅಸಹನೆ. ಇವನೇನು ಮಾಡುತ್ತಿದ್ದಾನೆ, ಎಷ್ಟು ಸೊಕ್ಕು ಇವನಿಗೆ- ಸಲುಗೆ ಕೊಟ್ಟರೆ ನಾಯಿಯೂ ಅನ್ನದ ಪಾತ್ರೆಗೆ ಬಾಯಿ ಹಾಕುತ್ತದೆಯಂತೆ. ಅಧಿಕ ಪ್ರಸಂಗಿ. ಮೈಮುಟ್ಟುತ್ತಾನೆ. ಆಗಲೂ ಅಷ್ಟೇ, ಚಿಕ್ಕ ಮೈದಾನದ ಬಳಿ ಫೋಟೋ ತೆಗೆಯೋಣವೆಂದರೆ- ಇವನ ನಾಗಾಲೋಟ. ಎಲ್ಲಾದರೂ ದಾರಿ ತಪ್ಪಿದರೋ ಎಂದು ನಾನೂ ಓಡಿ ಓಡಿ ಹಿಂಬಾಲಿಸಬೇಕಾಯ್ತು. ಅಷ್ಟೆ.

## ಬದುಕುವ ದಾರಿ

ಗೈಡ್ ಪುನಃ ಕುಳಿತ. ಅಯ್ಯೋ ದೇವ್ರೇ... ಈಗ ಏನು ಮಾಡ್ಲಿಯಪ್ಪ ಬೇಗ್ನೇ ಹೋಗಿ ಚಾ ದುಕಾನದ ಮಾಲಿಕನನ್ನಾದ್ರೂ ಕರೆತರ್ಬೇಕು ಅಥವಾ ಕ್ಯಾಂಟ್‌ನ ಪಾಲಕರಿಗಾದ್ರೂ ಹೇಳ್ಬೇಕು. ಆದ್ರೆ ಅಯ್ಯೋ ಪೊಟ್ಟಣದೊಳಗಿಟ್ಟ ಬೆಂಜೋಳಿಗೆಯನ್ನು ಒಯ್ಯಲೇ ಬಿಡಲೇ ಯೋಚಿಸಿದ. ಯಾರಾದರೂ ತನ್ನನ್ನು ಅಪರಾಧಿಯಂತೆ ನೋಡ್ಬಾರ್ದಲ್ಲ. ಮತ್ತೆ ಪೊಲೀಸಪ್ಪಗಳ ಕೈಲಿ ಸಿಕ್ಕುಹಾಕಿಕೊಂಡ್ರೆ ತನ್ನ ಮಾವನಿಗೆ ಆದಂತೆ- ಏನು ತಪ್ಪು ಮಾಡದಿದ್ರೂ ಈ ಹಾಳು ಜನಕ್ಕೆ ಸಾಕಾಗುವಷ್ಟನ್ನು ಟೋಪೀಯವರು ಮಾಡ್ಬಹುದು. ಒಟ್ಟಾರೆ ಮೇಲೆ ನನ್ನ ಗ್ರಹಚಾರ ನೆಟ್ಟಗಿಲ್ಲ. ಹಿಮಪ್ಪ, ನಮ್ಮೆಲ್ಲರ ತಂದೆ, ನೀನೇ ಸಾಕ್ಷಿಯಪ್ಪ, ನಾನೇನು ತಪ್ಪು ಮಾಡಿದ್ದೇನೆ ಹೇಳಪ್ಪ. ಗಜ್ಜುವನ್ನೂ ರಕ್ಷಿಸಿದಂತೆ ನನ್ನನ್ನು ಕಾಪಾಡಪ್ಪ.

ಯಕ್ಷನ ತರ್ಕ- ಯಾವುದೋ ದೊರೆ ತನ್ನ ಎದುರಾಳಿಯನ್ನೋ ಅವನ ಮಕ್ಕಳನ್ನೋ ನಿಲ್ಲಿಸಿ, ನಿಧಾನವಾಗಿ ಹಂತಹಂತವಾಗಿ ಗೋರಿ ಕಟ್ಟಿಸುತ್ತಿದ್ದನಂತೆ. ಬಹುಶಃ ಗೈಡ್ ಬೇಕೆಂದೇ ನನ್ನನ್ನು ಇಲ್ಲಿ ಕರೆತಂದಿದ್ದಾನೆ. ಚಾ ದುಕಾನದ ಮಾಲಿಕ, ಕ್ಯಾಂಟ್ ಪಾಲಕರು, ಎಲ್ಲರೂ ನನ್ನತ್ತ ಒಂಥರಾ ನೋಡಿದರಲ್ಲ. ಅವರೆಲ್ಲ ಸೇರಿ ಏನೋ ಫಿತೂರಿ ನಡೆಸುತ್ತಿದ್ದಾರೆ. ಬಹುಶಃ ನನ್ನನ್ನು ಇಲ್ಲೇ ಸಮಾಧಿ ಮಾಡಿ ನನ್ನೆಲ್ಲ ವಸ್ತುಗಳನ್ನೂ ದೋಚುವ ಸನ್ನಾಹ ಇವರದು. ಅಥವಾ ಇವರೆಲ್ಲ ವ್ಯವಸ್ಥಿತ ದರೋಡೆಕೋರರ ಪ್ರತಿನಿಧಿಗಳೇ... ಇರಲೂಬಹುದು. ಇವರದ್ದು ದಿನಾ ಬಡಪಾಯಿ ಯಾತ್ರಿಕರನ್ನು ಕರೆತಂದು ಕೊಳ್ಳೆ ಹೊಡೆಯುವ ಕಸುಬೇ ಇರಬೇಕು. ಎಲ್ಲಾದರೂ ಅಸ್ಥಿಪಂಜರ ತೋರ್‍ತಿದೆಯೇ... ಅಷ್ಟು ಮಾಡಿದವರಿಗೆ ಅದನ್ನೊಂದು ಸಾಗಿಸುವುದು ದೊಡ್ಡ ಕೆಲಸವೇ... ಛೇ, ನಾನೇಕೆ ಸಿಕ್ಕುಹಾಕಿಕೊಂಡೆನಪ್ಪ? ಏಕಾಂತ, ಹೆಪ್ಪುಗಟ್ಟಿಸುವ ಏಕತಾನ. ಹಿಂದೊಮ್ಮೆ ಅನಿರೀಕ್ಷಿತವಾಗಿ ನೀರು ಬತ್ತಿದ ಬಾವಿಯಲ್ಲಿ ಒಬ್ಬಂಟಿಯಾಗಿ ಉಳಿದ ಘಟನೆ ನೆನಪಾಗಿ ಯಕ್ಷ ನಿಂತಲ್ಲೇ ನಡುಗಿದ.

## ಮನಸ್ಸಿನ ವಿವಿಧ ಮುಖಗಳು

ಗೈಡ್ ಕ್ಯಾಮರಾವನ್ನು ಕಿತ್ತಾಗಲಾದ್ರೂ ಇವನು ಏಳಬಹುದು ಇಲ್ಲಿಗೆ ಬಡಿದ ಭೂತದಿಂದ ನಾವಿಬ್ರೂ ಪಾರಾಗ್ಬಹುದು ಎಂದುಕೊಂಡ.

ಹೌದು. ಅದೇ ಕ್ಯಾಮರಾ ಕೀಳುತ್ತಿದ್ದಾನೆ.

ಖಂಡಿತವಾಗಿಯೂ ಇವರೆಲ್ಲ ಗೂಂಡಾಗಳೇ. ನನ್ನ ತರ್ಕ ಸರಿ. ಇವನ ಚಲನವಲನವನ್ನು ನಾನು ಮೊದಲೇ ಗಮನಿಸಬೇಕಿತ್ತು. ಹೊಟೇಲಿನಲ್ಲಿ ಇವನ ಹೆಸರು ವಿಳಾಸ ಕೇಳಬೇಕಿತ್ತು ಅಥವಾ ಹೀಗೂ ಇರಬಹುದು. ಹೊಟೇಲಿನ ಜನರು ಈ ಗೂಂಡಾ ಗುಂಪಿನಲ್ಲಿ ಶಾಮೀಲಾದವರೇ ಇರಬಹುದು. ಯಕ್ಷ ಕ್ಯಾಮರಾವನ್ನು ಗಟ್ಟಿಯಾಗಿ ಹಿಡಿದುಕೊಂಡ. ಹೆದರಿದ ಗೈಡ್ ಮಾತಿನ ಧಾಟಿ ಬದಲಿಸಲು ತಡಬಡಿಸಿದ, ತನ್ನ ಕ್ರಿಯೆಯನ್ನು ಸಮರ್ಥಿಸಲು ಶಬ್ದಗಳಿಗಾಗಿ ತಡಕಾಡಿದ. 'ಬನ್ನಿ ಸಾರ್, ತಿಂಡಿ ತಿನ್ನೋಣ ಸಾರ್. ಮತ್ತೆ ಕತ್ತಲಾಗ್ತದೆ ಸಾರ್, ಬೇಗ ಹೋಗೋಣ ಸಾರ್.' ಅನಿರೀಕ್ಷಿತವಾಗಿ ಏನೋ ಬದಲಾವಣೆಯಾದಂತೆ ಗೈಡ್‌ನಿಗೆ ಅನ್ನಿಸಿತು.

ಯಕ್ಷನನ್ನು ಗೈಡ್ ಸೂಕ್ಷ್ಮವಾಗಿ ಗಮನಿಸಿದ.

**ಭಯ, ಭಯ, ಅಸಂಗತ ಭಯ**

ಯಕ್ಷನ ಕಿವಿಯಿಂದ ಎಂಥದ್ದೋ ಒಂದು ಹೊರಗಿಣುಕುತ್ತಿದೆ... ಅರೇ ಒಂದು ಹುಲ್ಲಿನ ಚಿಗುರು! ಇನ್ನೊಂದು ಕಿವಿಯಿಂದ ಹಸುರೆಲೆ ಟಿಸಿಲೊಡೆದು ಹೊರಬರುತ್ತಿದೆ!

ಗೈಡ್ ಹೆದರಿ ಕಂಗಾಲಾದ. ತಕ್ಷಣ ಅಲ್ಲಿಂದ ದೂರ-ಬಲು ದೂರ ಓಡಿ ಹೋಗಬೇಕು. ಜೋರಾಗಿ ಉಚ್ಚೆ ಬಂದಂತೆ ಅನ್ನಿಸಿತು. ಕಾಲುಗಳಿಗೆ, ಕೈಗಳಿಗೆ, ತನ್ನ ಇಡೀ ದೇಹಕ್ಕೆ ಅಲ್ಲ ಅಲ್ಲ... ಮನಸ್ಸಿಗೆ ಜೋಮು ಹಿಡಿದಿದೆ. ಇಲ್ಲಿಂದ ಪಾರಾಗಬೇಕು. ನಿಂತಲ್ಲಿಂದ ಕದಲಲೂ ಸಾಧ್ಯವಾಗದ ಭಯ.

ತಾನು ಈವರೆಗೆ ಕೇಳಿ ತಿಳಿಯದ, ಕಂಡರಿಯದ ಆಶ್ಚರ್ಯ. ಎಲ್ಲಾದ್ರೂ ಉಂಟೇ, ಮನುಷ್ಯನ ಕಿವಿಯಲ್ಲಿ ಸಸಿ ಚಿಗುರುವುದೆಂದಿದೆಯೆ? ಈತ ಯಾರು? ಗಂಧರ್ವನೆ? ಭೂತವೆ? ಅಲೌಕಿಕ ವಸ್ತುವೆ? ಅಥವಾ ನಿಜವಾದ ಯಕ್ಷನೆ?

ಯಕ್ಷ ಎಣಿಸಿದ. ಹೇಗಾದರೂ ಆಗಲಿ. ಒಟ್ಟಾರೆ ಐದಾರು ಸ್ನಾಪುಗಳನ್ನಾದರೂ ತೆಗೆಯಲೇಬೇಕು. ಗುಹೆಯದ್ದೊಂದು; ಮೈದಾನ, ಗುಹೆ, ಬಂಡೆಗಳದ್ದು ಇನ್ನೊಂದು ಬಂಡೆ, ಆಗಸ ಗಿಡುಗನದ್ದು ಮತ್ತೊಂದು; ಮೈದಾನ, ದಾರಿ ಬಂಡೆಗಳದ್ದೂ ಒಂದು. ಹೀಗೆ ತಾನಿಂತಹ ಸೋಜಿಗದ ಸ್ಥಳಕ್ಕೆ ಬಂದುದಕ್ಕೆ ಸಾಕ್ಷಿಯಾದರೂ ಬೇಕಲ್ಲ. ಮುಂದೆ ಏನಾದರೂ ಆಗಲಿ. ಇವರ ಕೈಯಲ್ಲಿ ಬದುಕಿ ಉಳೀತೇನೋ ಇಲ್ಲವೋ.... ಮತ್ತೊಮ್ಮೆ ಇಲ್ಲಿಗೆ ಬರುವ ಸಾಧ್ಯತೆಯಂತೂ ಇಲ್ಲವೇ ಇಲ್ಲ. ಭೂಕಂಪದ ಫೋಟೋ ತೆಗೆದು ಅಮರನಾದ ಚಿತ್ರಕಾರನಂತೆ ನನ್ನ ಹೆಸರೂ ಚರಿತ್ರೆಯ ಪುಟಗಳಲ್ಲಿ ಸೇರಿಕೊಳ್ಳಬಹುದು- ಇವರು ಕ್ಯಾಮರಾದ ರೀಲು ಉಳಿಸಿದರೆ! ಅವರ ವಿರುದ್ಧ ಇದೇ ದಾಖಲೆಯಾಗದಿದ್ದರೆ? ಇವೆಲ್ಲ 'ರೇ... ರೇ....'ಗಳು, ಕ್ಯಾಮರಾದ ಕಣ್ಣುಗಳಲ್ಲಿ ತದೇಕನಾದಾಗಲೂ ಸಂದೇಹದ ನೆರಳು. ನನ್ನೆಲ್ಲ ಅನಿಸಿಕೆಗಳು ಸುಳ್ಳೂ ಇರಬಹುದು. ಇವರೆಲ್ಲ ಸಾಚಾ ಮನುಷ್ಯರೂ ಆಗಿರಬಹುದು. ಹಿಂದೆ ಡೆಹರಾಡೂನ್ ತಲುಪಿದೊಡನೆ ಗೈಡನದ್ದೂ ಒಂದು ಫೋಟೋ ಕ್ಲಿಕ್ಕಿಸಬೇಕು. ಈ ಹಿಮಾಲಯದ ಜನರಿಗೆ ಫೋಟೋ ತೆಗೆಸಿಕೊಳ್ಳುವುದೆಂದರೆ ಪಂಚಪ್ರಾಣ.

ಗೈಡ್ ಕೆಳ ನೋಡಿದ. ಗಚ್ಛೂ-ಪಾನೀಯರ ಗೋರಿಯ ದಿಬ್ಬ. ಅಲ್ಲಿ ಭದ್ರವಾಗಿ ನಿಂತ ಯಕ್ಷ. ಬೂಟುಗಳನ್ನು ಹರಿದು ಕಾಲಿನಿಂದ ಏನೋ ಕೆಳಗಿಳೀತಿದೆ. ಬಗ್ಗಿ ಮತ್ತೂ ಸೂಕ್ಷ್ಮವಾಗಿ ವೀಕ್ಷಿಸಿದ. ಬೇರುಗಳು ಕೆಳಗೆ, ಸುತ್ತ ಪಸರಿಸುತ್ತಿವೆ. ಬಹುಶಃ ಮಣ್ಣಲ್ಲಿ ನೀರನ್ನು ಅರಸುತ್ತ ಸಾಗುತ್ತಿವೆ. ಗೈಡ್ ಅವಾಕ್ಕಾಗಿ ನೋಡನೋಡುತ್ತಿದ್ದಂತೆ ಯಕ್ಷನ ತಲೆಯಿಂದ, ಒಂದೊಂದಾಗಿ ಹೊರಗಿಣುಕಿದ ಪುಟ್ಟ ಟೊಂಗೆಗಳು, ಅವುಗಳಲ್ಲಿ ಹಸುರೆಲೆಗಳು.

ಗೈಡ್ ಥಣ್ಣನೆ ನಡುಗಿದ. ಎಲ್ಲಾದರೂ ತನ್ನ ಕಾಲುಗಳಲ್ಲೂ ಹೀಗೆ ಬೇರು ಇಳೀತಿದೆಯೇ ಬಗ್ಗಿ ಪರೀಕ್ಷಿಸಿದ. ನಾಲ್ಕು ಹೆಜ್ಜೆ ಅತ್ತಿತ್ತ ನಡೆದ. ಬಚಾವ್... ಇದು ಈ ನೆಲದ ಮಹಿಮೆಯಲ್ಲ. ಇಲ್ಲಿ ನಿಂತವನ ಮಹಿಮೆ! ಆದ್ರೂ ಇನ್ನಿಲ್ಲಿ ನಿಲ್ಲೋದು ತೀರಾ ಅಪಾಯ. ತನ್ನೆದುರು ನಿಂತದ್ದು ನಿಜವಾದ ಭೂತ. ತನ್ನ ಇಂದಿನ ದುಡಿಮೆಗೆ ಪ್ರತಿಫಲ ಮಾತ್ರ ಖೋತಾ. ಖೇದದಿಂದ,

ಬೆಂಜೋಳಿಗೆಯನ್ನು ನೀರಿನ ಬ್ಯಾಗನ್ನು ಎತ್ತಿ ಯಕ್ಷನ ಕಾಲ ಬಳಿ ಇಟ್ಟ, ಏನೂ ಆಗದವನಂತೆ ಮೆಲ್ಲನೆ ಎದ್ದು ಹೊರಟ.

## ಪಲಾಯನದ ತಯಾರಿ

ಏನಿದ್ರೂ ಇನ್ನೊಂದೆರಡು ದಿನಗಳಲ್ಲಿ ಇವ್ನ ಕತೆ ಮುಗೀತದೆ. ಆಗ ಇವ್ನ ಕ್ಯಾಮರಾ, ಬೆಂಜೋಳಿಗೆಗಳನ್ನು ಒಯ್ಯಬಹುದು ಎನ್ನುವ ಕೆಟ್ಟ ಯೋಚನೆಯನ್ನು ತಳ್ಳಿ ಹಾಕಲು ಯತ್ನಿಸುತ್ತಾ ನಾಲ್ಕು ಹೆಜ್ಜೆ ಮುಂದೆ ಹೋದ ಗೈಡ್ ಮತ್ತೆ ಏನೋ ನೆನಪಾದವನಂತೆ ಹಿಂದೆ ಬಂದ.

ಏಕೆ ಎಂದ್ರೆ ಮತ್ತೊಮ್ಮೆ ಕೂಲಂಕಷವಾಗಿ ನೋಡ್ಬೇಕು, ನನ್ನ ಸಮಕ್ಷಮದಲ್ಲಿ ನಡೆದ ಘಟನೆಯ ಏಕಮೇವ ಸಾಕ್ಷಿ ನಾನು. ಕ್ಯಾಂಪ್‌ಗೆ ಸುದ್ದಿ ಮುಟ್ಟಿಸುವ ಮೊದ್ಲು ಪೂರ್ತಿಯಾಗಿ ಖಾತ್ರಿ ಮಾಡ್ಕೊಳ್ಳಬೇಕು. ಇಂದೇ ಕ್ಯಾಂಪ್‌ನ ಜನ, ಸುತ್ತಮುತ್ತಲಿನ ಜನ ಈ ಅದ್ಭುತವನ್ನು ತಮ್ಮ ತಮ್ಮ ಕಣ್ಣುಗಳಿಂದ್ಲೇ ನೋಡಲು ಹಿಂಡುಹಿಂಡಾಗಿ ಧಾವಿಸ್ಬಹುದು. ಪೇಪರು, ಟಿ.ವಿ., ರೇಡಿಯೋಗಳಿಂದ ಈ ಸುದ್ದಿ ದೇಶ-ವಿದೇಶಗಳಲ್ಲಿ ಹಬ್ಬಿ, ಜನ ತಂಡೋಪತಂಡವಾಗಿ ಬಂದ್ರೆ.... ನನಗೆ ಕನಸಿನಲ್ಲೂ ಎಣಿಸದ ಖ್ಯಾತಿ, ತಿಜೋರಿಯಲ್ಲೂ ಹಿಡಿಸದಷ್ಟು ಹಣ ಬರ್ಬಹುದು. ಈ ಎಲ್ಲ ಸಾಧ್ಯತೆಗಳ ಬಗ್ಗೆ ಯೋಚಿಸುತ್ತಲೇ ಗೈಡ್ ಹಿರಿಹಿರಿ ಹಿಗ್ಗಿದ. ತನ್ನ ಕುಬೇರತ್ವದ, ಆತ್ಮಪ್ರತಿಷ್ಠೆಯ ಸೋಪಾನ, ಈ ನಿಂತ ಯಕ್ಷ.

ಈಗ ಅಪರಿಮಿತ ಧೈರ್ಯದಿಂದ ಗೈಡ್ ಯಕ್ಷನ ಬಳಿ ಬಂದ. ಅವನ ಎತ್ತಿದ ಕೈಯ ಮಣಿಗಂಟನ್ನು ಅಮುಕಿ ನಾಡಿ ಹುಡುಕಿದ.

ಥತ್! ತಪ್ಪಿ ಹೋಯ್ತು ಗುಣೆ, ಬಂಡೆ, ದಾರಿಗಳನ್ನೊಳಗೊಂಡ ಚೌಕಟ್ಟು ಸಿಕ್ಕಿ ಇನ್ನೇನು ಕ್ಲಿಕ್ಕಿಸಬೇಕು, ಫ್ಲ್ಯಾಷ್ ಹೊಡೆಯಬೇಕು ಅನ್ನುವಾಗ ಈ ಮೂರ್ಖ- ಕೈ ಅಲುಗಿಸಿದ. ಎಲ್ಲ ಹಾಳಾಗಿ ಹೋಯ್ತು.

ಯಾರೂ ತನ್ನ ಮೈಮುಟ್ಟುವ ರೂಢಿಯಿಲ್ಲದ ಯಕ್ಷನಿಗೆ ಎರಡೆರಡು ಬಾರಿ ಮೈತಡವಿದ ಗೈಡ್‌ನ ಕ್ರಿಯೆಯಿಂದ ಬರೇ ಕಿರಿಕಿರಿ. ಎಲಾ ಇವನ, ಇವನಿಗ್ಯಾರು ಈ ಸಲುಗೆ, ಸ್ವಾತಂತ್ರ್ಯ ಕೊಟ್ಟವರು- ನೋಡಲೋ ನರಪೇತಲ, ಎರಡು ತಪರಾಕಿ ಇತ್ತರೆ ಗುಹೆಯಾಚೆ ಹೋಗಿ ಬಿದ್ದಾನು- ಎಷ್ಟು ಸೊಕ್ಕು ಇವನಿಗೆ?

ಯಕ್ಷ ಮೊದಲ ಬಾರಿಗೆ ಕ್ಯಾಮರಾದಿಂದ ಕಣ್ಣು ಕಿತ್ತು ಗೈಡ್‌ನತ್ತ ಕೆಕ್ಕರಿಸಿ ನೋಡಿದ.

## ಇದೀಗ ಭೀಭತ್ಸ

ಗೈಡ್, ಯಕ್ಷನ ಎದೆಗುಂಡಿಗೆಗೆ ಕಿವಿ ಆನಿಸಿದ. ಮೊದಲು ಸ್ತಬ್ಧ ಅನಂತರ ಅಸ್ಪಷ್ಟ ಸದ್ದು. ಒಂದೆರಡು ನಿಮಿಷಗಳಲ್ಲಿ ಬಡಿತದ ಆವರ್ತ ಹೆಚ್ಚುತ್ತಾ ಹೋಗಿ, ಕೊನೆಗೆ ಫಿರಂಗಿಯ ಗುಂಡಿನಂತೆ ಧಡಧಡ ಸದ್ದು.....

ಕೇಳಿಸಿದ ಗೈಡ್ ಅವಾಕ್ಕಾಗಿ, ಮತ್ತೆ ಬೆದರಿ ಯಕ್ಷನ ಕಣ್ಣುಗಳತ್ತ ಅನಿರೀಕ್ಷಿತವಾಗಿ ದೃಷ್ಟಿ ಹಾಯಿಸಿದ. ತನ್ನನ್ನು ಕೊಂಬುದಾಡೆಗಳಂತೆ ಆಕ್ರಮಿಸಲು ಬಂದ ಚೂಪಾದ ಕೊಂಬೆ, ರೆಂಬೆಗಳು, ಇದೀಗ ತಿಂದುಬಿಡುವಂತೆ ಕೆಂಡ ಕಾರುವ ಅತಿಭಯಂಕರ ಕಣ್ಣುಗಳು.

ಸೆಟೆದ ಗೈಡ್ ತನ್ನೆಲ್ಲ ಶಕ್ತಿ ಕೂಡಿಸಿ ಭಯಾನಕವಾಗಿ ಕಿರುಚಿದ- 'ಅಮ್ಮಾ'-

ಸದ್ದಿನ ಆವರ್ತನ ಬೆಟ್ಟಗಳ ಬಂಡೆಗಳನ್ನು ಬಡಿದು, ಅನುರಣಿತವಾಗುತ್ತಾ ದಶ, ಶತ, ಸಹಸ್ರ... 'ಅಮ್ಮಾ...'ಗಳಾಗುತ್ತಿದ್ದಂತೆ.

ಪರ್ವತಶ್ರೇಣಿಗಳಲ್ಲೇ ಎಳೆಯ ಹಿಮಾಲಯದ ಈ ಭಾಗ; ಅತ್ತ ದೊಡ್ಡ ಸದ್ದಿನೊಂದಿಗೆ ಈ ಕಣಿವೆಯನ್ನು ತನ್ನ ಕಬಂಧ ಬಾಹುಗಳಲ್ಲಿ ಬಾಚಿಕೊಂಡಿತು.

## ಪ್ರಸಂಗದ ನಾಂದಿ

ಭುಗಿಲೆದ್ದ ಧೂಳು ಚದುರಿ ಸುತ್ತಲಿನ ಬೆಟ್ಟಗಳನ್ನು ಪಸರಿಸಿದಂತೆ, ತಾನು ಕಂಡಿರದ ಕಣಿವೆಯನ್ನು ಸೂರ್ಯ ಶಾಶ್ವತವಾಗಿ ಕಂಡ. ●



# ನಮ್ಮ ಊರಿನ ಪುಣ್ಯ ಜೀವಿಗಳು



## ನಮ್ಮೂರಿನ "ಪಪ್ಪಾ"

ನೀವು ಪುಣೆ-ಮುಂಬಯಿಗೆ ರೈಲು ಮೂಲಕ ಪ್ರಯಾಣಿಸುವಾಗ ಸಾಂಗ್ಲಿ ಕರ್‍ಹಾಡದ ನಡುವೆ ಕಿರ್ಲೋಸ್ಕರ್‌ವಾಡಿಯ ಚಿಕ್ಕ ನಿಲ್ದಾಣ ಕಾಣಿಸುವುದು. ನಿಜಾಮುದ್ದೀನ್ ಎಕ್ಸ್‌ಪ್ರೆಸ್ ಬಿಟ್ಟರೆ, ಮಹಾಲಕ್ಷ್ಮಿ, ಕೊಯಿನಾ, ಸಹ್ಯಾದ್ರಿ ಎಕ್ಸ್‌ಪ್ರೆಸ್ ಎಲ್ಲವೂ ಅಲ್ಲಿ ನಿಂತು ಮುಂದೆ ಸಾಗುತ್ತವೆ. ಸ್ಟೇಶನ್ನಿನಲ್ಲಿ ಕೂಡಲು ಕೇವಲ ೪-೫ ಬೆಂಚು, ಆರಿದ ಭಜಿ ಹಾಗೂ ಚಹ ಮಾತ್ರ ದೊರೆಯುವ ಒಂದು ಚಿಕ್ಕ ಸ್ಟಾಲು. ನೋಡಿದಾಗ ಎಲ್ಲ ಚಿಕ್ಕ ಸ್ಟೇಶನ್ನುಗಳಂತೆ ಇದೂ ಒಂದು ಎಂಬ ಭಾವನೆ ಬಾರದೇ ಇರಲಾರದು. ಆದರೆ ಸ್ವಲ್ಪ ಶ್ರಮವಹಿಸಿ ಕೇವಲ ಅರ್ಧ ಫರ್ಲಾಂಗಿನಷ್ಟು ಮುಂದೆ ನಡೆದರೆ ಒಳಗೆ ಒಂದು 'ಮಾಯಾ ನಗರಿ'ಯೇ ಗೋಚರಿಸುವುದು. ಪುಟ್ಟ ಪೋಸ್ಟ್ ಆಫೀಸು, ಚಿಕ್ಕ ಲೈಬ್ರರಿ, ದೊಡ್ಡ ಫ್ಯಾಕ್ಟರಿ, ಗಿಡ, ಮರ, ಬಳ್ಳಿ ಇರುವ ಸುಂದರವಾದ ಪುಟ್ಟ ಪುಟ್ಟ ಮನೆಗಳು. ಊರಿನ ದೈವವಾದ ಮಾಯಪ್ಪನ ಗುಡಿಯಲ್ಲಿ ಪ್ರಾರಂಭಿಸಿದ ಶಾಲೆ, ಈಗ ಜ್ಯೂನಿಯರ್ ಕಾಲೇಜಿನ ಮಜಲನ್ನು ಮೀರಹತ್ತಿದೆ. ವನರಾಜಿಯಿಂದ ಆವೃತವಾದ ಈ ಊರು ಶಾಂತಿಯನ್ನರಸುವವರಿಗೆ ಹೇಳಿಮಾಡಿಸಿದ್ದಂತಿದೆ. ಕಲ್ಲು ಮುಳ್ಳು, ಪಾಪಾಸುಕಳ್ಳಿ, ಹಾವು, ಹುಳಹುಪ್ಪಡಿಗಳಿಂದ ಆವೃತವಾಗಿದ್ದ ಈ ಸ್ಥಳದಲ್ಲಿ 'ಮಾಯಾನಗರ'ವನ್ನು ಸೃಷ್ಟಿಸಿದವರು ಮತ್ತಾರೂ ಅಲ್ಲ, ಈ ಭಾಗಕ್ಕೆಲ್ಲ "ಪಪ್ಪಾ" ಎಂದೇ ಪ್ರಸಿದ್ಧರಾಗಿರುವ ಕರ್ಮಯೋಗಿ ಲಕ್ಷ್ಮಣರಾವ್ ಕಿರ್ಲೋಸ್ಕರ್ ಅವರು.




ಭಾರತ ಸರಕಾರ ಹೊರತಂದ 'ಪಪ್ಪಾ'ರ ಅಂಚೆ ಚೀಟಿ

ಈಗ ಲಯವಾದ ಒಂದು ಊರಿನಿಂದ ಬಂದ ಇವರು ಇನ್ನೊಂದು ಊರನ್ನೇ ಸೃಷ್ಟಿಸಿದರು. ಸುಮಾರು ೭೫ ವರ್ಷಗಳ ಹಿಂದೆ ಔಂಧದ ಮಹಾರಾಜರಿಂದ ದೇಣಿಗೆ ಪಡೆದ ಭೂಮಿಯಲ್ಲಿ ಕೆಲ ಮಿತ್ರರ ಸಹಾಯದಿಂದ ಚಿಕ್ಕ ಕಾರಖಾನೆಯನ್ನು ಪ್ರಾರಂಭಿಸಿದರು. ಕೇವಲ ನೇಗಿಲುಗಳಿಂದ ಸುರುವಾದ ವ್ಯವಹಾರ, ಇದೀಗ

ಅನೇಕ ವಿಭಾಗಗಳಿರುವ ವಿಸ್ತಾರವಾದ ಉದ್ಯಮವಾಗಿ ಮಾರ್ಪಟ್ಟಿದೆ. ಸಾವಿರಾರು ಜನರ ಕುಟುಂಬ ನಿರ್ವಹಣೆ ಹಾಗೂ ಪ್ರಗತಿಗೆ ಸಹಾಯಕವಾಗಿ ನಿಂತಿದೆ. ಇದಕ್ಕೆಲ್ಲ ಲಕ್ಷ್ಮಣರಾಯರ ಮುಂದಾಲೋಚನೆ, ಉತ್ಕಟ ಇಚ್ಛೆ, ಶ್ರಮ ಇತ್ಯಾದಿಗಳು ಕಾರಣ. ಇದರಿಂದಲೇ ಈಗಿನ "ಕಿರ್ಲೋಸ್ಕರ್ ಬ್ರದರ್ಸ್ ಲಿಮಿಟೆಡ್" ಬೃಹತ್ ಉದ್ದಿಮೆಯಾಗಿ ಬೆಳೆದಿದೆ.

ಕೃಷಿಕರ ಹಿತ ಸಾಧನೆಯೇ 'ಪಪ್ಪಾ' ಅವರ ಮುಖ್ಯ ಉದ್ದೇಶವಾಗಿತ್ತು. ನೇಗಿಲು, ಶೇಂಗಾ ಒಡೆಯುವ ಯಂತ್ರ, ಹುಲ್ಲು ಕೊಯ್ಯುವ ಯಂತ್ರಗಳ ಉತ್ಪಾದನೆಯಿಂದ ಪ್ರಾರಂಭವಾದ ಕಾರ್ಯ, ಅವರ ಪುತ್ರ ದಿವಂಗತ ಶಂತನುರಾವ್ ಮತ್ತು ಅವರ ಇತರ ಸಹೋದರರಿಂದ ವಿಶಾಲವಾಗಿ ಹಬ್ಬಿ, ವಿದೇಶಗಳಲ್ಲೂ ಮನ್ನಣೆ ಗಳಿಸಿದೆ. ಈಗಲೂ ಕೃಷಿ ಉತ್ಪಾದನೆಗಳಿಗೆ ಮೂಲವಾದ ಪಂಪುಗಳ ಉತ್ಪಾದನೆಗೇ ಪ್ರಾಧಾನ್ಯ. ಲಕ್ಷ್ಮಣರಾಯರು ಮಕ್ಕಳಿಗೆ ಕೊಟ್ಟ ಅತ್ಯುತ್ತಮ ಶಿಕ್ಷಣವೆಂದರೆ, ಸ್ವಾವಲಂಬನ, ಕರ್ತವ್ಯದಕ್ಷತೆ, ಹಾಗೂ ಧೈರ್ಯ. ಮಕ್ಕಳು, ಮೊಮ್ಮಕ್ಕಳು, ವಿದೇಶದಿಂದ ಉಚ್ಚ ಶಿಕ್ಷಣ ಪಡೆದು ಬಂದರೂ ಕೂಡ, ಮೊದಲು ಅಧಿಕಾರದ ಖುರ್ಚಿಯನ್ನು ಅಲಂಕರಿಸದೆ, ಇನ್ನುಳಿದ ಕಾರ್ಮಿಕರೊಡನೆ ಸಮಸಮವಾಗಿ ಕಾರ್ಯ ಮಾಡಬೇಕಿತ್ತು. ಹೀಗಾಗಿ ಅವರೆಲ್ಲರಿಗೆ ಉತ್ಪಾದನೆಯಲ್ಲಿ ಬರುವ ಅಡೆತಡೆ, ತಾಂತ್ರಿಕ ತೊಂದರೆ, ಅದಕ್ಕೆಲ್ಲ ಪರಿಹಾರ ಇತ್ಯಾದಿಗಳ ಬಗೆಗೆ ಪ್ರತ್ಯಕ್ಷ ಅನುಭವ ಸಿಗುತ್ತದೆ. ಹಾಗೆಂದೇ ವಿದೇಶಗಳಲ್ಲಿ ಉಚ್ಚ ಶಿಕ್ಷಣ ಪಡೆದು ಬಂದಿದ್ದರೂ ಶಂತನುರಾವ್ ಅವರು ಕಾರಖಾನೆ ಉತ್ಪಾದನೆಗಳನ್ನು ಊರೂರಿಗೆ ತೆಗೆದುಕೊಂಡು ಹೋಗಿ, ಸ್ವತಃ ಕೃಷಿಕರಿಗೆ ಅದರ ಉಪಯುಕ್ತತೆಯ ಬಗೆಗೆ ಮನಮುಟ್ಟುವಂತೆ ತಿಳಿಸುತ್ತಿದ್ದರು.

ಪಪ್ಪಾ ಅವರು ಸ್ವಾತಂತ್ರ್ಯ ಸಮರದಲ್ಲಿ ಕೂಡ ಸಹಾಯಸಲ್ಲಿಸಿರುವರು. ಇಲ್ಲಿ ನೆರೆ ಹೊರೆಯ ಹಳ್ಳಿಗಳಲ್ಲಿ ನೆರೆಹಾವಳಿಗಳಿಂದ ಜನ ನಿರಾಶ್ರಿತರಾದಾಗ ಅವರಿಗೆಲ್ಲ 'ಕಿರ್ಲೋಸ್ಕರವಾಡಿ'ಯಲ್ಲಿ ಆಶ್ರಯ ಕೊಟ್ಟು ಹೊಸ ಜೀವನ ಪ್ರಾರಂಭಿಸಲು ಸಹಾಯ ಮಾಡಿದರು. ಅವರಲ್ಲಿ ಜಾತಿ, ಮೇಲು ಕೀಳುಗಳೆಂಬ ಭಾವನೆ ಎಂದಿಗೂ ಇಣುಕಿರಲಿಲ್ಲ. ಫ್ಯಾಕ್ಟರಿ ಪ್ರಾರಂಭವಾದ ಹೊಸದರಲ್ಲಿ ಎಲ್ಲರಿಗೂ ಒಂದೇ ಅಡಿಗೆ, ಎಲ್ಲರದೂ ಒಟ್ಟಿಗೇ ಊಟ. ನಿರುದ್ಯೋಗ ಒಂದು ಬೃಹತ್ ಸಮಸ್ಯೆ ಆಗಿರುವಾಗ ನಮ್ಮ ಯುವಕರಿಗೆ "ಪಪ್ಪಾ"ರ ಜೀವನ ಒಂದು ಆದರ್ಶವಾಗಬಲ್ಲದು.

**● ಡಾ. ಭಾಗ್ಯಶ್ರೀ ಬೋಕೆ**

ಧೂಮಶಿಖಿ ಕುಪ್ಪಳಿಸಿದರೆ ಕಂದುವುದೆ ನಭ?

– ಕುಮಾರವ್ಯಾಸ

ಕುಸಿವುದೆ ಮಂಜಿನ ಮಳೆಗಿಳೆ?

– ಬಾಹುಬಲಿ

ಬಡಿದು ಭಕ್ತಿಯ ಮಾಡಿಸಬೇಡ

– ದೇವರಾಜ

ತಂಡುಲವು ದೊರಕದೆ ಜಲಾನಲ ಭಾಂಡ ದೊರಕಿದೊಡೇನು ಸಫಲ?

– ಭಾಸ್ಕರ

ಸತ್ಯ ಸನ್ನಿಹಿತಂಗೆ ತಪದ ಬಳಲಿಕೆಯೇಕೆ?

– ಲಕ್ಕಣ್ಣ ದಂಡೇಶ

ಕನ್ನಡಿಯ ಪ್ರತಿಬಿಂಬಕಿನ್ನೊಂದನ್ಯ ಚೆಲುವಿಕೆಯಾಗಬಲ್ಲುದೆ?

– ಚಾಮರಸ

ಜ್ಞಾನ ನಿಧಿ

## ವಿದ್ಯಾರ್ಥಿ ಅಂಕಣ

# ಫರ್ಮಾನ ಕೊನೆಯ ಪ್ರಮೇಯ

**n** ಎರಡಕ್ಕಿಂತ ಹೆಚ್ಚಿನ ಪೂರ್ಣ ಸಂಖ್ಯೆಯಾಗಿದ್ದಾಗ $x^n$ ಮತ್ತು $y^n$ನ ಮೊತ್ತ $z^n$ಗೆ ಸಮವಲ್ಲ. ಇದನ್ನು $x^n+y^n \neq z^n$ (ಇಲ್ಲಿ **n** ಎರಡಕ್ಕಿಂತ ಹೆಚ್ಚಿನ ಪೂರ್ಣ ಸಂಖ್ಯೆ) ಎಂದು ಕೂಡ ಬರೆಯಬಹುದು. ಇದು ಫ್ರೆಂಚ್ ಗಣಿತಜ್ಞ ಫರ್ಮಾನ ಕೊನೆಯ ಪ್ರಮೇಯ ಎಂದು ಪ್ರಸಿದ್ಧವಾಗಿದೆ. **n**=೨ ಆದಾಗ ಏನಾಗುತ್ತದೆ? ಈ ಉದಾಹರಣೆ ನೋಡಿ: ೩೨+೪೨=೯+೧೬=೨೫=೫೨ (ಇಲ್ಲಿ **x**=೩, **y**=೪, **n**=೨, **z**=೫) ಹಲವು ಗಣಿತಜ್ಞರು ಕಂಪ್ಯೂಟರುಗಳನ್ನು ಬಳಸಿ ಅನಂತದೆಡೆಗೆ ಸಾಗಿ, ಅತಿದೊಡ್ಡ ಸಂಖ್ಯೆಗಳಿಂದ ಫರ್ಮಾನ ಪ್ರಮೇಯವನ್ನು ಒರೆಗೆ ಹಚ್ಚಿ ಸತ್ಯವೆಂದು ಕಂಡುಕೊಂಡಿದ್ದಾರೆ. ಆದರೆ ಈ ಪ್ರಮೇಯವನ್ನು ಗಣಿತೀಯವಾಗಿ ಸಾಧಿಸಲಾಗಿಲ್ಲ. ಮುಂದೊಮ್ಮೆ ಸಾಧಿಸಿದರೂ ಫರ್ಮಾನ ಉತ್ತರದೊಡನೆ ತಾಳೆ ನೋಡಲಾಗುವುದಿಲ್ಲ. ಏಕೆಂದರೆ ಫರ್ಮಾ ಈ ಪ್ರಮೇಯವನ್ನು ಪುಸ್ತಕದ ಮಾರ್ಜಿನ್ನಿನ ಖಾಲಿ ಜಾಗದಲ್ಲಿ ಬರೆದು ಇದರ ಒಂದು ಸುಲಭ ಮತ್ತು ಚಮತ್ಕಾರಿಕ ಉತ್ತರ ತನಗೆ ಗೊತ್ತೆಂದು ಬರೆದದ್ದು ಮಾತ್ರ ಸಿಕ್ಕಿದೆ. ಆದರೆ ಆತ ಬರೆದಿಟ್ಟ ಉತ್ತರ ದೊರೆತಿಲ್ಲ.

**– ಕೆ. ಗಣೇಶ್**

## ಗಣಿತ ವಿನೋದ

**ಕೂ**ಡಿಸುವುದರಲ್ಲಿ, ಗುಣಿಸುವುದರಲ್ಲಿ ಅಥವಾ ಕಳೆಯುವುದರಲ್ಲಿ, ಗುಣಿಸುವುದರಲ್ಲಿ ಅಥವಾ ಕೂಡಿಸುವುದರಲ್ಲಿ, ಭಾಗಿಸುವುದರಲ್ಲಿ ಅಥವಾ ಕಳೆಯುವುದರಲ್ಲಿ ಹಾಗೂ ಭಾಗಿಸುವುದರಲ್ಲಿ ಬಹಳ ಅಂತರವಿದೆ. ಆದರೆ ಇದಕ್ಕೆ ಅಪವಾದಗಳೂ ಉಂಟು:

$$\frac{೧೩}{೪} + \frac{೧೩}{೯} = \frac{೧೩}{೪} \times \frac{೧೩}{೯} = \frac{೧೬೯}{೩೬}$$

$$\frac{೩}{೫} - \frac{೩}{೮} = \frac{೩}{೫} \times \frac{೩}{೮} = \frac{೯}{೪೦}$$

$$\frac{೧೬೯}{೩೦} + \frac{೧೩}{೧೫} = \frac{೧೬೯}{೩೦} \div \frac{೧೩}{೧೫} = \frac{೧೩}{೨}$$

$$\frac{೧೨೧}{೨೮} - \frac{೧೧}{೭} = \frac{೧೨೧}{೨೮} \div \frac{೧೧}{೭} = \frac{೧೧}{೪}$$

ಅಲ್ಲದೆ ೧೯ ಹಾಗು ೦.೯೫ ಅನ್ನು ಗುಣಿಸಿದರಾಗಲಿ ಮೊದಲನೆಯ ಸಂಖ್ಯೆಯಲ್ಲಿ ಎರಡನೆಯದನ್ನು ಕಳೆದರಾಗಲಿ ಬರುವ ಉತ್ತರ ಒಂದೇ: ೧೮.೦೫.

**• 'ಎಂ. ಕಲ್ಲಪ್ಪಾಚಾರ್ಯ'**

## ನವನಿಧಿಗಳು

**'ಅ**ಮರ ಕೋಶ' ಪ್ರಕಾರ ಮಹಾಪದ್ಮ, ಪದ್ಮಶಂಖ, ಮಕರ, ಕಚ್ಛಪ, ಮುಕುಂದ, ಕುಂದ, ನೀಲ ಮತ್ತು ಖರ್ವ ಇವು ನವನಿಧಿಯ ಒಂಭತ್ತು ಹೆಸರುಗಳು.

**• ವೆಂಕಟೇಶ ಗಂಗಾವತಿ**

## ಜ್ಞಾನನಿಧಿ

# ಶಿಲಾಯುಗದವರು ಮಾಡಿದ ವೀರಪ್ಪನ್ ಕೆಲಸ!

**ಈ**ಗ ವೀರಪ್ಪನ್ ಮಾಡುತ್ತಿರುವ ಕೆಲಸವನ್ನು ಪೂರ್ವಶಿಲಾಯುಗದ ಕಾಡುಮಾನವರು ಮಾಡುತ್ತಿದ್ದರು ಎನ್ನುವ ಮಾತಿಗೆ ಪುಷ್ಟಿಕೊಡುವ ಘಟನೆಯೊಂದು ೧೯೬೫ರಲ್ಲಿ ಯುಕ್ರೇನಿನಲ್ಲಿ ನಡೆಯಿತು. ಅದು ಹೀಗೆ:

ಹೊಲದಲ್ಲಿ ರೈತನೊಬ್ಬ ಊಳುತ್ತಿದ್ದಾಗ ಒಂದೆಡೆ ಬೃಹದಾಕಾರದ ಎಲುವುಗಳು ನೇಗಿಲಿಗೆ ಸಿಕ್ಕು ಹೊರಬಂದವು. ರೈತನ ಕುತೂಹಲ ಕೆರಳಿ ಹೊಲದಲ್ಲಿ ಅಲ್ಲಲ್ಲಿ ಅಗೆಸಿ ನೋಡಿದಾಗ ಹಳೆಗಾಲದ ಯಾವುದೋ ಬೃಹತ್ ಪ್ರಾಣಿಗಳ ಅವಶೇಷಗಳು ಕಂಡು ಬಂದವು.

ಸುದ್ದಿ ಕೂಡಲೆ ಎಲ್ಲೆಡೆ ಹರಡಿ ಪುರಾತತ್ವ ಶಾಸ್ತ್ರಜ್ಞರು ಅಲ್ಲಿಗೆ ಬಂದು ಉತ್ಖನನ ಪ್ರಾರಂಭಿಸಿದಾಗ ಅವರಿಗೊಂದು ಆಶ್ಚರ್ಯ ಕಾದಿತ್ತು. ಒಂದೆಡೆ ೬೮೨ ಚದರ ಅಡಿಗಳಷ್ಟು ವಿಸ್ತಾರವಾದ ಹಳೆಗಾಲದ ಗುಡಿಸಲು. ಎಲ್ಲ ಎಲುವಿನಿಂದ ಮಾಡಿದ್ದು. ಪುರಾತತ್ವ ಶಾಸ್ತ್ರಜ್ಞರು ಕುತೂಹಲದಿಂದ ಭಾವಣಿಗೆ ಬಳಸಿದ ಎಲುವುಗಳನ್ನು ಗಮನವಿಟ್ಟು ಎಣಿಸಿದಾಗ ಶಿಲಾಯುಗದಲ್ಲಿ ಜೀವಿಸಿದ್ದ ೩೬ ಆನೆಗಳನ್ನು ಕೊಂದು ಭಾವಣಿಗೆ ಬಳಸಿರಬಹುದೆಂದು ಅಂದಾಜಿಸಿದರು. ಗುಡಿಸಲಿನ ನೆಲಕ್ಕೆ ಮೊಜೈಕ್ ಟೈಲ್ ಬಳಸಿದ ಹಾಗೆ ಆನೆಗಳ ತಲೆಬುರುಡೆಗಳನ್ನು ಬಳಸಲಾಗಿತ್ತು. ಅಷ್ಟು ದೊಡ್ಡ ರಚನೆಯನ್ನು ಗುಡಿಸಲೆಂದು ಕರೆಯುವುದಾದರೆ ಆ ಗುಡಿಸಲನ್ನು ಆನೆಗಳ ಎಲುವಿನಿಂದಲೆ ಮಾಡಲಾಗಿತ್ತು. ಈ ಗುಡಿಸಲನ್ನು ರಚಿಸಲು ಏನಿಲ್ಲೆಂದರೂ ೯೫ ಕಾಡಾನೆಗಳನ್ನು ಕೊಲ್ಲಲಾಗಿದೆಯೆಂದು ಪುರಾತತ್ವ ಶಾಸ್ತ್ರಜ್ಞರು ತರ್ಕಿಸಿದರು.

ಈ ಗುಡಿಸಲಿನ ಹತ್ತಿರವೇ ಇಂಥದೇ ಮತ್ತೊಂದು ಗುಡಿಸಲು. ಗಾತ್ರದಲ್ಲಿ ಮೊದಲಿನದಕ್ಕಿಂತ ಕೊಂಚ ಚಿಕ್ಕದು. ಅದರ ಹತ್ತಿರವೇ ಸುಮಾರು ೧೨೮ ಕಾಡಾನೆಗಳ ಅವಶೇಷಗಳನ್ನು ಹೂಳಿದ ಜಾಗ.

ಆದಿಮಾನವರು ಹೀಗೆ ಬೇಕಾಬಿಟ್ಟಿಯಾಗಿ ಬೇಟೆಯಾಡಿದ್ದರಿಂದಲೇ ಕಾಡಾನೆಯ ಸಂತತಿ ನಿರ್ವಂಶವಾಯಿತೋ ಏನೋ ಯಾರಿಗೆ ಗೊತ್ತು?

• 'ಎಂ. ಕಲ್ಲಪ್ಪಾಚಾರ್ಯ'

ಕೆಳಗಿನ ಚಿತ್ರಗಳಲ್ಲಿ ಮೊದಲಿನದು ಪ್ರಾಣಿ ಮೂಳೆಗಳಿಂದ ರಚಿಸಿದ ಮನೆಯ ಮುಂಭಾಗ. ಎರಡನೆಯದು ಹಿಂಭಾಗ. ಬೃಹದ್ದೇಹಿಯ ತಲೆಬುರುಡೆ ಮನೆಯ ಪಾಯವನ್ನಾಗಿಸಲ್ಪಟ್ಟಿದ್ದರೆ ಕಳಿದವಡೆಗಳು ಅದಕ್ಕೆ ಛಾವಣಿಯಾಗಿವೆ.







# ನಿಮಗೆ ಗೊತ್ತೆ?

ಸಂಗ್ರಹ: 'ಕಸ್ತೂರಿಮೃಗ'

ಸರ್ ಎಡ್ಮಂಡ್ ಹಿಲರಿ ಹಾಗೂ ತೇನಸಿಂಗ್ ನೋರ್ಕೆ ಪ್ರಥಮ ಸಲ ಎವರೆಸ್ಟ್ ಶಿಖರವನ್ನೇರಿದ್ದು ನಿಮಗೆಲ್ಲ ಗೊತ್ತೇ ಇದೆ. ಆದರೆ ಅವರನ್ನು ನೋಡಿಕೊಳ್ಳಲು ಹನ್ನೆರಡು ಜನ ಪರ್ವತಾರೋಹಿಗಳ ತಂಡ ಯಾವಾಗಲೂ ಸಿದ್ಧವಾಗಿರುತ್ತಿತ್ತು ಎನ್ನುವುದಾಗಲಿ, ಅವರೊಟ್ಟಿಗೆ ४೦ ಷೆರ್ಪಾ ಮಾರ್ಗದರ್ಶಕರು ಹಾಗೂ ಸರಕುಸರಂಜಾಮನ್ನು ಹೊತ್ತೊಯ್ಯಲು ೭೦೦ ಜನ ಕೂಲಿಗಳಿದ್ದರೆನ್ನುವುದಾಗಲಿ ಬಹುಶಃ ನಿಮಗೆ ಗೊತ್ತಿರಲಿಕ್ಕಿಲ್ಲ.

ದಕ್ಷಿಣ ಅಮೆರಿಕದ ಕೋಸ್ಟಾರಿಕಾ ದೇಶಕ್ಕೆ ಸೈನ್ಯವೇ ಇಲ್ಲ. ಬಹುಶಃ ಜಗತ್ತಿನಲ್ಲಿ ಸೈನ್ಯವಿಲ್ಲದ ದೇಶವೆಂದರೆ ಇದೊಂದೇ.

ಸೊಳ್ಳೆ ಚುಂಚಿನಿಂದ ರಕ್ತ ಹೀರುವುದೆನ್ನುವುದು ಎಲ್ಲರಿಗೂ ಗೊತ್ತು. ಆದರೆ ಅವಕ್ಕೆ ಸೂಕ್ಷ್ಮಾತಿಸೂಕ್ಷ್ಮವಾದ ४೭ ಹಲ್ಲುಗಳಿವೆಯೆನ್ನುವುದು ನಿಮಗೆ ಗೊತ್ತೆ?

ಎಲ್ಲ ಲೋಹಗಳೂ ಗಟ್ಟಿಯಾಗಿರುತ್ತವೆಂದು ಭಾವಿಸಬೇಡಿ. ಗ್ಯಾಲಿಯಮ್‌ಅನ್ನು ನೀವು ಕೈಯಲ್ಲಿ ಹಿಡಿಯುವುದೇ ತಡ, ಕರಗಿ ಹೋಗುತ್ತದೆ.

# ಜ್ಞಾನನಿಧಿ

ಕ್ರಿ.ಶ. ೧೬೬೪ರಲ್ಲಿ ಧೂಮಕೇತು ಕಂಡುಬಂದಾಗ ರಶಿಯದ ದೊರೆ ಆಸ್ಥಾನ ಜ್ಯೋತಿಷಿಗಳನ್ನು ಕರೆಸಿ ಭವಿಷ್ಯ ಕೇಳಿದ. ಇದು ಪ್ಲೇಗ್ ಬರುವುದನ್ನು ಸೂಚಿಸುತ್ತದೆಂದೂ ಆದರೆ ಅದರಿಂದ ರಶಿಯಕ್ಕೇನೂ ಅಷ್ಟು ಅಪಾಯವಿಲ್ಲವೆಂದೂ ಅವರು ಕಣಿ ನುಡಿದರು. ಅದನ್ನು ಕೇಳಿದ ಆ ದೊರೆ ಗಡಿಯಲ್ಲಿ ಪ್ರವೇಶಿಸುವ ಪ್ರತಿಯೊಬ್ಬನನ್ನೂ ವೈದ್ಯರು ಪರೀಕ್ಷಿಸಿದ ನಂತರವೇ ಒಳಗೆ ಬಿಡುವ ವ್ಯವಸ್ಥೆ ಮಾಡಿದ. ಹೊರದೇಶಗಳ ಹಡಗುಗಳು ಬಂದರನ್ನು ಪ್ರವೇಶಿಸದಂತೆ ನಿರ್ಬಂಧಿಸಿದ. ಜ್ಯೋತಿಷಿಗಳ ಭವಿಷ್ಯ ನಿಜವಾಯಿತು. ಆ ವರ್ಷ ಯುರೋಪಿನ ತುಂಬಾ ಪ್ಲೇಗಿನ ಪಿಡುಗು ಹಬ್ಬಿಕೊಂಡರೂ ದೊರೆಯ ಮುಂಜಾಗ್ರತೆಯ ಕ್ರಮಗಳಿಂದಾಗಿಯೋ ಏನೋ ರಶಿಯಕ್ಕೆ ಅದು ಪ್ರವೇಶಿಸಲೇ ಇಲ್ಲ.

ಕಾಶ್ಮೀರದ ಹುಂಜಾ ಜನರಿಗೆ ಕ್ಯಾನ್ಸರ್ ಅಂದರೆ ಏನೆಂಬುದೇ ಗೊತ್ತಿಲ್ಲ.

ಡೈನಮೈಟನ್ನು ಮೊದಲು ಕಂಡುಹಿಡಿದಾತ ಆಲ್‌ಫ್ರೆಡ್ ನೋಬೆಲ್ ಎನ್ನುವುದು ಎಲ್ಲರಿಗೂ ಗೊತ್ತು. ಆದರೆ ಪ್ಲೈವುಡ್ ಕಂಡುಹಿಡಿದವನೂ ಅವನೇ ಎನ್ನುವುದು ಗೊತ್ತಿದೆಯೇ?

ರಾಜನೊಬ್ಬನ ಜಗಳದಿಂದಾಗಿ ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರಾರಂಭವಾಯಿತೆನ್ನುವುದು ಬಹು ಜನರಿಗೆ ಗೊತ್ತಿಲ್ಲ. ಅದು ನಡೆದದ್ದು ಹೀಗೆ: ಇಂಗ್ಲೆಂಡಿನ ಎರಡನೆಯ ಹೆನ್ರಿಗೂ ಫ್ರಾನ್ಸಿನ ಆರ್ಚ್‌ಬಿಷಪ್ ಥಾಮಸ್ ಬೆಕೆಟ್‌ನಿಗೂ ಯಾವುದೋ ವಿಷಯದ ಬಗ್ಗೆ

ವೈಮನಸ್ಸು ಉಂಟಾದಾಗ ಫ್ರಾನ್ಸಿನ ದೊರೆ ಇಂಗ್ಲೆಂಡಿನ ದೊರೆಯನ್ನು ಬೆಂಬಲಿಸದೆ ಆರ್ಚ್‌ಬಿಷಪ್‌ನನ್ನೇ ಬೆಂಬಲಿಸಿದ. ಇಂಥ ವರ ಸಹವಾಸವೇ ಬೇಡ ಅಂದುಕೊಂಡ ಇಂಗ್ಲೆಂಡಿನ ದೊರೆ, ಫರ್ಮಾನು ಹೊರಡಿಸಿ ಪ್ಯಾರಿಸ್ ಯುನಿವರ್ಸಿಟಿಯಲ್ಲಿ ಓದುತ್ತಿದ್ದ ಇಂಗ್ಲೆಂಡಿನ ವಿದ್ಯಾರ್ಥಿಗಳೆಲ್ಲರನ್ನೂ ಕರೆಸಿ ಕೊಂಡ. ಪ್ಯಾರಿಸ್ಸಿನಲ್ಲಿ ಹೀಗೆ ಓದುವುದನ್ನು ಅರ್ಧಕ್ಕೇ ನಿಲ್ಲಿಸಿ ಇಂಗ್ಲೆಂಡಿಗೆ ಹಿಂದಿರುಗಿದ ವಿದ್ಯಾರ್ಥಿಗಳೆಲ್ಲ ಕಲೆತು ಆಕ್ಸ್‌ಫರ್ಡಿನಲ್ಲಿ ವಿಶ್ವ ವಿದ್ಯಾಲಯವನ್ನು ಪ್ರಾರಂಭಿಸಿದರು.

ಹೆಚ್ಚಿನಂಶ ಸಸ್ಯಗಳು ಇರುವುದು ಭೂಮಿಯ ಮೇಲೆ ಎಂದು ನೀವು ಭಾವಿಸಿ ದ್ದರೆ ಅದು ತಪ್ಪು. ಶೇಕಡಾ ಎಂಬತ್ತರಷ್ಟು ಸಸ್ಯವರ್ಗ ಸಮುದ್ರದ ತಳದಲ್ಲೇ ಇದೆ.

ಇಪ್ಪತ್ತೈದು ಗಂಟೆಗಳಲ್ಲಿ ಮೂರು ಅಡಿ ಗಳಷ್ಟು ಉದ್ದವಾಗಿ ಬಿದಿರು ಬೆಳೆದ ಉದಾ ಹರಣೆಗಳಿವೆ.

ಕ್ಷಿಪಣಿಯನ್ನು ಹಾರಿಸುವುದಕ್ಕಿಂತ ಮೊದಲು ವಿಲೋಮಗಣನೆಯನ್ನು ಪ್ರಾರಂ ಭಿಸುವ ಪದ್ಧತಿಗೆ ಮೂಲಪ್ರೇರಣೆ ದೊರಕಿದ್ದು ಫ್ರಿಕ್ಸ್ ಲಾಂಗ್ ೧೯೨೮ರಲ್ಲಿ ನಿರ್ದೇಶಿಸಿದ 'ದಿ ಫ್ರೌ ಇಮ್ ಮಾಂದ್' (ಚಂದ್ರಗ್ರಹ ದಲ್ಲಿ ಸ್ತ್ರೀ) ಎಂಬ ಚಲನಚಿತ್ರದಿಂದ.

ಮದುವೆ ವಯಸ್ಸಿಗೆ ಬಂದ ಸುಂದರ ತರುಣಿಯರನ್ನು ಹರಾಜಿಗೆ ಹಾಕಿ ಅದರಿಂದ ಬಂದ ಹಣವನ್ನು ಕುರೂಪಿಗಳ ಮದುವೆಗೆ ಉಪಯೋಗಿಸುವ ಪದ್ಧತಿ ಬಾಬಿಲೋನಿನ ಲ್ಲಿತ್ತು. ಜಗತ್ತಿನ ಮೊದಲನೆಯ ಇತಿಹಾಸಕಾ ರನಾದ ಹೆರೊಡೋಟಸ್ ಇದನ್ನು 'ಅತ್ಯಂತ ಜಾಣತನದ ಕ್ರಮ'ವೆಂದು ಹೊಗಳಿದ.

ಟೈನೋಸಾರಸ್ ರೆಕ್ಸ್ ಎಂಬ ಜಾತಿಪ್ರ ಭೇದವೊಂದನ್ನು ಹೊರತುಪಡಿಸಿ ಉಳಿದೆಲ್ಲ ಪೆಡಂಭೂತಗಳೂ ಸಸ್ಯಾಹಾರಿಗಳಾಗಿದ್ದವು. ಈ ಟೈನೋಸಾರಸ್ ರೆಕ್ಸ್ ಮಾತ್ರ ಉಳಿದ ಪೆಡಂಭೂತಗಳನ್ನು ತಿಂದು ಜೀವಿಸುತ್ತಿತ್ತು. ನಾಲ್ಕು ಜನರ ಕುಟುಂಬಕ್ಕೆ ಒಂದು ತಿಂಗ ಳವರೆಗೆ ಸಾಕಾಗುವಷ್ಟು ಆಹಾರವನ್ನು ಅದು ಒಂದೇ ತುತ್ತಿನಲ್ಲಿ ಕಬಳಿಸುತ್ತಿತ್ತು ಎಂಬುದು ವಿಜ್ಞಾನಿಗಳ ಲೆಕ್ಕಾಚಾರ.

ಪಾಶ್ಚಾತ್ಯರಲ್ಲಿ ಪೈಪೋಟಿ ಶುರುವಾ ದದ್ದೇ ನೀರಿನ ದೆಸೆಯಿಂದ ಎಂದು ಕಾಣು ತ್ತದೆ. ಲ್ಯಾಟಿನ್ನಿನಲ್ಲಿ ರೈವಸ್ ಎಂದರೆ ಹೊಳೆ. ಅದರಿಂದಲೇ ಇಂಗ್ಲಿಷಿನಲ್ಲಿ ರೈವಲ್ರಿ (rivalry).

ಮೆಕ್ಸಿಕೊದಲ್ಲಿ ಮಾತ್ರ ಬೆಳೆಯುವ ಪೂಯಾ ಗಿಡ ಹೂಬಿಟ್ಟಿತೆಂದರೆ ಅದನ್ನು ನೋಡಲು ಜನ ನೆರೆಯುತ್ತಾರೆ. ಏಕೆ ಗೊತ್ತೆ? ಆ ಗಿಡ ನೂರೈವತ್ತು ವರ್ಷಕ್ಕೆ ಹೂ ಬಿಡುತ್ತದೆ. ಒಮ್ಮೆ ಹೂಬಿಟ್ಟಿತೆಂದರೆ ಗಿಡದ ಆಯುಷ್ಯ ಮುಗಿಯಿತೆಂದೇ ಅರ್ಥ. ಒಂದು ಗಿಡಕ್ಕೆ ಒಂದೇ ಗೊಂಚಲು. ಹೂಗೊಂಚಲು ಇಪ್ಪತ್ತು ಅಡಿಗಳಷ್ಟು ಉದ್ದವಾಗಿರುತ್ತದೆ.

ಆಕಾಶದ ಬಣ್ಣ ನೀಲಿಯೆ? ಊಂಹುಂ. ವಾಸ್ತವವಾಗಿ ಆಕಾಶದ ಬಣ್ಣ ಕಪ್ಪು. ವಾತಾವರಣದಲ್ಲಿ ಅಸಂಖ್ಯ ಧೂಳಿನ ಕಣಗಳು ತೇಲುತ್ತಿದ್ದು, ಅವುಗಳ ಮೇಲೆ ಸೂರ್ಯಕಿರಣಗಳು ಬಿದ್ದಾಗ ನೀಲಿ ಕಿರಣ ಉಳಿದ ಕಿರಣಗಳಿಗಿಂತ ಹೆಚ್ಚು ವಿಸ್ತಾರವಾಗಿ ಹರಡುವುದರಿಂದ ಆಕಾಶ ನಮಗೆ ನೀಲಿಯಾಗಿ ಕಾಣುತ್ತದೆ.

## ಹಾರುವ ಭೂತ

೧೯೪೧. ಎರಡನೆಯ ಮಹಾಯುದ್ಧದ ಸಮಯ. ಬ್ರಿಟಿಶ್ ವೈಮಾನಿಕನೊಬ್ಬ ಕಾವಲು ತಿರುಗುತ್ತಿದ್ದಾಗ ಹಳೆ ಮಾದರಿಯ ವಿಮಾನವೊಂದು ಮುಂದೆ ಮುಂದೆ ಸಾಗುತ್ತಿದ್ದುದನ್ನು ಕಂಡ. ಕುತೂಹಲದಿಂದ ವಿಮಾನವನ್ನು ಓಡಿಸಿದಾಗ ಆ ವಿಮಾನದಲ್ಲಿದ್ದ ಅಪರಿಚಿತ ಕಂಡನಾದರೂ ವಿಮಾನವನ್ನು ಹಿಡಿಯಲಾಗಲಿಲ್ಲ. ವೈಮಾನಿಕ ತನ್ನ ವಿಮಾನದ ವೇಗವನ್ನು ಹೆಚ್ಚಿಸಿದ. ಮುಂದಿನ ವಿಮಾನದಲ್ಲಿದ್ದಾತನೂ ಹಾಗೆಯೇ ಮಾಡಿದ. ಏನಾದರಾಗಲಿ, ನೋಡಿಯೇ ಬಿಡುವುದೆಂದು ವಿಮಾನದ ವೇಗವನ್ನು ವೈಮಾನಿಕ ೩೫೦ ಮೈಲುಗಳಿಗೇರಿಸಿದ. ಆಗಲೂ ಆ ವಿಮಾನ ಕೈಗೆಟುಕಲಿಲ್ಲ. ಕೊನೆಗೆ ವೈಮಾನಿಕ ಸೋತು ತನ್ನ ನೆಲೆಗೆ ಹಿಂದಿರುಗಿದ.

ಮಧ್ಯಾಹ್ನ ಊಟ ಮಾಡುತ್ತಿದ್ದಾಗ ಈ ವೈಚಿತ್ರ್ಯವನ್ನು ಸಹೋದ್ಯೋಗಿಗಳಿಗೆ ಹೇಳಿದಾಗ ಅವರು, "ಓಹ್! ಅದೇ! ಒಂದರ ಮೇಲೊಂದು ರೆಕ್ಕೆಯಿರುವ ಹಳೆಗಾಲದ ಬೈಪ್ಲೇನನ್ನು ಕುರಿತು ತಾನೆ ನೀನು ಹೇಳುತ್ತಿರುವುದು? ಇಂಥ ಅನುಭವ ನಮಗೂ ಆಗಿದೆಬಿಡು. ಆದರೆ ಆ ವಿಮಾನ ನಡೆಸುವ ಪುಣ್ಯಾತ್ಮ ಯಾರೆನ್ನುವುದು ಮಾತ್ರ ಗೊತ್ತಾಗಿಲ್ಲ. ಪ್ರತಿಸಲ ಶತ್ರುವಿನ ಕಡೆಯಿಂದ ದಾಳಿಯಾಗುವ ಮೊದಲಾದರೂ ಬರುತ್ತದೆ; ಕಡಲತೀರದ ಬಳಿ ಜರ್ಮನ್ನರ ಯು ಬೋಟ್ ಬರುವಾಗಲಾದರೂ ಬರುತ್ತದೆ. ಆ ಬೈಪ್ಲೇನ್ ಬಂದಿತೆಂದರೆ ಶತ್ರುವಿನ ದಾಳಿಯನ್ನೆದುರಿಸಲು ನಾವು ತಯಾರಾಗಿರಬೇಕೆಂದೇ ಅರ್ಥ. ಆದರೆ ಒಂದು ಮಾತು ಮಾತ್ರ ನಿಜ. ಆ ವಿಮಾನ ಜರ್ಮನ್ನರಿಗೆ ಸೇರಿದ್ದಲ್ಲ. ವೈಮಾನಿಕನೂ ಜರ್ಮನ್ನನಲ್ಲ."

ಇದಾಗಿ ಕೆಲ ದಿನಗಳ ನಂತರ ಆ ಬ್ರಿಟಿಶ್ ವೈಮಾನಿಕ ಗಸ್ತು ತಿರುಗುತ್ತಿದ್ದಾಗ ನಿರ್ಜನ ಪ್ರದೇಶವೊಂದರಲ್ಲಿನ ಕಮರಿಯಲ್ಲಿ ವಿಮಾನ ಬಿದ್ದಿರುವುದನ್ನು ಕಂಡು ಮೇಲಧಿಕಾರಿಗಳಿಗೆ ವರದಿ ಮಾಡಿದ.

ಅವರೆಲ್ಲರೂ ಅಪಘಾತದ ಸ್ಥಳಕ್ಕೆ ಭೇಟಿಯಿತ್ತಾಗ ಕಂಡ ದೃಶ್ಯ ವಿಚಿತ್ರವಾಗಿತ್ತು. ಕಮರಿಯಲ್ಲೊಂದು ಬ್ರಿಟನ್ನಿನ ರಾಯಲ್ ಏರ್‌ಫೋರ್ಸಿಗೆ ಸೇರಿದ ವಿಮಾನ. ರೆಕ್ಕೆಗಳು ಮುರಿದಿವೆ. ವೈಮಾನಿಕ ಕೂಡುವ ಜಾಗದಲ್ಲಿ ಸಮವಸ್ತ್ರ ಧರಿಸಿದ ಕಳೇವರ. ಮಳೆ-ಗಾಳಿಗೆ ಸಿಕ್ಕು ಸಮವಸ್ತ್ರ ಅಲ್ಲಲ್ಲಿ ಹರಿದುಹೋಗಿದೆ. ವೈಮಾನಿಕನ ಅಸ್ಥಿಪಂಜರ ಮಾತ್ರ ಉಳಿದಿದೆ. ಮೆಕ್ಯಾನಿಕ್ ಒಬ್ಬ ಪರೀಶಿಲಿಸಿದಾಗ ಇಂಜನ್ನಿಗೆ ಪೆಟ್ರೋಲು ಸಾಗುವ ಮಾರ್ಗದಲ್ಲಿ ಅಡೆತಡೆಯುಂಟಾದದ್ದು ಗೊತ್ತಾಯಿತು. ಆ ಸ್ಥಿತಿಯಲ್ಲೇ ವಿಮಾನ ಕೆಳಕ್ಕೆ ಅಪ್ಪಳಿಸಿ ಸಿಕ್ಕಿಹಾಕಿಕೊಂಡಿರಬೇಕು. ವೈಮಾನಿಕನ ಎರಡೂ ಕಾಲಿನ ಮೂಳೆಗಳು ಮುದಿದಿದ್ದವು. ಬಹುಶಃ ಅದು ಅಪ್ಪಳಿಸಿದ ರಭಸಕ್ಕೆ ಅವು ಮುರಿದಿರಬಹುದು. ಆ ಕಾಲದಲ್ಲಿ ಈಗಿನ ಹಾಗೆ ವಿಮಾನಗಳಲ್ಲಿ ರೇಡಿಯೋ ಸಂಪರ್ಕವಿಲ್ಲದ್ದರಿಂದ ಆ ವೈಮಾನಿಕ 'ಯಾರಾದರೂ ಬಂದಾರೆಯೇ?' ಎಂದು ಕಾಯುತ್ತಾ ಹೊಟ್ಟೆಗಿಲ್ಲದೆ ಅಸುನೀಗಿರಬೇಕು ಎಂದು ಅಧಿಕಾರಿಗಳು ತರ್ಕಿಸಿದರು. ವಿಮಾನದ ನಂಬರು ಇನ್ನೂ ಅಳಿಸಿರಲಿಲ್ಲ. ಮೊದಲನೆ ಮಹಾಯುದ್ಧದಲ್ಲಿ ಬಳಸಿದ ವಿಮಾನ ಅದಾಗಿತ್ತು.

ಸಕಲ ಮರ್ಯಾದೆಗಳೊಡನೆ ಆ ಕಳೇಬರವನ್ನು ದಫನ ಮಾಡಲಾಯಿತು. ಅಂದಿನಿಂದ ವೈಮಾನಿಕರಾರೂ ಆಕಾಶದಲ್ಲಿ ಗಸ್ತು ಹೊಡೆಯುವಾಗ ಆ ವಿಮಾನವನ್ನು ಕಂಡಿಲ್ಲ.

● 'ಎಂ. ಗಂಗಾಧರಭಟ್ಟ'

## ಭೂತಕಾಲವನ್ನು ಹೊಕ್ಕು ನೋಡಲು ಸಾಧ್ಯವೆ?

ಸಾಧ್ಯವಿಲ್ಲ ಅನ್ನಿಸುತ್ತದಲ್ಲವೆ? ಬೆಳಕಿನ ವೇಗವನ್ನು ಪರಿಗಣಿಸಿದರೆ ಪೃಥ್ವಿಯ ಗಾತ್ರ ತೀರಾ ಚಿಕ್ಕದು; ಹೀಗಾಗಿ ಎಷ್ಟೋ ಮೈಲುಗಳ ದೂರದಲ್ಲಿ ನಡೆದದ್ದನ್ನು ಘಟನೆ ಸಂಭವಿಸಿದ ತತ್‌ಕ್ಷಣ ನೋಡಬಹುದಾದ್ದರಿಂದ ಭೂತಕಾಲವನ್ನು ನೋಡುವುದು ಸಾಧ್ಯವಿಲ್ಲ ಅನ್ನಿಸುವುದು ಸ್ವಾಭಾವಿಕ.

ಆದರೆ ಭೂತಕಾಲವನ್ನು ಹೊಕ್ಕು ನೋಡಲು ಖಂಡಿತ ಸಾಧ್ಯ. ಘಟನೆ ಮಾತ್ರ ಲಕ್ಷಾಂತರ ಮೈಲುಗಳ ಅಂತರದಲ್ಲಿ ನಡೆದಿರಬೇಕು. ಉದಾಹರಣೆಗೆ ಖಗೋಲಶಾಸ್ತ್ರೀಯವಾಗಿ ನಮಗೆ ಹತ್ತಿರವಾಗಿರುವ ಸೂರ್ಯನನ್ನೇ ತೆಗೆದುಕೊಳ್ಳಿ. ಅದು ಸಾಧ್ಯವಿಲ್ಲ ನಿಜ, ಆದರೆ ಅಕಸ್ಮಾತ್ತಾಗಿ ಸೂರ್ಯ ಎರಡುಪಟ್ಟು ಹೆಚ್ಚು ಪ್ರಕಾಶಮಾನವಾಗುತ್ತಾನೆಂದು ಭಾವಿಸಿ. ಅದು ನಮ್ಮ ಗಮನಕ್ಕೆ ಬರಲು ಎಂಟೂವರೆ ನಿಮಿಷಗಳೇ ಬೇಕು. ಅರ್ಥಾತ್ ಅಂಥ ಪ್ರಸಂಗದಲ್ಲಿ ನೀವು ಎಂಟೂವರೆ ನಿಮಿಷದ ಹಿಂದೆ ನಡೆದದ್ದನ್ನು ಸದ್ಯವೇ ಸಂಭವಿಸಿದ ಹಾಗೆ ಪೃಥ್ವಿಯ ಮೇಲೆ ನೋಡುತ್ತಿರುತ್ತೀರಿ. ಸೌರವ್ಯೂಹದ ಹೊರಗೆ ನಮಗೆ ತೀರಾ ಹತ್ತಿರವಾದ ನಕ್ಷತ್ರವೆಂದರೆ ಪ್ರಾಕ್ಸಿಮಾ ಸೆಂಟಾರಿ. ಅದನ್ನು ನೀವು ದೂರದರ್ಶಕದ ಮೂಲಕ ನೋಡುವಾಗ ವಾಸ್ತವವಾಗಿ ಸುಮಾರು ನಾಲ್ಕೂವರೆ ವರ್ಷದ ಹಿಂದೆ ನಡೆದದ್ದನ್ನು ನೋಡುತ್ತಿರುತ್ತೀರಿ. ಜಿಟೆಲ್‌ಗೀಸೆ ಎಂಬುದು ಒಂದು ಮಹಾಕಾಯದ ನಕ್ಷತ್ರ. ಅಲ್ಲಿಂದ ಹೊರಟ ಪ್ರಕಾಶ ಕಿರಣ ಪೃಥ್ವಿಯನ್ನು ತಲುಪಲು ಐನೂರಾ ಇಪ್ಪತ್ತು ವರ್ಷಗಳು ಬೇಕು. ಅಂದಹಾಗೆ ಧ್ರುವ ನಕ್ಷತ್ರ ಪ್ರಕಾಶಿಸುವುದನ್ನು ಒಮ್ಮೆಲೆ ನಿಲ್ಲಿಸಿತೆಂದು ಭಾವಿಸಿ. ಅದು ನಮಗೆ ಗೊತ್ತಾಗಲು ೧೦ಲಕ್ಷ ವರ್ಷಗಳೇ ಬೇಕು!

## ಬಿಡಿಸಲಾಗದ ಸಮಸ್ಯೆ

ನದಿ ತೀರದ ಮೇಲಿರುವ ಒಂದು ಊರು. ನದಿಗೆ ಅಡ್ಡಲಾಗಿ ಒಂದು ಸೇತುವೆ. ಸೇತುವೆಯ ಹತ್ತಿರವೇ ಒಂದು ಗಲ್ಲುಮರ. ಸೇತುವೆಯನ್ನು ದಾಟಿ ಹೋಗುವ ಪ್ರಯಾಣಿಕರು ತಾವು ಎಲ್ಲಿಗೆ ಹೋಗುತ್ತೇವೆಂದು ಸತ್ಯ ನುಡಿಯಬೇಕು. ಅಸತ್ಯ ನುಡಿವವರನ್ನು ಗಲ್ಲಿಗೇರಿಸಲಾಗುತ್ತಿತ್ತು.

ಒಂದು ದಿನ ಒಬ್ಬ ಪ್ರಯಾಣಿಕನನ್ನು ಸೇತುವೆಯ ಕಾವಲುಗಾರರು ಪ್ರಶ್ನಿಸಿದಾಗ, ಅವನು ತಾನು ಗಲ್ಲುಮರದಲ್ಲಿ ನೇಣು ಹಾಕಿಸಿಕೊಳ್ಳಲು ಹೋಗುತ್ತಿರುವೆನೆಂದು ಹೇಳಿದ. ಅವನ ಈ ಉತ್ತರದಿಂದ ಕಾವಲುಗಾರರಿಗೆ ಬಿಡಿಸಲಾಗದ ಸಮಸ್ಯೆಯುಂಟಾಯಿತು. ಪ್ರಯಾಣಿಕನನ್ನು ಗಲ್ಲಿಗೇರಿಸಿದರೆ, ಅವನು ನುಡಿದದ್ದು ನಿಜವಾಗುವುದು. ಆದ್ದರಿಂದ ಅವನನ್ನು ಬಿಟ್ಟುಬಿಡುವುದೇ ಸರಿ. ಆದರೆ ಸೇತುವೆ ದಾಟಲು ಅವನಿಗೆ ಅನುಮತಿಯಿತ್ತರೆ, ಆಗ ಅವನ ಮಾತು ಸುಳ್ಳಾಗಿ, ಅವನನ್ನು ಗಲ್ಲಿಗೇರಿಸಬೇಕಾಗುತ್ತದೆ.

ಈಗ ಹೇಳಿ: ಪ್ರಯಾಣಿಕನನ್ನು ಯಾವ ಗಣಕ್ಕೆ ಸೇರಿಸುತ್ತೀರಿ? ಸುಳ್ಳು ಹೇಳಿದವರ ಗಣಕ್ಕೋ, ಇಲ್ಲವೆ ದಿಟ ನುಡಿದವರ ಗಣಕ್ಕೋ?

• ಕೆ.ಎಸ್. ವೆಂಕಟರಾಮು

# ಒಂದು ಟನ್ ಕಟ್ಟಿಗೆ ಒಂದು ಟನ್ ಕಬ್ಬಿಣ

ಯಾವುದು ಹೆಚ್ಚು ತೂಕವಾದದ್ದು? ಒಂದು ಟನ್ ಕಟ್ಟಿಗೆಯೋ ಅಥವಾ ಒಂದು ಟನ್ ಕಬ್ಬಿಣವೊ? ಒಂದು ಟನ್ ಕಬ್ಬಿಣವೇ ಹೆಚ್ಚು ತೂಕ ಎಂದು ಕೆಲವರು ಯೋಚನೆ ಮಾಡದೇ ಹೇಳಿ ನಗೆಪಾಟಲಿಗೆ ಈಡಾಗುತ್ತಾರೆ. ಒಂದು ಟನ್ ಕಟ್ಟಿಗೆಯೇ ಹೆಚ್ಚು ತೂಕವಾದುದು ಎಂದು ಹೇಳಿದಾಗ ಪ್ರಶ್ನೆ ಕೇಳಿದಾತ ಬಹುಶಃ ಇನ್ನೂ ಹೆಚ್ಚು ಗಹಗಹಿಸಿ ನಗಬಹುದೇನೋ. ಇದು ನಂಬಲಸಾಧ್ಯವೆಂದೇ ಕಂಡುಬರಬಹುದು. ಆದರೆ ನಿಖರವಾಗಿ ಹೇಳುವುದಾದರೆ ಅದು ನಿಜ.

ಮುಖ್ಯ ವಿಷಯವೆಂದರೆ, ಆರ್ಕಿಮಿಡೀಸನ ಸೂತ್ರವನ್ನು ದ್ರವಗಳಿಗಷ್ಟೇ ಅಲ್ಲ; ಅನಿಲಗಳಿಗೂ ಅನ್ವಯಿಸಬಹುದು ಎಂಬುದಾಗಿದೆ. ಗಾಳಿಯಲ್ಲಿ ಪ್ರತಿಯೊಂದು ವಸ್ತುವೂ ಅದು ಸ್ಥಳಾಂತರಿಸುವಷ್ಟು ಗಾಳಿಯ ತೂಕಕ್ಕೆ ಸಮನಾದಷ್ಟು ತೂಕವನ್ನು ಕಳೆದುಕೊಳ್ಳುತ್ತದೆ. ಕಟ್ಟಿಗೆಯೂ ಕಬ್ಬಿಣವೂ ತಮ್ಮ ತೂಕಗಳಲ್ಲಿ ಒಂದು ಭಾಗವನ್ನು ಕಳೆದುಕೊಳ್ಳುತ್ತವೆಯಾದ್ದರಿಂದ ಅವುಗಳ ನಿಜವಾದ ತೂಕವನ್ನು ಪಡೆಯಲು ಅವುಗಳಿಗೆ ಈ ನಷ್ಟವಾದ ತೂಕವನ್ನೂ ಸೇರಿಸಬೇಕು. ಆದ್ದರಿಂದಾಗಿ, ಈ ಪ್ರಸಂಗದಲ್ಲಿ ಒಂದು ಟನ್ ಕಟ್ಟಿಗೆಯ ನಿಜವಾದ ತೂಕವೆಂದರೆ ಒಂದು ಟನ್ ಮತ್ತು ಅದರ ಜೊತೆಗೆ ಕಟ್ಟಿಗೆಯು ಸ್ಥಳಾಂತರಿಸಿದ ಗಾಳಿಯ ತೂಕ. ಆದರೆ ಒಂದು ಟನ್ ಕಟ್ಟಿಗೆಯು ಒಂದು ಟನ್ ಕಬ್ಬಿಣ ಆಕ್ರಮಿಸುವುದಕ್ಕಿಂತ ಸುಮಾರು ೧೫ ಪಟ್ಟು ಹೆಚ್ಚು ಸ್ಥಳವನ್ನು ಆಕ್ರಮಿಸಿಕೊಳ್ಳುತ್ತದೆ. ಆದ್ದರಿಂದ ಒಂದು ಟನ್ ಕಟ್ಟಿಗೆಯ ನಿಜವಾದ ತೂಕ ಒಂದು ಟನ್ ಕಬ್ಬಿಣದ ನಿಜವಾದ ತೂಕಕ್ಕಿಂತ ಹೆಚ್ಚಾಗಿರುತ್ತದೆ. ಅಥವಾ ಇದನ್ನು ನಾವು ಹೀಗೆ ಹೇಳಬಹುದು. ಗಾಳಿಯಲ್ಲಿ ಒಂದು ಟನ್ ತೂಗುವ ಕಟ್ಟಿಗೆಯ ನಿಜವಾದ ತೂಕವು, ಅದೇ ರೀತಿ ಗಾಳಿಯಲ್ಲಿ ಒಂದು ಟನ್ ತೂಗುವ ಕಬ್ಬಿಣದ ನಿಜವಾದ ತೂಕಕ್ಕಿಂತ ಹೆಚ್ಚಾಗಿರುತ್ತದೆ.

ಒಂದು ಟನ್ ಕಟ್ಟಿಗೆಯು ಸುಮಾರು ೨ ಘನ ಮೀಟರಿನಷ್ಟು ಗಾತ್ರ ಆಕ್ರಮಿಸುವುದರಿಂದ ಮತ್ತು ಒಂದು ಟನ್ ಕಬ್ಬಿಣವು ೧/೮ ಘನ ಮೀಟರಿನಷ್ಟು ಗಾತ್ರ ಆಕ್ರಮಿಸುವುದರಿಂದ ಸ್ಥಳಾಂತರಿತವಾದ ಎರಡು ವಿಭಿನ್ನ ಗಾತ್ರಗಳ ಗಾಳಿಯ ತೂಕಗಳ ನಡುವಿನ ವ್ಯತ್ಯಾಸವು ಸುಮಾರು ೨.೫ ಕಿ.ಗ್ರಾಂಮಿನಷ್ಟಾಗಿರಬೇಕು. ಹೀಗೆ ಒಂದು ಟನ್ ಕಟ್ಟಿಗೆಯು ಒಂದು ಟನ್ ಕಬ್ಬಿಣಕ್ಕಿಂತ ಈ ಪ್ರಮಾಣದಷ್ಟು ಹೆಚ್ಚು ತೂಕವಾಗಿರುತ್ತದೆ.

(ಆಧಾರ: ಪೆರೆಲ್ಮನ್‌ನ 'ಮನರಂಜನೆಗೆ ಭೌತಶಾಸ್ತ್ರ)

• ಸಂಗ್ರಹ: ಬಿ.ಕೆ. ವರದರಾಜ

## ಜ್ಞಾನನಿಧಿ

## ಪ್ರಥಮ ಬಹುಮಾನ ಪಡೆದ ಭಾರತೀಯ ಬಾಲೆ

೧೯೯೧ರ ವರ್ಷಾಂತ್ಯದಲ್ಲಿ, ಅಮೆರಿಕದ ಹ್ಯೂಸ್ಟನ್‌ನಲ್ಲಿರುವ ಅರುಣಾ ಚಂದ್ರಶೇಖರ್ ಎಂಬ ಒಂಬತ್ತು ವರ್ಷದ ಬಾಲೆ ೧೯೮೯ರ ಮಾರ್ಚ್‌ನಲ್ಲಿ ಅಲಾಸ್ಕಾ ಕರಾವಳಿಯಲ್ಲಿ ಸಂಭವಿಸಿದ ಪ್ರಮುಖ ಪರಿಸರ ನಾಶವನ್ನು ಕುರಿತು ಒಂದು ಪುಸ್ತಕ ಬರೆದಳು. ಅದರ ಹೆಸರು 'ಆಲಿವರ್ ಅಂಡ್ ದಿ ಆಯಿಲ್ ಸ್ಪಿಲ್.'

ಕಚ್ಚಾ ತೈಲ ಕೊಂಡೊಯ್ಯುತ್ತಿದ್ದ ಎಕ್ಸಾನ್ ಕಾರ್ಪೊರೇಷನ್ನಿನ 'ವಾಲ್ಡೇಜ್' ಎಂಬ ನೌಕೆ ಅಲಾಸ್ಕಾ ಕರಾವಳಿಯ ಮರಳ ದಿಬ್ಬವೊಂದಕ್ಕೆ ಡಿಕ್ಕಿ ಹೊಡೆದ ಕಾರಣ ಲಕ್ಷಾಂತರ ಲೀಟರ್ ತೈಲ ಸಮುದ್ರದೊಳಗೆ ಚೆಲ್ಲಿ ಹೋಯಿತು. ಇದು ಅಮೆರಿಕದ ಇತಿಹಾಸದಲ್ಲೇ ಅತ್ಯಂತ ವಿನಾಶಕಾರಿ ತೈಲ ಸೋರಿಕೆಯೆನಿಸಿತು. ಇದರಿಂದ ಆ ಪ್ರದೇಶದ ಮೀನುಗಳಿಗೆ ಹಾಗೂ ವನ್ಯ ಸಂಪತ್ತಿಗೆ ಅತ್ಯಧಿಕ ಹಾನಿಯುಂಟಾಯಿತು. ಅರುಣಾಳ ಪುಸ್ತಕ ತೈಲ ಸೋರಿಕೆಯಿಂದಾಗಿ ತನ್ನ ತಾಯಿಯನ್ನು ಕಳೆದುಕೊಂಡ 'ಆಲಿವರ್' ಎಂಬ ಓಟರ್ ಪ್ರಾಣಿಯ ಕತೆ ಹೇಳುತ್ತದೆ. ಅರುಣಾ ಈ ಪುಸ್ತಕ ಬರೆಯುವ ಮುನ್ನ ಹಲವಾರು ಗ್ರಂಥಾಲಯಗಳಿಗೆ ಹೋಗಿ ಓಟರ್ ಪ್ರಾಣಿಗಳ ವರ್ತನೆ ಬಗೆಗೆ ಸಾಕಷ್ಟು ಮಾಹಿತಿ ಸಂಗ್ರಹಿಸಿದಳು.

ಮೊಂಟಾನಾದ ಲ್ಯಾಂಡ್ ಮಾರ್ಕ್ಸ್ ಎಡಿಷನ್ಸ್ ಪ್ರಕಾಶನ ಸಂಸ್ಥೆಯವರು ಏರ್ಪಡಿಸಿದ್ದ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಪಡೆದಿರುವ ಈ ಪುಸ್ತಕವನ್ನು ಸಂಸ್ಥೆಯವರೇ ಹೊರತಂದರು. ಸ್ವತಃ ಅರುಣಾಳೇ ಪುಸ್ತಕಕ್ಕಾಗಿ ಚಿತ್ರಗಳನ್ನು ರಚಿಸಿ ಕೊಟ್ಟಿರುವಳು. ಈ ಪ್ರತಿಭಾವಂತ ಬಾಲಕಿಯ ಜಾಣತನವನ್ನು ಮೆಚ್ಚಿ ಇವಳ ಶಿಕ್ಷಣಕ್ಕಾಗಿ ಈ ಸಂಸ್ಥೆ ೫,೦೦೦ ಡಾಲರ್ ಹಣ ನೀಡಿ ಪ್ರೋತ್ಸಾಹಿಸಿದೆ.

• ಆರ್. ಶಿವಸಿಂಗ್

## ದೇಶಗಳ ಅಡ್ಡ ಹೆಸರುಗಳು

| ದೇಶ | ಅಡ್ಡ ಹೆಸರು |
|---|---|
| ೧. ಆಫ್ರಿಕ | ಕಪ್ಪು ಖಂಡ |
| ೨. ಆಸ್ಟ್ರೇಲಿಯ | ಕಾಂಗರೂ ದೇಶ |
| ೩. ಬೆಲ್ಜಿಯಮ್ | ಯುರೋಪಿನ ಕಾಕ್‌ಪಿಟ್ |
| ೪. ಬರ್ಮಾ | ಸ್ವರ್ಣಪಗೋಡಗಳ ನಾಡು |
| ೫. ಐರ್ಲ್ಯಾಂಡ್ | ಮರಕತ ದ್ವೀಪ |
| ೬. ಜಪಾನ್ | ಉದಯ ರವಿಯ ದೇಶ |
| ೭. ಸ್ವಿಟ್ಜರ್‌ಲಂಡ್ | ಯುರೋಪಿನ ಆಟದ ಸ್ಥಳ |
| ೮. ಥೈಲಂಡ್ | ಬಿಳಿಯಾನೆಗಳ ದೇಶ |
| ೯. ಟಿಬೇಟ್ | ಪ್ರಪಂಚದ ಛಾವಣಿ |
| ೧೦. ತುರ್ಕಸ್ತಾನ | ಯುರೋಪಿನ ರೋಗಿಷ್ಟ |
| ೧೧. ಫಿನ್‌ಲ್ಯಾಂಡ್ | ಸಾವಿರ ಸರೋವರಗಳ ದೇಶ |

• ಕೋಲಾರ ಕೃಷ್ಣ ಅಯ್ಯರ್

# ನಿಮ್ಮ ಶಬ್ದಭಾಂಡಾರ ಬೆಳೆಯಲಿ

## ಶಬ್ದ ಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

**ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳ ಪರಿಚಯ ಮಾಡಿಕೊಡಲಾಗುವುದು. ಆಯಾಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟದ್ದು, ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.**

೧. ವಿಹಂಗಮ
- (ಅ) ದೇವತೆ
- (ಆ) ಹಕ್ಕಿ
- (ಇ) ಮೀನು
- (ಈ) ಸುಂದರ

೨. ವಿಸ್ಫಾರಿತ
- (ಅ) ಮುರಿದು ಹೋದ
- (ಆ) ಜಾರಿದ
- (ಇ) ಚೆಲ್ಲಿದ
- (ಈ) ಉಬ್ಬಿದ

೩. ವೈಕಲ್ಪಿಕ
- (ಅ) ಸುಳಿಸುಳಿಯಾದ
- (ಆ) ಹಾಸಿಗೆ ಸಂಬಂಧಿಸಿದ
- (ಇ) ಬೇರೊಂದು ರೀತಿಯ
- (ಈ) ಹಲುಬುವ

೪. ಸಂಕಲಿತ
- (ಅ) ಕೂಡಿಸಿದ
- (ಆ) ಬಾಗಿದ
- (ಇ) ಎರಕಹೊಯ್ದ
- (ಈ) ಮಾಗಿದ

೫. ಪ್ರಸಕ್ತ
- (ಅ) ಆದರಲ್ಲೇ ತೊಡಗಿದ
- (ಆ) ಚೆನ್ನಾದ
- (ಇ) ನಿದ್ರಿಸಿದ
- (ಈ) ಅಧೀನ

೬. ಸನ್ನಿಭ
- (ಅ) ಹೊಳೆಯುವ
- (ಆ) ಹೋಲುವ
- (ಇ) ಪ್ರತ್ಯಕ್ಷ
- (ಈ) ಹತ್ತಿರ

೭. ಸಮಷ್ಟಿ
- (ಅ) ತೃಪ್ತಿ
- (ಆ) ಗೋರಿ
- (ಇ) ಪೇಚಾಟ
- (ಈ) ಸಮೂಹ

೮. ಸಂಪಾತ
- (ಅ) ಅಭ್ಯಾಸ
- (ಆ) ಜ್ಞಾನ
- (ಇ) ಕೂಟ
- (ಈ) ಹುಟ್ಟು

೯. ಆಘ್ನೇಯ
- (ಅ) ಶರಣುಬಂದ
- (ಆ) ಪೂರ್ವ ದಕ್ಷಿಣಗಳ ಮಧ್ಯಮ ಮೂಲೆ
- (ಇ) ಮೂಸಬೇಕಾದ
- (ಈ) ಹಿರಿಯರು ಹೇಳಿದ

೧೦. ಘೃಣಿತ
- (ಅ) ಮೂಸಿದ
- (ಆ) ಬೇಡಿದ
- (ಇ) ಸಾಲಗಾರ
- (ಈ) ತಿರಸ್ಕಾರ ಪಾತ್ರ

೧೧. ಕೈಶಿಕ
- (ಅ) ಕೂದಲೆಳೆಯಷ್ಟು ಸೂಕ್ಷ್ಮ
- (ಆ) ನಗದಿ ಹಣ
- (ಇ) ಒಬ್ಬ ಋಷಿ
- (ಈ) ಹುಲ್ಲಿಂದ ಮಾಡಿದ

೧೨. ಆಶು
- (ಅ) ಆಸೆಬುರುಕ
- (ಆ) ಬಲುಬೇಗ
- (ಇ) ಸತ್ಯ
- (ಈ) ಸಮಾಧಾನ

# ಶಬ್ದಭಾಂಡಾರದ ಸರಿಯಾದ ಉತ್ತರಗಳು

೧. ವಿಹಂಗಮ

(ಅ) ಹಕ್ಕಿ. ವಿಹಂಗಮ ನೋಟ ಎಂದರೆ ಹಕ್ಕಿಯಂತೆ ಎತ್ತರ ದೂರದಿಂದ ನೋಡಿ ಇಡೀ ವಿಷಯವನ್ನು ತಿಳಿದುಕೊಳ್ಳುವುದು. (ಸಂ. ವಿಹಾಯಸ್ = ಆಕಾಶ, ಗಮ = ಹೋಗುವಂಥದು.)

೨. ವಿಸ್ಫಾರಿತ

(ಈ) ಉಬ್ಬಿದ, ದೊಡ್ಡದಾದ: ನಡುಗಿದ, ಕಂಪಿಸಿದ. ಉದಾ:- ಅವನ ಕಣ್ಣುಗಳು ವಿಸ್ಮಯದಿಂದ ವಿಸ್ಫಾರಿತವಾದುವು.

೩. ವೈಕಲ್ಪಿಕ

(ಇ) ಬೇರೊಂದು ರೀತಿಯ; ಸಂದಿಗ್ಧ ಅನಿಶ್ಚಿತ: ಐಚ್ಛಿಕ, ಉದಾ:- ಇದಕ್ಕೆ ವೈಕಲ್ಪಿಕವಾಗಿ ಇನ್ನೊಂದು ಅರ್ಥವನ್ನೂ ಹೇಳುತ್ತಾರೆ, (ಸಂ. ವಿಕಲ್ಪ = ಬೇರೊಂದು ರೀತಿ)

೪. ಸಂಕಲಿತ

(ಅ) ಕೂಡಿಸಿದ, ಕಲೆ ಹಾಕಿದ, ಸಂಗ್ರಹಿಸಿದ. ಉದಾ:- ಇದು ಅನೇಕ ಪುಸ್ತಕಗಳಿಂದ ಸಂಕಲಿತವಾದದ್ದು. (ಸಂ.)

೫. ಪ್ರಸಕ್ತ

(ಅ) ಅದರಲ್ಲೇ ತೊಡಗಿದ, ಅಂಟಿಕೊಂಡ, ಮಗ್ನನಾದ. ಉದಾ:- ವಿದ್ಯಾರ್ಥಿದೆಶೆಯಲ್ಲೂ ಅವನು ರಾಜಕಾರಣದಲ್ಲಿ ಪ್ರಸಕ್ತನಾಗಿದ್ದ. (ಸಂ. ಪ್ರ = ವಿಶೇಷವಾಗಿ, ಸಕ್ತ = ತಗಲಿಕೊಂಡ.

೬. ಸನ್ನಿಭ

(ಅ) ಹೋಲುವ, ಹಾಗೆಯೆ ಕಾಣುವ. ಉದಾ:- ಅವನದು ಸೂರ್ಯಸನ್ನಿಭವಾದ ತೇಜಸ್ಸು. (ಸಂ.)

೭. ಸಮಷ್ಟಿ

(ಈ) ಸಮೂಹ, ಒಂದೇ ಬಗೆಯಾದ ವಸ್ತುಗಳಿಂದಾದ ರಾಶಿ. ಉದಾ:- ಸಮಷ್ಟಿಯ ಹಿತದಲ್ಲಿಯೆ ವ್ಯಕ್ತಿಯ ಹಿತ ಇದೆ. (ಸಂ.)

೮. ಸಂಪಾತ

(ಇ) ಕೂಟ, ಹಲವೆಡೆಗಳಿಂದ ಬಂದವುಗಳು ಒಂದೇ ಸ್ಥಾನದಲ್ಲಿ ಸೇರುವಿಕೆ; ಢಿಕ್ಕಿ. ಉದಾ:- ಮೂರು ರೇಖೆಗಳ ಸಂಪಾತ ಬಿಂದು ಇದು; ವಾಹನಗಳ ಸಂಪಾತದಲ್ಲಿ ಅವನ ಕಾರು ಸಿಕ್ಕಿಬಿತ್ತು.

೯. ಆಘ್ರೇಯ

(ಇ) ಮೂಸಬೇಕಾದ, ಮೂಸಲು ಸುಖಕರವಾದ, ಆದ್ದರಿಂದ ಪರಿಮಳಯುಕ್ತ. ಉದಾ:- ದೇವತೆಗಳಿಗೂ ಆಘ್ರೇಯವಾದ ಸುವಾಸನೆಯದು (ಸಂ.)

೧೦. ಘೃಣಿತ

(ಅ) ತಿರಸ್ಕಾರ ಪಾತ್ರ, ತುಚ್ಛ; ಕರುಣಾಜನಕ, ಉದಾ:- ಅವನ ಜೀವನವೇ ಅವನಿಗೆ ಘೃಣಿತವಾಗಿತ್ತು. (ಸಂ.)

೧೧. ಕೈಶಿಕ

(ಅ) ಕೂದಲೆಳೆಯಷ್ಟು ಸೂಕ್ಷ್ಮವಾದ. (ಸಂ. ಕೇಶ = ಕೂದಲು)

೧೨. ಆಶು

(ಅ) ಬಲು ಬೇಗ, ಕೂಡಲೆ. ಉದಾ:- ಆಶುಕವಿತೆ, ಆಶುಚಿತ್ರ ಅಂದರೆ ತತ್‌ಕ್ಷಣ, ಮೊದಲು ಸಿದ್ಧತೆಯಿಲ್ಲದೆ ಬರೆದ ಕವಿತೆ, ಚಿತ್ರ. (ಸಂ.)

**ನಿಮ್ಮ ಶಬ್ದಶಕ್ತಿಯ ತರಗತಿ**

ನೀವು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

೭–೮ ಸರಿಯಿದ್ದರೆ... ಸಾಧಾರಣ

೯–೧೦ ಸರಿಯಿದ್ದರೆ... ಉತ್ತಮ

೧೧–೧೨ ಸರಿಯಿದ್ದರೆ... ಅತ್ಯುತ್ತಮ

# ಕರಿಯರ ಹೋರಾಟದ ಕಥೆ

**ಒಡಹುಟ್ಟಿದ ಒಬಡೇಲ್ ಸೋದರರೇ ಇದರಲ್ಲಿ ಎದುರಾಳಿಗಳಾದರು!**

● ಅರ್ನೆಸ್ಟ್ ಡನ್ಬರ್

ಪ್ರತಿದಿನದ ರೂಢಿಯಂತೆ ಅಂದೂ 'ನ್ಯೂಯಾರ್ಕ್ ಟೈಮ್ಸ್' ದೈನಿಕದ ಪುಟಗಳನ್ನು ತಿರುವಿ ಹಾಕುತ್ತಿದ್ದೆ. 'ವಿಭಜನವಾದಿಗಳ ಆಕ್ರಮಣ-ಪೊಲೀಸನ ಸಾವು' ಶೀರ್ಷಿಕೆ ನನ್ನ ಗಮನವನ್ನು ಹಿಡಿದು ನಿಲ್ಲಿಸಿತು. 'ನವ ಆಫ್ರಿಕಾ ಗಣರಾಜ್ಯ'ದ ಮುಖ್ಯ ಕಚೇರಿ ಇದ್ದ ಮಿಸ್ಸಿಸ್ಸಿಪ್ಪಿಯ ಜಾಕ್ಸನ್ ಎಂಬ ಪ್ರದೇಶದಲ್ಲಿ ಆಕ್ರಮಣ ನಡೆಯಿತೆಂದೂ ಕರಿಯ ಪ್ರತ್ಯೇಕತಾವಾದಿ ಸಂಘಟನೆಯೊಂದು ಇದಕ್ಕೆ ಕಾರಣವೆಂದೂ ಕೊಲೆಸಂಚಿನ ಆಪಾದಿತರಲ್ಲಿ ನಲವತ್ತೊಂದು ವರ್ಷದ ಇಮಾರಿ ಅಬುಬಾಕರಿ ಒಬಡೇಲ್ ಒಬ್ಬರೆಂದೂ ವರದಿ ಪ್ರಕಟವಾಗಿತ್ತು.

ಇಮಾರಿ ಒಬಡೇಲ್ ಹೆಸರು ಓದುತ್ತಿದ್ದಂತೆ ಯಾವಾಗಲೋ ಒಮ್ಮೆ ಮಾತನಾಡುವ, ಶಾಂತ ಮುಖಮುದ್ರೆಯ, ಆತ್ಮವಿಶ್ವಾಸ ತುಂಬಿ ತುಳುಕುವ, ಏನಾದರೊಂದು ಚಟುವಟಿಕೆಯಲ್ಲಿ ತೊಡಗಿಕೊಂಡಿರುವ, ಪಾಂಡಿತ್ಯವಿದ್ದರೂ ಅಪರಿಚಿತರೆದುರಿಗೆ ನಾಚುವ, ಸಾಧಾರಣ ಮೈಕಟ್ಟಿನ ಯುವಕ ಕಣ್ಣೆದುರು ತೇಲಿಬಂದ. ೧೯೪೦ರ ದಶಕದಲ್ಲಿ ಆತ ನಮ್ಮ ನೆರೆಯಲ್ಲಿಯೇ ಇದ್ದ. ದಕ್ಷಿಣ ಫಿಲಡೆಲ್ಫಿಯಾದಲ್ಲಿ ನಾವೆಲ್ಲ ಒಟ್ಟಾಗಿಯೇ ಬೆಳೆದಿದ್ದೆವು. ಅವನ ಸೋದರ ಸೋದರಿಯರ ಪರಿಚಯವೂ ನನಗಿತ್ತು. ಅವರೆಲ್ಲ ಸಾಧನಶೀಲರು. ಕರಿಯರು ಹೈಸ್ಕೂಲು ದಾಟುವುದೇ ಪ್ರಯಾಸವಾಗಿದ್ದ ಆ ಕಾಲದಲ್ಲಿ ಕಾಲೇಜು ಮೆಟ್ಟಿಲು ಹತ್ತಿದ ಧೀರರು. ಇಮಾರಿಯ ಆಗಿನ ಹೆಸರು ರಿಚರ್ಡ್ ಹೆನ್ರಿ ಎಂದಿತ್ತು.

ಸಂಕೋಚದ ಮುದ್ದೆಯಾಗಿದ್ದ ಹೆನ್ರಿ ಅದು ಹೇಗೆ ಒಬ್ಬ ಭಯೋತ್ಪಾದಕನಾಗಿ, ಕೊಲೆಗಾರನಾಗಿ ಅದಕ್ಕಿಂತ ಹೆಚ್ಚಾಗಿ ಇಮಾರಿ ಅಬುಬಾಕರಿ ಒಬಡೇಲ್ ಆಗಿ ಪರಿವರ್ತನೆಗೊಂಡ? ಹಾರ್ವರ್ಡ್ ವಿಶ್ವವಿದ್ಯಾಲಯದ ಮೊದಲ ಕರಿಯ ಡೀನ್ ಆಗಿದ್ದಾತನಿಗೆ ಎಂಥ ಸಂದರ್ಭಗಳು ಒದಗಿಬಂದವು? ಸ್ಫೋಟಕಸದೃಶ್ಯವಾದ ಮಿಸ್ಸಿಸ್ಸಿಪ್ಪಿಯಲ್ಲಿ ಕರಿಯರಿಗಾಗಿ ಪ್ರತ್ಯೇಕ 'ರಾಷ್ಟ್ರ'ವನ್ನು ಸ್ಥಾಪಿಸುವ ಸಾಹಸಕ್ಕೆ ಕೈ ಹಾಕಲು ಕಾರಣವಾದ ಪ್ರಚೋದನೆಗಳೇನು? ಮುಂತಾದ ಪ್ರಶ್ನೆಗಳು ನನ್ನನ್ನು ತಿಂಗಳಾನುಗಟ್ಟಲೆ ಕಾಡಿದವು. ಸ್ಪಷ್ಟ ಚಿತ್ರ ದೊರೆಯಲಿಲ್ಲ. ಮೂರು ದಶಕಗಳಲ್ಲಿ ಮೂರು ದೇಶಗಳನ್ನು ಅಲೆಯುವುದು ನನಗೆ ಅನಿವಾರ್ಯವಾಯಿತು. ಪತ್ರಿಕೆಗಳಲ್ಲಿ ರಿಚರ್ಡ್ ಹೆನ್ರಿಯ ಬಗ್ಗೆ ಆಗಾಗ ಪ್ರಕಟಗೊಳ್ಳುವ ಲೇಖನಗಳನ್ನು ಓದುತ್ತಿದ್ದೆ. ಆಂಗ್ಲೋ ಸ್ಯಾಕ್ಸನ್ ಶೈಲಿಯ 'ದಾಸ್ಯ'ದ ಹೆಸರುಗಳನ್ನು ಬಿಟ್ಟು ಆಫ್ರಿಕನ್ ಸಂಸ್ಕೃತಿಯ ಹೆಸರನ್ನು ಕರೆದುಕೊಳ್ಳುವ ಕರಿಯರ ಸಂಪ್ರದಾಯದಂತೆ ಹೆನ್ರಿಯೂ ಇಮಾರಿ ಅಬುಬಾಕರಿ ಒಬಡೇಲ್ ಎಂದು ನಾಮಾಂತರಗೊಂಡಿದ್ದ. ಅವನಣ್ಣ ಮಿಲ್ಟನ್ ಹೆನ್ರಿ ಡೆಟ್ರಾಯ್ಟ್‌ನಲ್ಲಿ 'ರಿಪಬ್ಲಿಕ್ ಆಫ್ ನ್ಯೂ ಆಫ್ರಿಕಾ (ಆರ್.ಎನ್.ಎ.)' ಸಂಘಟನೆಯನ್ನು ಹುಟ್ಟು ಹಾಕಿದ್ದ. ೧೯೬೮ರಲ್ಲಿ ನಡೆದ ಕರಿಯರ ರಾಷ್ಟ್ರೀಯ ಸಮ್ಮೇಳನದಲ್ಲಿ ಆರ್.ಎನ್.ಎ. ಅಸ್ತಿತ್ವಕ್ಕೆ

ಬಂದಿತ್ತು. ಬಿಳಿಯರಿಗೆ ಆ ಸಂಘಟನೆಯ ಬಗ್ಗೆ ಆದರವಿರಲಿಲ್ಲ. "ಡೆಟ್ರಾಯ್ಟ್‌ನಲ್ಲಿ ಕೇಂದ್ರ ಕಚೇರಿಯನ್ನು ಹೊಂದಿರುವ ಕರಿಯ ಉಗ್ರಗಾಮಿ ಸಂಸ್ಥೆ 'ಆರ್.ಎನ್.ಎ.' ತನ್ನ ಸಂಸ್ಥಾಪಕ ಸೋದರರಿಬ್ಬರ ನಡುವಿನ ಭಿನ್ನಾಭಿಪ್ರಾಯದಿಂದಾಗಿ ಎರಡು ಹೋಳಾಗಿದೆ. ಇದೊಂದು ಚಿಕ್ಕ ಸಂಘಟನೆಯಾದರೂ ಇದು ಇಷ್ಟು ಪ್ರಚಾರ ಗಿಟ್ಟಿಸಿಕೊಳ್ಳಲು ಕಾರಣ: ಕರಿಯ ಗಣರಾಜ್ಯ ಸ್ಥಾಪನೆಗಾಗಿ ದಕ್ಷಿಣ ರಾಜ್ಯಗಳಾದ ಅಲಾಬಾಮಾ, ಜಾರ್ಜಿಯಾ, ಲೂಶಿಯಾನಾ, ಮಿಸ್ಸಿಸ್ಸಿಪ್ಪಿ ಮತ್ತು ದಕ್ಷಿಣ ಕೆರೋಲಿನಾಗಳನ್ನು ಬಯಸಿರುವುದು; ಸಂಘಟನೆಯ ಸದಸ್ಯರು ಪೊಲೀಸನೊಬ್ಬನನ್ನು ಕೊಂದು ಇನ್ನೊಬ್ಬ ಪೊಲೀಸನನ್ನು ಗಾಯಗೊಳಿಸಿರುವುದು: ಆರ್.ಎನ್.ಎ.ದ ಮಾಜಿ ಅಧ್ಯಕ್ಷ ರಾಬರ್ಟ್ ವಿಲಿಯಮ್ಸ್ ಅಪಹರಣ ಪ್ರಕರಣವೊಂದರಲ್ಲಿ ಆಪಾದಿತನಾಗಿರುವುದು 'ಡೆಟ್ರಾಯ್ಟ್ ಪ್ರದೇಶದ ಸೋದರರಾದ ಮಿಲ್ಟನ್ ಹೆನ್ರಿ ಅಲಿಯಾಸ್ ಬ್ರದರ್ ಗೈಡಿ ಹಾಗೂ ರಿಚರ್ಡ್ ಹೆನ್ರಿ ಅಲಿಯಾಸ್ ಇಮಾರಿ ಅವರು ಆರ್.ಎನ್.ಎ.ದ ಸಂಸ್ಥಾಪಕರು. ಕಳೆದ ವಾರ ರಿಚರ್ಡ್ ನೇತೃತ್ವದಲ್ಲಿ ನಡೆಯಬೇಕಾಗಿದ್ದ ವಿಭಜಿತ ಸಂಘಟನೆಯ ಒಂದು ಶಾಖೆಯ ಸಮ್ಮೇಳನ ಅವನ ಸೋದರ ಮಿಲ್ಟನ್‌ನಿಂದಲೇ ಬಹಿಷ್ಕರಿಸಲ್ಪಟ್ಟಿತ್ತು. 'ಮೂರ್ಖ ನಿರಂಕುಶಮತಿಯ ಆಶ್ರಯ ಬೇಕಿದ್ದವರು ಇಮಾರಿಯೊಂದಿಗಿರಲು ನಮ್ಮ ಅಭ್ಯಂತರವಿಲ್ಲ' ಎಂದು ಮಿಲ್ಟನ್ ಹೇಳಿದ್ದಾರೆ," ಎಂದು ವರದಿ ತಿಳಿಸಿತ್ತು.

ಕರಿಯ ಗಣರಾಜ್ಯದ ಸ್ಥಾಪನೆಯ ನಿಟ್ಟಿನಲ್ಲಿ ರಿಚರ್ಡ್ ಹೆನ್ರಿಯ ಆಲೋಚನೆಗಳು ಇನ್ನಿತರ ಕರಿಯರವಾಗಿರಲಿಕ್ಕಿಲ್ಲ. ಆದರೆ ಆತ ಬಿಳಿಯ ಜನಾಂಗದವರ ವಿರುದ್ಧ ಬೆಳೆಯುತ್ತಿರುವ ಅಸಹನೆಯ ಪ್ರತೀಕವಾಗಿದ್ದ.

ಪೆನ್ಸಿಲ್ವೇನಿಯದ ಲಿಂಕನ್ ವಿಶ್ವವಿದ್ಯಾಲಯದಲ್ಲಿ ಓದುತ್ತಿದ್ದ ಮಿಲ್ಟನ್, ಎರಡನೇ ವಿಶ್ವ ಸಮರದ ಸಂದರ್ಭದಲ್ಲಿ ಓದಿಗೆ ಶರಣು ಹೊಡೆದು ಅಮೆರಿಕದ ವಾಯುಪಡೆಯಲ್ಲಿ ಪೈಲಟ್ ಆಗಿ ನೇಮಕಗೊಂಡಿದ್ದ. ಫಿಲಡೆಲ್ಫಿಯದ 'ಟ್ರಿಬ್ಯೂನ್' ಮತ್ತು 'ಇಂಡಿಪೆಂಡೆಂಟ್' ಪತ್ರಿಕೆಗಳು ಸಹೋದ್ಯೋಗಿಗಳೊಡನೆ ನಿಂತಿದ್ದ ಮಿಲ್ಟನ್ನನ ಚಿತ್ರವನ್ನು ಪ್ರಕಟಿಸಿದಾಗಲಂತೂ ನೆರೆಹೊರೆಯವರ ಅಭಿಮಾನ ಉಕ್ಕಿ ಹರಿದಿತ್ತು. ಅವನು ಜನಾಂಗೀಯ ತಾರತಮ್ಯದ ವಿರುದ್ಧ ಹೋರಾಟ ಮಾಡಲಿದ್ದಾನೆಂದು ಚಿಕ್ಕವರಾಗಿದ್ದ ನಮಗಾಗ ತಿಳಿದಿರಲಿಲ್ಲ.

ಡೆಟ್ರಾಯ್ಟ್‌ಗೆ ಹೋಗಿದ್ದ ನಾನು ಮಿಲ್ಟನ್ ಪತ್ನಿ ಮರಿಲಿನ್‌ರೊಂದಿಗೆ ದೂರವಾಣಿಯಲ್ಲಿ ಮಾತನಾಡಿ ಮಿಲ್ಟನ್ನನನ್ನು ಕಾಣಲು ಸಮಯವನ್ನು ನಿಗದಿ ಮಾಡಿಕೊಂಡೆ. ಈ ವೇಳೆಗಾಗಲೇ ಆತ ಸೇನೆಯನ್ನು ತೊರೆದು ವಕೀಲ ವೃತ್ತಿಯಲ್ಲಿ ಪ್ರವರ್ಧಮಾನಕ್ಕೆ ಬರುತ್ತಿದ್ದ. ನಾನು ಅವನಲ್ಲಿಗೆ ಹೋದಾಗ ಮನೆ ಕರಿಯ ನ್ಯಾಯವಾದಿಗಳು, ಅಮೀನರು, ನ್ಯಾಯಾಲಯದ ಸಿಬ್ಬಂದಿಯಿಂದಾಗಿ ಗಿಜಿಗುಡುತ್ತಿತ್ತು. ಬಂದವರಲ್ಲಿ ಕೆಲ ಬಿಳಿಯರೂ ಇದ್ದರು. ಬಿಳಿಯರೇ ಅಧಿಕವಾಗಿದ್ದ ಕಾನೂನು ಕ್ಷೇತ್ರದಲ್ಲಿ ಮಿಲ್ಟನ್ ಹೆನ್ರಿ ಪ್ರಾಮುಖ್ಯ ಗಳಿಸಿದ್ದ.

ಕುಶಲೋಪರಿಯ ಬಳಿಕ ಆತ ತನ್ನ ಸೇನಾ ಜೀವನದ ಬಗ್ಗೆ ಹೇಳತೊಡಗಿದ. "ಕರಿಯರು ರಾಜದ್ರೋಹಿಗಳಲ್ಲ. ನಮ್ಮ ಸೇವೆಯೂ ಈ ದೇಶಕ್ಕಾಗಿ ಮುಡಿಪಾಗಿರಬೇಕು. ನಾವು ಈ ದೇಶವನ್ನು ಪ್ರೀತಿಸಬೇಕು ಎಂದು ನಮ್ಮ ಪಾಲಕರು ಹೇಳಿದ್ದರು. ಆದಕ್ಕಾಗಿಯೇ ಸೈನ್ಯದಲ್ಲಿ ಆಯ್ಕೆ ಬಯಸಿ ಹೆಸರು ನೋಂದಾಯಿಸಿದ್ದೆ. ಆದರೆ ಸೇನೆಯಲ್ಲಿ ಎಲ್ಲವೂ ಸರಿಯಾಗಿಲ್ಲವೆಂಬುದು ಆಮೇಲೆ ತಿಳಿಯಿತು. ನಾನೊಬ್ಬ ಪೈಲಟ್ ಆಗಿದ್ದರೂ ಪ್ರಯಾಣಿಕರ ಬಸ್ಸಿನಲ್ಲಿ ಅದು ಖಾಲಿಯಾಗಿದ್ದರೂ ಹಿಂಬದಿಯಲ್ಲಿ ಕುಳಿತುಕೊಳ್ಳಬೇಕಾಗಿತ್ತು. ಈ ಸಂಬಂಧವಾಗಿ ಒಮ್ಮೆ ಗಲಾಟೆಯೂ ಆಗಿ ಬಸ್ ಚಾಲಕನನ್ನು ಥಳಿಸಿಬಿಟ್ಟೆ. ನಗರದಲ್ಲಿ ಗಲಭೆಗೆ ಕಾರಣನಾದೆನೆಂಬ ಆರೋಪದ ಮೇಲೆ ನನ್ನನ್ನು ಪೊಲೀಸರು ಬಂಧಿಸಿದರು. ತನ್ನ ಕರಿಯ ಸೈನಿಕರ ರಕ್ಷಣೆಗೆ ಸೇನೆ ಮುಂದಾಗುವುದಿಲ್ಲವೆಂಬುದನ್ನು

ಗ್ರಹಿಸಿದೆ. ಬಿಳಿಯ ಸೈನಿಕರಿಗಾಗಿ ದೊರೆಯುತ್ತಿದ್ದ ಬಹುಪಾಲು ಸವಲತ್ತುಗಳು ನಿರಾಕರಿಸಲ್ಪಡುತ್ತಿದ್ದವು. 'ಡ್ಯೂಟಿಗೆ ವರದಿ ಮಾಡಿಕೊಳ್ಳಲು ವಿಫಲ'ವಾದ ಕಾರಣಕ್ಕಾಗಿ ನನ್ನನ್ನು ಸೇನಾಧಿಕಾರಿಗಳು ಎಡತಾಕಿಸಿದರು. ನಾನು ತಡವಾಗಿ ಬಂದದ್ದರ ಬಗ್ಗೆಯೂ ಲೆಕ್ಕವಿಡಲಾಗಿತ್ತು. ಈ ಮುನ್ನ ಯಾರೊಂದಿಗೂ ಹೀಗೆ ವರ್ತಿಸಿದ ಉದಾಹರಣೆಗಳಿರಲಿಲ್ಲ. ಸರಿ, ನೌಕರಿ ಕೈತಪ್ಪಿತು. ಕಾನೂನು ಅಭ್ಯಾಸವನ್ನು ಪೂರ್ಣಗೊಳಿಸಬೇಕೆಂದು ಲಿಂಕನ್ ವಿಶ್ವವಿದ್ಯಾಲಯಕ್ಕೆ ಮರಳಿದೆ. ಯೇಲ್‌ನಲ್ಲಿ ಪ್ರವೇಶ ದೊರೆಯಿತು."

ತನ್ನ ಪತ್ನಿ ಮರಿಲಿನ್ ಹೆನ್ರಿ ಊಟಕ್ಕೆ ತಯಾರಾಗಿದ್ದಾಳೋ ಇಲ್ಲವೋ ಎಂದು ನೋಡಲು ಮಿಲ್ಬನ್ ಮಹಡಿಯ ಮೇಲಕ್ಕೆ ಹೋದ. ನಾನು ಆರಾಮ ಕುರ್ಚಿಯಲ್ಲಿ ಒರಗಿದೆ. ಬಾಲ್ಯದ ನೆನಪುಗಳು ನುಗ್ಗಿಬಂದವು.

೧೯೪೮ರಲ್ಲಿ ಮಿಲ್ಬನ್ ಯೇಲ್‌ನಿಂದ ವಾಪಸಾಗಿ ದಕ್ಷಿಣ ಫಿಲಡೆಲ್ಫಿಯಾಕ್ಕೆ ಬಂದು ನೆಲೆಸಿದ್ದ. 'ಪ್ರಜಾಪ್ರಭುತ್ವವನ್ನು ವಿಶ್ವದಲ್ಲಿ ನೆಲೆಗೊಳಿಸಲು ನಡೆದ ಸಮರ' ನಿಂತು ಮೂರು ವರ್ಷಗಳಾಗಿದ್ದವು. ಆದರೂ ಅಮೇರಿಕದ ಸೇನೆ ವರ್ಣೀಯ ನೆಲೆಯ ಮೇಲೆ ವಿಭಜಿತವಾಗಿತ್ತು. ಆಗಲೇ ಕರಿಯರ ನಾಗರಿಕ ಹಕ್ಕುಗಳ ಪ್ರತಿಪಾದಕರಾದ ಫಿಲಿಪ್ ರ್‍ಯಾಂಡೊಲ್ಫ್ ಮತ್ತು ಬೇಯರ್ಡ್ ರಸ್ಟಿನ್ ಅವರು 'ಹಿಂಸಾತೀತ ಅಸಹಕಾರ ಮಂಡಲಿ'ಯನ್ನು ಹುಟ್ಟು ಹಾಕಿ ಫಿಲಡೆಲ್ಫಿಯಾ ಶಾಖೆಯ ಸಂಘಟನೆಯ ಹೊಣೆಯನ್ನು ಮಿಲ್ಬನ್ನನಿಗೊಪ್ಪಿಸಿದರು. ವಿಭಜಿತ ಸೇನೆಯಲ್ಲಿ ಸೇವೆ ಸಲ್ಲಿಸಲು ತಾವು ಸಿದ್ಧರಿಲ್ಲ ಎಂಬ ವಿಜ್ಞಾಪನಾ ಪತ್ರಗಳನ್ನು ಸರಕಾರಕ್ಕೆ ಬರೆಯುವಂತೆ ಮಿಲ್ಬನ್ ಕರಿಯರನ್ನು ಪ್ರೇರೇಪಿಸಿದ. ಅದಕ್ಕಾಗಿ ಎಲ್ಲ ನೆರವನ್ನು ನೀಡಿದ. ಆಗ ಆತನಿಗೆ ವಯಸ್ಸು ಹದಿನೆಂಟೇ ವರ್ಷ. ಇರುಸುಮುರುಸುಗೊಂಡ ಸರಕಾರ ಅವನ ಮೇಲೆ ನಿಗಾ ಇಡಲು ಎಫ್.ಬಿ.ಐ. (ಬೇಹುಗಾರಿಕೆ ಪಡೆ)ಯನ್ನು ನಿಯೋಜಿಸಿತು. ಅದು



"ಬನ್ನಿ! ಬನ್ನಿ!! ನಿಮಗಾಗಿ ಕಾಯ್ತಿದ್ದೆ. ನಿಮ್ಮ ಹೆಂಡ್ತಿ 'ಹೊಸ ರುಚಿ' ಮಾಡಿರೋ ವಿಷಯಾನ ನನ್ಹೆಂಡ್ತಿ ಮುಂದೆ ಹೇಳ್ತಿರೋವಾಗ್ಲೇ ನೀವು ನನ್ಹತ್ರ ಬಂದೇ ಬರ್ತೀರೀಂತ ಖಾತ್ರಿಯಾಯ್ತು."

ಮಿಲ್ಬನ್ ಮತ್ತು ಅವನ ಕಿರಿಯ ಸೋದರನ ಬಗ್ಗೆ ನೆರೆಹೊರೆಯಲ್ಲಿ ಮಾಹಿತಿ ಸಂಗ್ರಹಿಸತೊಡಗಿತ್ತು. ನಮ್ಮ ದೃಷ್ಟಿಯಲ್ಲಿ ಅವರಿಬ್ಬರು ಅದಾಗಲೇ ಹೀರೋಗಳಾಗಿಬಿಟ್ಟಿದ್ದರು. ನೂರಾರು ಕರಿಯರು ವಿಜ್ಞಾಪನಾ ಪತ್ರವನ್ನು ಸಲ್ಲಿಸಿದ ಕಾರಣಕ್ಕಾಗಿ ಅಧ್ಯಕ್ಷ ಟ್ರೂಮನ್ ಅವರು ಆದೇಶವೊಂದನ್ನು ಹೊರಡಿಸಿ ಸಶಸ್ತ್ರ ಪಡೆಗಳಲ್ಲಿ ಜನಾಂಗೀಯ ತಾರತಮ್ಯವನ್ನು ನಿಷೇಧಿಸಿದರು.

ಪೆನ್ಸಿಲ್ವೇನಿಯಾ ಬಾರ್ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದು ಆಗ ಕರಿಯರಿಗೆ ಸಾಧ್ಯವಿರಲಿಲ್ಲ. ಅರ್ಜಿಯಲ್ಲಿ ಅಭ್ಯರ್ಥಿಯು ವಿವರಗಳೊಂದಿಗೆ ಫೋಟೋವನ್ನೂ ಲಗತ್ತಿಸಬೇಕಾಗಿದ್ದರಿಂದ ಕರಿಯ ಅಭ್ಯರ್ಥಿಗಳನ್ನು ಸುಲಭವಾಗಿ ಗುರುತಿಸಬಹುದಾಗಿತ್ತು. ಪ್ರತಿಭಾವಂತ ಕರಿಯ ಅಭ್ಯರ್ಥಿ ಇಲ್ಲಿ ನಪಾಸಾಗುತ್ತಿದ್ದ. ಮಿಲ್ಬನ್ ಕೂಡಾ ಇದಕ್ಕೆ ಹೊರತಲ್ಲ. ಆತನೂ ಪೆನ್ಸಿಲೇನ್ವಿಯಾದಲ್ಲಿ ಫೇಲಾಗಿ ಮಿಚಿಗನ್‌ನಲ್ಲಿ ಬಾರ್ ಪರೀಕ್ಷೆಯನ್ನು ಪಾಸು ಮಾಡಿಕೊಂಡ.

ಕರಿಯರ ಸಮುದಾಯದ ಪರವಾಗಿ ಆತನ

ಹೋರಾಟ ನಡೆದೇ ಇತ್ತು. ಪೊಂಟಿಯಾಕ್ ನಗರ ಆಯೋಗದ ಮಂಡಳಿಗೂ ಆಯ್ಕೆಯಾಗಿದ್ದ ಮಿಲ್ಟನ್‌ಗೆ ಅಲ್ಲಿ ನಿರಾಶೆಯಾಗಿತ್ತು. "ನಾನು ಆಯೋಗದಲ್ಲಿ ಸ್ವಲ್ಪ ಮಟ್ಟಿಗಿನ ಭ್ರಷ್ಟಾಚಾರವನ್ನು ನಿರೀಕ್ಷಿಸಿದ್ದೆ. ಅದರ ನಿವಾರಣೋಪಾಯಗಳನ್ನು ಯೋಚಿಸಿದ್ದೆ. ಆದರೆ ಏಳು ಸದಸ್ಯರ ಪೈಕಿ ನಾನೊಬ್ಬನೇ ಕರಿಯ. ಅವರ ಮತಗಳನ್ನು ಪಡೆಯಬೇಕಾದರೆ ನಾನು ಭ್ರಷ್ಟ ವ್ಯವಸ್ಥೆಯೊಂದಿಗೆ ರಾಜಿ ಮಾಡಿಕೊಳ್ಳಬೇಕಾಗಿತ್ತು. ಸಮಸ್ಯೆಗಳು ನಾನು ಊಹಿಸಿದ್ದಕ್ಕಿಂತ ದೊಡ್ಡವಾಗಿದ್ದವು. ರಾಜೀನಾಮೆ ಅನಿವಾರ್ಯವಾಯಿತು," ಎಂದು ಮಿಲ್ಟನ್ ನೊಂದುಕೊಂಡು ಹೇಳಿದ.

ಮಿಲ್ಟನ್ ಮತ್ತು ರಿಚರ್ಡ್ ಸೋದರರಾಗಿದ್ದರೂ ಕೆಲಕಾಲ ಜೊತೆಜೊತೆಯಾಗಿ ಸಂಘಟನಾ ಚಟುವಟಿಕೆಗಳಲ್ಲಿ ತೊಡಗಿದ್ದರೂ ಅವರಲ್ಲಿ ಕೆಲ ವೈರುಧ್ಯ ಸ್ವಭಾವಗಳಿದ್ದವು. ರಿಚರ್ಡ್‌ಗೆ ವಾಕ್ಪಟುತ್ವವಿರಲಿಲ್ಲ, ಧ್ವನಿಯೂ ಕ್ಷೀಣ. ಆದರೆ ಮಾತುಗಾರಿಕೆ ತರ್ಕಬದ್ಧವಾಗಿರುತ್ತಿತ್ತು. ಇನ್ನೊಬ್ಬರ ಮೇಲೆ ತನ್ನ ಅಭಿಪ್ರಾಯವನ್ನು ನಯವಾಗಿ ಹೇರುವ ಕಲೆ ಆತನಿಗೆ ಸಿದ್ಧಿಸಿತ್ತು. ಆತ ಸಂಘಟನಾ ಚತುರನಾಗಿದ್ದ. ಮಿಲ್ಟನ್ ಅತ್ಯದ್ಭುತ ವಾಗ್ಮಿ. ಎಂಥವರನ್ನೂ ಮಾತಿನಲ್ಲಿ ಸೆಳೆದುಬಿಡುತ್ತಿದ್ದ ಆತನಿಗೆ ಜನರನ್ನು ಸಂಘಟಿಸುವುದು ಗೊತ್ತಿರಲಿಲ್ಲ. ರಿಚರ್ಡ್ ಸಂಕೋಚ ಸ್ವಭಾವದವನಾದರೆ ಮಿಲ್ಟನ್ ಸೊಗಸುಗಾರ; ನುರಿತ ಪೈಲಟ್; ಯಶಸ್ವೀ ಕ್ರಿಮಿನಲ್ ಲಾಯರ್. ರಿಚರ್ಡ್ ರೈಲಿನಲ್ಲಿ ಪ್ರಯಾಣಿಸುತ್ತಿದ್ದ. ಮಿಲ್ಟನ್‌ಗೆ ಬ್ಯೂಕ್ ಅಥವಾ ಕ್ಯಾಡಿಲ್ಯಾಕ್ ಬೇಕೇ ಬೇಕು.

ಇಬ್ಬರ ವ್ಯಕ್ತಿತ್ವದಲ್ಲಿ ಹೀಗೆ ವಿರೋಧಾಭಾಸಗಳಿದ್ದರೂ ಮಿಲ್ಟನ್ ತನ್ನ ಸೋದರನ ಜೀವನದ ಮೇಲೆ ಗಾಢಪ್ರಭಾವವನ್ನು ಬೀರಿದ. ಮಿಲ್ಟನ್ ಮತ್ತು ರಿಚರ್ಡ್ ತುಂಬ ಅನ್ಯೋನ್ಯವಾಗಿದ್ದರು. ಒಬ್ಬನಿಗೆ ಅಹಿತವಾದದ್ದೇನಾದರೂ ಘಟಿಸಿದರೆ ಇನ್ನೊಬ್ಬ ವ್ಯಾಕುಲಗೊಳ್ಳುತ್ತಿದ್ದ.

ಒಟ್ಟಾವಾ ವಿಶ್ವವಿದ್ಯಾಲಯದಲ್ಲಿ ಪದವಿ ಪಡೆದ ನಂತರ ಮಿಲ್ಟನ್‌ನ ಕೋರಿಕೆಯ ಮೇರೆಗೆ ರಿಚರ್ಡ್ ೧೯೫೨ರಲ್ಲಿ ಡೆಟ್ರಾಯ್ಟ್‌ಗೆ ತೆರಳಿದ. ಕರಿಯರ ಮುಖವಾಣಿಯಾಗಿದ್ದ 'ಮಿಚಿಗನ್ ಕ್ರಾನಿಕಲ್' ಸಾಪ್ತಾಹಿಕಕ್ಕೆ ಕೆಲ ವರ್ಷ ರಿಚರ್ಡ್ ವರದಿಗಾರನಾಗಿಯೂ ಕೆಲಸ ಮಾಡಿದ.

ತನ್ನಣ್ಣನಂತೆ ರಿಚರ್ಡ್ ಕೂಡಾ ನಾಗರಿಕ ಹಕ್ಕುಗಳ ಸಂಘಟನೆಗಳಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದ. ಜನಾಂಗೀಯ ತಾರತಮ್ಯವನ್ನವರು ಗಂಭೀರವಾಗಿಯೇ ಪರಿಗಣಿಸಿದ್ದರು. ಗ್ರೀನ್ ವಿಲ್ಲೆ (ದಕ್ಷಿಣ ಕರೋಲಿನಾ) ವಿಮಾನ ನಿಲ್ದಾಣದ ನಿರೀಕ್ಷಣಾ ಕೊಠಡಿಯಲ್ಲಿದ್ದ ರಿಚರ್ಡ್‌ಗೆ ನಿಲ್ದಾಣದ ಅಧಿಕಾರಿಗಳು ಬಿಳಿಯರಿಗಾಗಿ ಇರುವ ಆ ಕೊಠಡಿಯನ್ನು ತೆರವು ಮಾಡುವಂತೆ ಆಗ್ರಹಿಸಿದರು. ಉರಿದೆದ್ದ ಆತ ಅಧಿಕಾರಿಗಳ ವಿರುದ್ಧ ದಾವಾ ಹಾಕಿದ. ಜಿಲ್ಲಾ ನ್ಯಾಯಾಲಯವೊಂದರಲ್ಲಿ ತೀರ್ಪು ವಿರುದ್ಧವಾಗಿ ಬಂತು. ರಿಚರ್ಡ್ ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಿದ. ಕೇಸು ಆತನ ಪರವಾಯಿತು. "ಪ್ರವಾಸಿ ಸೌಲಭ್ಯಗಳಲ್ಲಿ ಪ್ರತ್ಯೇಕತೆಗೆ ಕೊನೆ ಹಾಡಲು ಈ ಪ್ರಕರಣ ನೆರವಾಗಿದೆ" ಎಂದು ಸಂತಸಪಟ್ಟ.

ಹೆನ್ರಿ ಸೋದರರ ನೆರವು ಪಡೆಯುತ್ತಿದ್ದ ಕರಿಯರ ಸಂಘಟನೆಗಳಲ್ಲಿ ಡೆಟ್ರಾಯ್ಟ್‌ನ ಗ್ರೂಪ್ ಆನ್ ಅಡ್ವಾನ್ಸ್‌ಡ್ ಲೀಡರ್‌ಷಿಪ್ 'ಗೋಲ್' ಕೂಡಾ ಒಂದು. ಸ್ಥಳೀಯ ಪೊಲೀಸರ ಅತಿರೇಕಗಳ ವಿರುದ್ಧ ಅದು ಅನೇಕ ಮೊಕದ್ದಮೆಗಳನ್ನು ದಾಖಲಿಸಿತ್ತು. ಕರಿಯ ನೌಕರರ ಏಳಿಗೆಗಾಗಿ ಶ್ರಮಿಸುತ್ತಿತ್ತು. ಎಂಟನೇ ತರಗತಿಯ ಇತಿಹಾಸ ಪಠ್ಯದಲ್ಲಿ ಆಫ್ರಿಕನ್ನರ ಕೊಡುಗೆಗಳ ಬಗ್ಗೆ ಚಕಾರವಿಲ್ಲದ್ದನ್ನು ಪ್ರತಿಭಟಿಸಿ ರಿಚರ್ಡ್ ತನ್ನ ಮಗನನ್ನು ಶಾಲೆ ಬಿಡಿಸಿದ್ದ. 'ಗೋಲ್' ಬಹಿಷ್ಕಾರದ ಬೆದರಿಕೆ ಹಾಕಿತು. ಶಾಲಾ ಅಧಿಕಾರಿಗಳ ಪಠ್ಯಪುಸ್ತಕದಲ್ಲಿ ಸಮತೋಲನದ ಕೊರತೆಯನ್ನು ಒಪ್ಪಿಕೊಂಡು ಕರಿಯರ ಕೊಡುಗೆಗಳ ಕುರಿತು ಎರಡು ಅಧ್ಯಾಯಗಳನ್ನೂ ಸೇರ್ಪಡೆ ಮಾಡಲಾಯಿತು. ಮೂರು ವರ್ಷಗಳ ತರುವಾಯ ಒಂಭತ್ತನೇ ತರಗತಿಯಲ್ಲಿ

ಓದುತ್ತಿದ್ದ ಮಗಳನ್ನು ಶಾಲೆ ಬಿಡಿಸಿದ. ಮತ್ತದೇ ಕಾರಣ. ಡೆಟ್ರಾಯ್ಟ್‌ನ ಪ್ರೌಢ ಶಾಲೆಗಳಲ್ಲಿ ಪೂರಕ ಇತಿಹಾಸ ಪಠ್ಯ ನಿಗದಿಯಾಯಿತು. ವರ್ಣಭೇದದ ವಿರುದ್ಧ ಕರಿಯರ ಗೆಲುವಿನ ಪ್ರಕರಣಗಳು ಹೆಚ್ಚಾಗತೊಡಗಿದ್ದವು. ಮಿಲ್ಟನ್‌ಗೆ ಆಫ್ರಿಕಕ್ಕೆ ಹೋಗಿ-ಬರುವ ಅವಕಾಶಗಳು ಒದಗಿ ಬಂದವು. ಆಫ್ರಿಕದಲ್ಲಿ ಮಾಲ್ಕಮ್ ಪರಿಚಿತನಾದ. ಸ್ವಾತಂತ್ರ್ಯಕ್ಕೆ ವಿಭಜನೆಯೇ ಮೂಲ ಎಂದಾತ ನಂಬಿದ್ದ; ಪ್ರತಿಪಾದಿಸುತ್ತಿದ್ದ. ಮಾಲ್ಕಮ್‌ನ ಅಭಿಪ್ರಾಯಗಳು ಮೊದಮೊದಲು ನನಗೆ ಒಪ್ಪಿಗೆಯಾಗಿರಲಿಲ್ಲ. ಆದರೆ ಆಫ್ರಿಕದ ಸರಕಾರಗಳನ್ನು ಅವಲೋಕಿಸಿದಾಗ ಆತನ ಮಾತು ನಿಜವೆನ್ನಿಸಿತು. ಲಿಂಕನ್‌ನಲ್ಲಿ ನನ್ನೊಂದಿಗೆ ಶಾಲೆಗೆ ಬರುತ್ತಿದ್ದ ಆಫ್ರಿಕನ್ ಹುಡುಗರ ಪೈಕಿ ಕೆಲವರು ಶಾಸನಗಳನ್ನು ರೂಪಿಸುವ ಮಟ್ಟವನ್ನು ಏರಿದ್ದರು. ನಾವೂ ಸ್ವತಂತ್ರರಾಗಬೇಕು; ನಮ್ಮ ನಿಯಮಗಳನ್ನು ನಾವೇ ರೂಪಿಸಿಕೊಳ್ಳಬೇಕು; ನಮ್ಮವರಿಗೆ ರಕ್ಷಣೆ ದೊರೆಯಬೇಕು ಎಂಬ ವಾಂಛೆ ನನ್ನಲ್ಲಿ ಮೂಡಿತು. ನಾವೊಂದು ರಾಷ್ಟ್ರವಾಗಿದ್ದೇವೆ ಎಂದು ಚಿಂತಿಸಿದೆ, ಬರೆದೆ, ಭಾಷಣ ಮಾಡಿದೆ. ರೋಮನ್ ಕಾನೂನು ಶಾಸ್ತ್ರದ ಸಂಹಿತೆಯೊಂದು ಹೇಳುತ್ತಿದ್ದ 'ಮಾನವರ ಹಕ್ಕುಗಳು ಎರಡು ಪ್ರಧಾನ ವರ್ಗೀಕರಣಗಳನ್ನು ಮಾಡುವುದಾದರೆ ಅವು ಸಂಪೂರ್ಣ ಮುಕ್ತ ಮತ್ತು ಗುಲಾಮತನ' ಎಂಬ ಮಾತಿನ ಅರ್ಥ ಆಗ ಸ್ಫುಟವಾಯಿತು.'' ಡೆಟ್ರಾಯ್ಟ್‌ನ ಭೇಟಿಯಲ್ಲಿ ಮಿಲ್ಟನ್ ಹೇಳಿದ್ದ.

ಡೆಟ್ರಾಯ್ಟ್‌ನಲ್ಲಿ ಪೊಲೀಸರು ಮತ್ತು ಕರಿಯ ವಿಮೋಚನಾದಿಗಳ ನಡುವಿನ ವಿರಸ ೧೯೬೭ರಲ್ಲಿ ತಾರಕಕ್ಕೇರಿತು. ನಗರ ಜನಾಂಗೀಯ ವಿದ್ವೇಷದ ದಳ್ಳುರಿಯಲ್ಲಿ ಸಿಲುಕಿಕೊಂಡಿತು. ಹೆನ್ರಿ ಸೋದರರ ಯಾವುದೇ ಚಿತಾವಣೆ ಇಲ್ಲದೆ ನಡೆದುಹೋದ ಘಟನೆ ಇದಾದರೂ ಫಿಲಡೆಲ್ಫಿಯಾದಲ್ಲಿದ್ದ ಅವರ ಸೋದರ ಸೋದರಿಯರ, ಬಂಧುಗಳ ದೂರವಾಣಿ ಸಂಪರ್ಕ ಹೆಚ್ಚು ಕಡಿಮೆ ಕಡಿದು ಹೋಯಿತು. ಅಂಚೆ ವಿನಾಕಾರಣ ತಡವಾಗಿ



"ಪ್ರಗತಿ ಆಗಿಲ್ಲಾಂದ್ರೆ ಹೇಗೆ? ಆಗಿರ್ಲೇಬೇಕು. ಅದರ ಪರಿಶೀಲನೇಗೆ ಸ್ವತಃ ಸಚಿವ್ರೇ ಬಂದಿದಾರೆ ಅಂದ್ಮೇಲೆ..."

ಬರದ ದಿನವೇ ಇರಲಿಲ್ಲ.

೧೯೬೮ರಲ್ಲಿ ಹೆನ್ರಿ ಸೋದರರು ಕರಿಯರ ಹೋರಾಟಕ್ಕೆ ತಾತ್ವಿಕ ಚೌಕಟ್ಟನ್ನು ನೀಡಿದರು. 'ದಾಸ್ಯ'ದ ಸಂಕೇತವಾಗಿದ್ದ ಹೆಸರುಗಳನ್ನು ಅವರು ತೊರೆದದ್ದೂ ಆಗಲೇ. ಮಿಲ್ಟನ್ ಬಿ. ಹೆನ್ರಿ ಮತ್ತು ರಿಚರ್ಡ್ ಬಿ. ಹೆನ್ರಿ ಅವರು ಅನುಕ್ರಮವಾಗಿ ಬ್ರದರ್ ಗೈದಿ ಒಬಡೇಲ್ ಹಾಗೂ ಬ್ರದರ್ ಇಮಾರಿ ಅಬುಬಾಕರಿ ಒಬಡೇಲ್ ಎಂದಾದರು.

ಸರಿಸುಮಾರು ಅದೇ ವೇಳೆ ಇಮಾರಿ (ಮಾಜಿ ರಿಚರ್ಡ್) 'ವಾರ್ ಇನ್ ಅಮೆರಿಕ' ಎಂಬ ಗ್ರಂಥವನ್ನು ಹೊರತಂದ. ಅದರಲ್ಲಿ ಕರಿಯರ ಮೇಲೆ ನಡೆಯುತ್ತಿದ್ದ ದಬ್ಬಾಳಿಕೆಯ ವಿಧಾನಗಳನ್ನು ಚಿತ್ರಿಸಿದ್ದೂ ಅಲ್ಲದೆ ಶತಮಾನಗಳಿಂದ ತಮಗೆ ಅನ್ಯಾಯ ಮಾಡಿದ ಅಮೆರಿಕಾ ಸರಕಾರವನ್ನು 'ದುರಸ್ತಿ' ಮಾಡಲೂ ಕರೆ ನೀಡಿದ. ದುರಸ್ತಿಯ ಒಂದು ಭಾಗವಾಗಿ ದಕ್ಷಿಣದ ಐದು ರಾಜ್ಯಗಳನ್ನು ಹೊಸ (ಕರಿಯ) ರಾಷ್ಟ್ರ ಸ್ಥಾಪನೆಗಾಗಿ ಬಿಟ್ಟುಕೊಡುವಂತೆ 'ವಾರ್ ಇನ್ ಅಮೆರಿಕ' ಒತ್ತಾಯಿಸಿತು. ಆಫ್ರಿಕದಿಂದ ಅಪಹರಿಸಲ್ಪಟ್ಟು ಅಮೆರಿಕಕ್ಕೆ ತರಲ್ಪಟ್ಟ

ಕರಿಯರು ಅಮೆರಿಕದ ಪೌರತ್ವವನ್ನು ಒಪ್ಪಿಕೊಳ್ಳುವ ಅಗತ್ಯವಿಲ್ಲ. ಏಕೆಂದರೆ ಯಾವುದೇ ಸರಕಾರ ತನ್ನ ಪ್ರಜೆಗಳಿಗೆ ನೀಡಬೇಕಾಗಿದ್ದ ರಕ್ಷಣೆಯನ್ನು ಅಮೆರಿಕ ಸರಕಾರ ನೀಡಿಲ್ಲ. ಕರಿಯರು ಕೇಳಿರುವ ಐದು ರಾಜ್ಯಗಳಲ್ಲಿ ಕರಿಯರೇ ಇರುವುದರಿಂದ ನಮ್ಮ ಬೇಡಿಕೆ ನ್ಯಾಯಯುತ ಎಂದೂ ಆ ಪುಸ್ತಕ ಪ್ರತಿಪಾದಿಸಿತು.

೧೯೬೮ರ ಮಾರ್ಚ್‌ನಲ್ಲಿ ದೇಶದ ಮೂಲೆ ಮೂಲೆಗಳಿಂದ ಬಂದ ಸಾವಿರಾರು ಕರಿಯ ಪ್ರತ್ಯೇಕತಾವಾದಿಗಳು ಡೆಟ್ರಾಯ್ಟ್‌ನಲ್ಲಿ ಸಭೆ ಸೇರಿದರು. 'ನವ ಆಫ್ರಿಕಾ ಗಣರಾಜ್ಯ' ಅಸ್ತಿತ್ವಕ್ಕೆ ಬಂದಿದೆಯೆಂದು ಇಮಾರಿ ಸಿದ್ಧಪಡಿಸಿದ. "ಸ್ವಾತಂತ್ರ್ಯ ಘೋಷಣಾ" ಪತ್ರಕ್ಕೆ ನೂರಾರು ಜನರು ಸಹಿ ಮಾಡಿದರು. 'ಜೋಪಾಸನಾ ಸರಕಾರ'ದ ಅಧ್ಯಕ್ಷರನ್ನಾಗಿ ರಾಬರ್ಟ್ ವಿಲಿಯಮ್ಸ್, ಉಪಾಧ್ಯಕ್ಷರನ್ನಾಗಿ ಮಿಲ್ಟನ್ ಅವರನ್ನು ನಿಯಕ್ತಿಗೊಳಿಸಲಾಯಿತು. ಇಮಾರಿ ಗಣರಾಜ್ಯದ ವಾರ್ತಾ ಸಚಿವನಾದ. ಗಣರಾಜ್ಯದ ಶಾಖೆಗಳನ್ನು 'ಕಾನ್ಸುಲೇಟ್'ಗಳೆಂದು ಹೆಸರಿಸಲಾಯಿತು. ನಾಗರಿಕರ ನೋಂದಣಿ ಕಾರ್ಯ ಮುಂದುವರಿಯಿತು. ೧೯೬೮ರಲ್ಲಿ ಇಮಾರಿ ವಾಷಿಂಗ್ಟನ್‌ಗೆ ಹಾರಿದ. ಕರಿಯರಿಗೆ ಈ ಮುನ್ನ ಬಿಟ್ಟು ಕೊಡಬೇಕೆಂದು ಕೊಂಡಿದ್ದ ಐದು ರಾಜ್ಯಗಳಲ್ಲಿ ಅಮೆರಿಕನ್ನರಿಂದ ಉಂಟಾದ ನಾಲ್ಕು ಕೋಟಿ ಡಾಲರ್ 'ನಷ್ಟ'ವನ್ನು ತುಂಬಿಕೊಡಬೇಕೆಂದೂ ತನ್ನ ಬೇಡಿಕೆಗಳ ಬಗ್ಗೆ ಚರ್ಚಿಸಲು ಅಮೆರಿಕ ಸಂಯುಕ್ತ ಸಂಸ್ಥಾನ ಮತ್ತು ಆಫ್ರಿಕ ಗಣರಾಜ್ಯದ ಮಧ್ಯೆ ಮಾತುಕತೆ ನಡೆಯಬೇಕೆಂದೂ ಒತ್ತಾಯಿಸಿದ. ಗಣರಾಜ್ಯ ಅಸ್ತಿತ್ವಕ್ಕೆ ಬಂದ ಬಗ್ಗೆ ಅಮೆರಿಕಕ್ಕೆ ಸೂಕ್ಷ್ಮವಾಗಿ ತಿಳಿಸುವ ಇರಾದೆ ಆತನದಾಗಿತ್ತು. ಆಫ್ರಿಕಾ ಗಣರಾಜ್ಯಕ್ಕೆ ಒಂದು 'ಸರಕಾರ' ಲಭಿಸಿದ ಮೇಲೆ ಅದರ ಪೌರರಿಗೆ ಜನಪ್ರತಿನಿಧಿಗಳಿಗೆ ರಕ್ಷಣೆ ಕೊಡಲು ಯುದ್ಧ ಕಲೆಯ ತರಬೇತಾದ ಯುವಕರನ್ನೊಳಗೊಂಡ 'ಬ್ಲ್ಯಾಕ್ ಲೀಜನ್' ಎಂಬ ಪಡೆಯನ್ನು ರಚಿಸಲಾಯಿತು.

೧೯೬೯ ಮಾರ್ಚ್ ೨೯, ಶನಿವಾರದಂದು ಆಫ್ರಿಕ ಗಣರಾಜ್ಯದ ಪ್ರಥಮ ವಾರ್ಷಿಕೋತ್ಸವ. ಡೆಟ್ರಾಯ್ಟ್‌ನ ಬೆಥೆಲ್ ಬ್ಯಾಪ್ಟಿಸ್ಟ್ ಚರ್ಚ್ ಬಳಿ ನಡೆಯಲಿದ್ದ ಸಮಾರಂಭದಲ್ಲಿ ಪಾಲ್ಗೊಳ್ಳಲು ೩೦೦ಕ್ಕೂ ಹೆಚ್ಚು ಕರಿಯರು ಸಡಗರದಿಂದ ಬಂದಿದ್ದರು. ಉಪಾಧ್ಯಕ್ಷರ ಭಾಷಣ ಮುಗಿಯಿತು. ಶಸ್ತ್ರಸಜ್ಜಿತ ಬೆಂಗಾವಲು ಪಡೆಯಿಂದ ಸುತ್ತುವರಿಯಲ್ಪಟ್ಟ ಮಿಲ್ಟನ್ ಚರ್ಚ್‌ನಿಂದ ಹೊರಬಿದ್ದು ತನ್ನ ಕಾರನ್ನೇರುವುದಕ್ಕೂ ಪೊಲೀಸ್ ಪಡೆಯ ಕಾರೊಂದು ಭರ್ರನೆ ಅಲ್ಲಿಗೆ ಬರುವುದಕ್ಕೂ ಸರಿಯಾಯಿತು. ಮುಂದೇನಾಯಿತೆಂಬುದು ಇನ್ನೂ ನಿಗೂಢ. ಆದರೆ ಮಿಲ್ಟನ್ ಪಾರಾಗುವಲ್ಲಿ ಸಫಲನಾದ. ಬಿಳಿಯ ಪೊಲೀಸರು ಮತ್ತು ಕಪ್ಪುಯೋಧರ ನಡುವೆ ಗುಂಡಿನ ಚಕಮಕಿ ಸಂಭವಿಸಿ ಪೊಲೀಸನೊಬ್ಬ ಸ್ಥಳದಲ್ಲಿಯೇ ಸಾವಿಗೀಡಾದ. ಮತ್ತೊಬ್ಬ ತೀವ್ರವಾಗಿ ಗಾಯಗೊಂಡ. ಇನ್ನಷ್ಟು ಪೊಲೀಸ್ ಪಡೆ ಚರ್ಚನ್ನು ಸುತ್ತುವರಿಯಿತು. ಆ ಕಟ್ಟಡದಲ್ಲಿ ಹೆಂಗಸರೂ ಮಕ್ಕಳೂ ಇದ್ದರು. ಮುಂದುವರಿದ ಚಕಮಕಿಯಲ್ಲಿ ಕಟ್ಟಡದಲ್ಲಿದ್ದ ನಾಲ್ವರು ಗಾಯಗೊಂಡರು. ರಿಚರ್ಡ್ ಕೂಡ ಚರ್ಚ್‌ನಲ್ಲಿದ್ದ. ಕೊಲೆ ಆರೋಪದ ಮೇಲೆ ಮೂವರು ಕರಿಯರು ಬಂಧಿಸಲ್ಪಟ್ಟರು. ಸುದೀರ್ಘ ವಿಚಾರಣೆಯ ನಂತರ ಅವರನ್ನು ನಿರ್ದೋಷಿಗಳೆಂದು ಬಿಡುಗಡೆ ಮಾಡಲಾಯಿತು.

ಬೆಥೆಲ್ ಚರ್ಚ್ ಪ್ರಕರಣದ ನಂತರ ಕಾನೂನು ಜಾರಿ ಸಂಸ್ಥೆಗಳ ಲಕ್ಷ್ಯ ಆಫ್ರಿಕಾ ಗಣರಾಜ್ಯದತ್ತ ಕೇಂದ್ರೀಕೃತವಾಯಿತು. ಕರಿಯ ಪ್ರತ್ಯೇಕತಾವಾದಿಗಳ ಹುಟ್ಟಡಗಿಸಿರುವುದಾಗಿ ಡೆಟ್ರಾಯ್ಟ್ ಪೊಲೀಸರು ಅಮೆರಿಕ ಸಂಯುಕ್ತ ಸಂಸ್ಥಾನದ ನ್ಯಾಯ ವಿಧಾಯಕ ಸಮಿತಿಯೊಂದರೆದುರು ಹೇಳಿಕೊಂಡರು. ಆದರೆ ಕರಿಯರಿಗೆ ಪ್ರತ್ಯೇಕ ರಾಷ್ಟ್ರ ಕಲ್ಪಿಸುವ ಕುರಿತಾದ ಪ್ರಕ್ರಿಯೆಗಳು ಮುಂದುವರಿದಿದ್ದವು. ಅಮೆರಿಕದ ಅಧ್ಯಕ್ಷ ನಿಕ್ಸನ್ ಅವರಿಗೆ ಮಿಲ್ಟನ್ ಪತ್ರವೊಂದನ್ನು ಬರೆದು ಗಣರಾಜ್ಯದ ಬೇಡಿಕೆಗಳ ಬಗ್ಗೆ ಚರ್ಚಿಸಲು ಅವಕಾಶ

ನೀಡಬೇಕೆಂದು ಕೋರಿಕೊಂಡ. ಆದರೆ ಯಾವ ಪ್ರತಿಕ್ರಿಯೆಯೂ ವ್ಯಕ್ತವಾಗಲಿಲ್ಲ. ಗಣರಾಜ್ಯ 'ಸಂಪುಟ'ದ ಸದಸ್ಯರು ಕಾಂಗ್ರೆಸ್‌ನಲ್ಲಿದ್ದ ಕೆಲ ಕೃಷ್ಣವರ್ಣೀಯ ಸದಸ್ಯರನ್ನು ಭೇಟಿಯಾಗಿ ಅವರ ಪ್ರಭಾವದ ಮೂಲಕ ಶ್ವೇತಭವನದ ಅಭಿಪ್ರಾಯವನ್ನು ತಿಳಿಯಲೆತ್ನಿಸಿ ಸೋತರು.

ಅತ್ಯಂತ ಆಶ್ಚರ್ಯ ಮತ್ತು ಬೇಸರದ ಸಂಗತಿಯೆಂದರೆ ಗಣರಾಜ್ಯದ ಮುನ್ನಡೆಯ ಬಗ್ಗೆ ಹೆನ್ರಿ ಸೋದರರಲ್ಲೇ ಬಿರುಕು ಮೂಡಿ, ವಿಕಾಸಗೊಳ್ಳುತ್ತ ನಡೆದುದು. ಪ್ರತ್ಯೇಕ ಕರಿಯ ರಾಷ್ಟ್ರ ನಿರ್ಮಾಣದ ಬಗ್ಗೆ ಮಾತನಾಡುವುದನ್ನು ನಿಲ್ಲಿಸುವ ಕಾಲ ಈಗ ಬಂದಿದೆ, 'ಹೊಸ ಸಮುದಾಯ' ನೆಲೆಯೂರಲು ಮಿಸ್ಸಿಸ್ಸಿಪ್ಪಿಯಲ್ಲಿ ಜಮೀನು ಖರೀದಿಸುವ ಜರೂರಿದೆ ಎಂದು ರಿಚರ್ಡ್ ಹೇಳುತ್ತಿದ್ದ. ಆತನ ಪ್ರಕಾರ ಅಲ್ಲಿಯವರೆಗೆ ಗಣರಾಜ್ಯಕ್ಕೆ ಭೌತಿಕ ಅಸ್ತಿತ್ವವೇ ಇರಲಿಲ್ಲ. ಬೆಥೆಲ್ ಘಟನೆಯ ಹಿನ್ನೆಲೆಯಲ್ಲಿ ಹತ್ತು ಲಕ್ಷ ಯೋಧರ ರಕ್ಷಣಾ ಪಡೆಯನ್ನು ರಚಿಸಿ ವಿರೋಧಿಗಳನ್ನು ಮತ್ತು ಕಾನೂನಿನ ಸೋಗಿನಲ್ಲಿ ಬರುವ ಜನರನ್ನು ತಡೆಯಬೇಕೆಂಬುದು ಆತನ ಇಚ್ಛೆಯಾಗಿತ್ತು. ಆದರೆ ಮಿಲ್ಟನ್ ಪ್ರಕಾರ, ಕರಿಯರು ಗಣರಾಜ್ಯಕ್ಕೆ ನೀಡುವ ಬೆಂಬಲ ಪರಿಪಕ್ವವಾದದ್ದಲ್ಲ. ಅವರನ್ನು ನಂಬುವುದು ಆತ್ಮಹತ್ಯಾಕಾರಿಯಾದೀತು. ಜೊತೆಗೆ ಲಕ್ಷದಷ್ಟು ಕರಿಯರ ಪಡೆಯನ್ನು ನಿಯಂತ್ರಿಸುವುದು ಸಾಧ್ಯವಾಗದ ಮಾತು ಎಂಬುದು ನ್ಯಾಯವಾದಿಯೂ ಆಗಿದ್ದ ಮಿಲ್ಟನ್‌ನ ಅಭಿಮತ.

ಸಂಘಟನೆಯೊಳಗೆ ಗುಪ್ತಗಾಮಿನಿಯಾಗಿ ಹರಿಯುತ್ತಿದ್ದ ಭಿನ್ನಮತ ೧೯೬೯ರಲ್ಲಿ ಸ್ಫೋಟಗೊಂಡಿತು. ಗಣರಾಜ್ಯದ ರಕ್ಷಣಾ ಸಚಿವನಾಗಿದ್ದ ಇಮಾರಿಯನ್ನು ಮಿಲ್ಟನ್ ಹೆನ್ರಿ 'ಅಮಾನತ್ತು' ಗೊಳಿಸಿದಾಗ ಡೆಟ್ರಾಯ್ಟ್‌ನ ಪತ್ರಿಕೆಗಳು ಬೊಬ್ಬೆ ಹಾಕಿದವು. ಮರುವರ್ಷ ನಡೆದ ಚುನಾವಣೆಯೊಂದರಲ್ಲಿ ರಿಚರ್ಡ್‌ನನ್ನು ಗಣರಾಜ್ಯದ ಅಧ್ಯಕ್ಷನನ್ನಾಗಿ ಚುನಾಯಿಸಲಾಯಿತು. ಚುನಾವಣೆಯನ್ನು ಬಹಿಷ್ಕರಿಸಿದ ಮಿಲ್ಟನ್ ತಾನೇ ಗಣರಾಜ್ಯದ ಅಧಿಕೃತ ಮುಖ್ಯಸ್ಥ



"ಸಭಾತ್ಯಾಗ'ದ ದಾಖಲೆ ಮುರಿಯೋದಕ್ಕೆ ನೀವಿಲ್ಲಿ ಒಂದೇ ಒಂದು ಸಂಖ್ಯೆ ಕಡಿಮೆ ಇತ್ತು ನೋಡಿ. ಅದಕ್ಕೇ ಶಾಶ್ವತ ಸಭಾತ್ಯಾಗ ಮಾಡಿಸಿಬಿಟ್ಟದಾರೆ ಮತದಾರು..."

ನೆಂದು ಹೇಳಿಕೊಂಡ. ಎರಡು ತಿಂಗಳ ಬಳಿಕ ನ್ಯೂ ಆರ್ಲೀನ್ಸ್‌ನಲ್ಲಿ ರಿಚರ್ಡ್ ತನ್ನ ಬೆಂಬಲಿಗರೊಂದಿಗೆ ಕಚೇರಿಯೊಂದನ್ನು ತೆರೆದ. ಕರಿಯ ರೈತ ಲೊಫ್ಟನ್ ಮ್ಯಾಸನ್‌ನ ಜಮೀನನ್ನು ಕೊಳ್ಳಲು ಮಾತುಕತೆ ನಡೆಯಿತು. ಮಿಸ್ಸಿಸ್ಸಿಪ್ಪಿಯ ಜಾಕ್ಸನ್ ನಗರಕ್ಕೆ ಇಪ್ಪತ್ತೈದು ಮೈಲಿ ದೂರದಲ್ಲಿದ್ದ ಹಿಂಡ್ಸ್ ಕೌಂಟಿಯಲ್ಲಿ ಕಪ್ಪು ಜನರು ತಳವೂರಲಿದ್ದಾರೆಂಬ ವಾರ್ತೆ ಮಿಸ್ಸಿಸ್ಸಿಪ್ಪಿಯನ್ನು ಗಾಬರಿಗೊಳಿಸಿತು.

ಮಾರ್ಚ್ ೧೯೭೧ರಲ್ಲಿ ಹಿಂಡ್ಸ್ ಕೌಂಟಿ ಪ್ರದೇಶದಲ್ಲಿ ಪ್ರಯಾಣಿಸುತ್ತಿದ್ದ ಆರ್‌ಎನ್‌ಎ ಸದಸ್ಯರನ್ನು ಮಿಸ್ಸಿಸ್ಸಿಪ್ಪಿ ಪೊಲೀಸರು ವಶಕ್ಕೆ ತೆಗೆದುಕೊಂಡರು. ಕೆಲ ದಿನಗಳ ಬಳಿಕ ಇಮಾರಿಯನ್ನೊಳಗೊಂಡ ೧೫೦ ಸದಸ್ಯರು ಮ್ಯಾಸನ್‌ನ ಜಮೀನಿನಲ್ಲಿ ಭಾರೀ ಸಮಾರಂಭವನ್ನು ವ್ಯವಸ್ಥೆಗೊಳಿಸಿದ್ದರು. ಅಲ್ಲಿ ಆರ್‌ಎನ್‌ಎ ಕಾರ್ಯಕಾರಿ ಕಚೇರಿ, ಶಾಲೆ, ಆಸ್ಪತ್ರೆ ತಲೆ ಎತ್ತಲಿದ್ದವು. "ಶತಮಾನಕ್ಕಿಂತ

ಹಿಂದೆ ನಮ್ಮ ಪೂರ್ವಿಕರನ್ನು ಹೊಡೆದೋಡಿಸಲಾದ ಸ್ಥಳಕ್ಕೆ ನಾವು ಮರಳಿ ಬಂದಿದ್ದೇವೆ," ವೇದಿಕೆಯ ಮೇಲಿಂದ ಇಮಾರಿ ಘೋಷಿಸಿದ. ಆರ್.ಎನ್.ಎ. ಸಂಘಟನೆ ಹಿಂದೆ ಅಹಿಂಸಾತ್ಮಕವಾಗಿತ್ತು. ಮುಂದೆಯೂ ಕಾನೂನಿನ ಚೌಕಟ್ಟಿನಲ್ಲಿ ಕಾರ್ಯ ನಿರ್ವಹಿಸುವುದೆಂದೂ ಹೇಳಿದ. ಸಂಘಟನಾ ಚಟುವಟಿಕೆಗಳು ಮುಂದುವರಿದವು.

ಮಿಸ್ಸಿಸ್ಸಿಪ್ಪಿಯ ಅಟಾರ್ನಿ ಜನರಲ್ ಎ.ಎಫ್ ಸಮ್ಮರ್‌ಗೆ ಆರ್.ಎನ್.ಎ. ಕಲಾಪಗಳ ಬಗ್ಗೆ ಸಂಶಯ ಮೂಡಿತು. ಅವರು ಅಮೆರಿಕದ ಅಟಾರ್ನಿ ಜನರಲ್ ಜಾನ್ ಮಿಚೆಲ್‌ಗೆ "ಈ ಸಂಘಟನೆಯ ಶಸ್ತ್ರ ಸನ್ನದ್ಧತೆಯನ್ನು ಗಮನಿಸಿದರೆ ಅವರ ಉದ್ದೇಶ ಮಿಸ್ಸಿಸ್ಸಿಪ್ಪಿ ರಾಜ್ಯಕ್ಕೆ ಸೀಮಿತವಾಗಿರದೆ ಇಡೀ ಅಮೆರಿಕ ಸಂಯುಕ್ತ ಸಂಸ್ಥಾನಕ್ಕೂ ವ್ಯಾಪಿಸುವಂತಿದೆ," ಎಂದು ವರದಿ ಸಲ್ಲಿಸಿದರು. ಈ ಹಿನ್ನೆಲೆಯಲ್ಲಿ ಮಿಸ್ಸಿಸ್ಸಿಪ್ಪಿ ಪೊಲೀಸರು ಹಲವಾರು ಆಪಾದನೆಗಳನ್ನು ಹೊರಿಸಿ ಸಂಘಟನೆಯ ಸದಸ್ಯರನ್ನು ಬಂಧಿಸತೊಡಗಿದರು. ಇಮಾರಿಯೂ ಬಂಧಿಸಲ್ಪಟ್ಟ.

ಕರಿಯರಿಗೆ ಭೂಮಿಯನ್ನು ಕೊಡಕೂಡದೆಂದು ಮ್ಯಾಸನ್‌ಗೆ ಪೊಲೀಸರು ನಿರ್ಬಂಧ ಹಾಕಿದರೂ ಆತ ಅದನ್ನು ಹಸ್ತಾಂತರಿಸಲು ಮುಂದೆ ಬಂದಿದ್ದ. ಆದರೆ ಮಾತಿನಂತೆ ಆರ್.ಎನ್.ಎ. ಸ್ಥಳದಲ್ಲೇ ಹಣ ಪಾವತಿ ಮಾಡಲು ವಿಫಲವಾಯಿತು. ಮ್ಯಾಸನ್ ವ್ಯಾಪಾರವನ್ನು ರದ್ದು ಮಾಡಿದ. ತನಗೆ ಮಾನಸಿಕ ಹಿಂಸೆಯನ್ನುಂಟು ಮಾಡಿದ ಆರ್.ಎನ್.ಎ. ವಿರುದ್ಧ ೧೦ ಲಕ್ಷ ಡಾಲರ್ ಮೊತ್ತದ ಮೊಕದ್ದಮೆ ಹೂಡಿದ.

೧೯೭೧ ಆಗಸ್ಟ್ ೧೮ರಂದು ಎಫ್‌ಬಿಐ ಮತ್ತು ಸ್ಥಳೀಯ ಪೊಲೀಸರ ಜಂಟಿ ಪಡೆಗಳು ಜಾಕ್ಸನ್ ನಗರದ ಲೆವಿಸ್ ಬೀದಿಯಲ್ಲಿದ್ದ ಆರ್‌ಎನ್‌ಎ ಕೇಂದ್ರಕಚೇರಿಯನ್ನು ಸುತ್ತುವರಿದವು. ಮಿಚಿಗನ್‌ನಲ್ಲಿ ನಡೆದ ಚಕಮಕಿಗೆ ಸಂಬಂಧಿಸಿದಂತೆ ಜೆರ್ರಿ ಸ್ಟೀನರ್ ಎಂಬ ಕರಿಯನನ್ನು ಬಂಧಿಸಲು ಅವರು ಬಂದಿದ್ದರು. ಭಾರೀ ಚಕಮಕಿ ನಡೆಯಿತು. ಜಾಕ್ಸನ್ ಪೊಲೀಸ್ ಬೇಹುಗಾರಿಕೆ ಘಟಕದ ಮುಖ್ಯಸ್ಥ ಲೆ. ಲೂಯಿಸ್ ಸ್ಥಳದಲ್ಲೇ ಮೃತಪಟ್ಟರು. ಇಷ್ಟಕ್ಕೆಲ್ಲ ಕಾರಣನಾದ ಸ್ಟೀನರ್ ಆ ಕಟ್ಟಡಕ್ಕೆ ಬಂದಿರಲೇ ಇಲ್ಲ. ಲೆವಿಸ್ ಬೀದಿಯಲ್ಲಿ ಗುಂಡಿನ ವಿನಿಮಯ ನಡೆಯುತ್ತಿದ್ದಾಗಲೇ ಮತ್ತೊಂದು ಪೊಲೀಸ್ ಪಡೆ ಲಿಂಚ್ ಬೀದಿಯ ಮನೆಯೊಂದರ ಮೇಲೆ ದಾಳಿಮಾಡಿತು. ಅಲ್ಲಿದ್ದ ಇಮಾರಿ ಮತ್ತು ಇತರ ನಾಲ್ವರು ಪೊಲೀಸರಿಗೆ ಶರಣಾದರು.

ಲೆವಿಸ್ ಬೀದಿಯಲ್ಲಿ ನಡೆದ ಮಾರಾಮಾರಿಯಲ್ಲಿ ಇಮಾರಿಯ ಪಾತ್ರವಿರದಿದ್ದರೂ ಆತನ ಮೇಲೆ ಒಕ್ಕೂಟ ಸರಕಾರದ ಅಧಿಕಾರಿಯೊಬ್ಬರನ್ನು ಕೊಲೆಗೈದ ಮತ್ತು ಮಿಸ್ಸಿಸ್ಸಿಪ್ಪಿ ಶಾಸನವನ್ನು ಉಲ್ಲಂಘಿಸಿದ ಆರೋಪವನ್ನು ಹೊರಿಸಲಾಯಿತು. ಆತನನ್ನು ಭಾರೀ ಭದ್ರತೆಯೊಡನೆ ಹಿಂಡ್ಸ್ ಕೌಂಟಿ ಕಾರಾಗೃಹದಲ್ಲಿರಿಸಲಾಯಿತು. ಆತನೊಂದಿಗೆ ಬಂಧಿತರಾದ ಮೂವರಿಗೆ ಜಾಮೀನು ಸಿಕ್ಕರೂ ಇಮಾರಿಗೆ ಸಿಗಲಿಲ್ಲ.

ನಾನು ಇಮಾರಿಯನ್ನು ಕಾಣಬೇಕೆಂದು ಇತ್ತೀಚೆಗೆ ಜಾಕ್ಸನ್ ನಗರಕ್ಕೆ ಹೋದಾಗ ಮೊದಲು ಭೇಟಿಯಾದದ್ದು ಜಾನ್ ಬ್ರಿಟ್ಟೇನ್ ಜೂನಿಯರ್. ಇಮಾರಿ ಹಾಗೂ ಬಂಧನಕ್ಕೊಳಗಾದ ಆರ್.ಎನ್.ಎ. ಸದಸ್ಯರ ಪರವಾಗಿ ವಕಾಲತ್ತು ವಹಿಸಿದ್ದ ವಕೀಲರ ತಂಡದ ನಾಯಕ. ಆತ ಹೇಳಿದ, "ಆರ್.ಎನ್.ಎ. ಉಗ್ರಗಾಮಿ ಸಂಘಟನೆ ಮತ್ತು ಪೊಲೀಸರ ನಡುವೆ ನಡೆದ ಚಕಮಕಿಯ ನಂತರ ಕರಿಯರು ಭಯಗೊಂಡಿದ್ದಾರೆ. ಅವರು ಆರ್.ಎನ್.ಎ.ಗೆ ಮುಕ್ತವಾಗಿ ಬೆಂಬಲ ನೀಡಲು ಹಿಂದೇಟು ಹಾಕುತ್ತಿದ್ದಾರೆ. ಆದರೆ ಆ ಸಂಘಟನೆಯಿಂದ ತಮ್ಮ ಹಕ್ಕುಗಳ ರಕ್ಷಣೆಯನ್ನು ನಿರೀಕ್ಷಿಸಿದ್ದಾರೆ. ಪೊಲೀಸರನ್ನು ಎದುರು ಹಾಕಿಕೊಳ್ಳಲು ಅವರಿಗಿಷ್ಟವಿರಲಿಲ್ಲ. ಪೊಲೀಸರು ತಮಗೆ ಕೊಟ್ಟದ್ದನ್ನೇ ವಾಪಸ್ ಕೊಡಲು ಕೆಲವರು ಯೋಚಿಸುತ್ತಿದ್ದಾರೆ....."

ಇಮಾರಿಯನ್ನಿಟ್ಟಿರುವ ಜೈಲಿಗೆ ಹೋಗಲು

ನನಗೆ ಸಾಧ್ಯವೆ? ಎಂದು ಕೇಳಿದೆ. "ಕುಟುಂಬದ ಸದಸ್ಯರು ಮತ್ತು ವಕೀಲರನ್ನು ಹೊರತುಪಡಿಸಿದರೆ ಬೇರಾರಿಗೂ ಅವನನ್ನು ಭೇಟಿಯಾಗುವ ಅವಕಾಶವೇ ಇಲ್ಲ. ಆದರೆ ನೀವು ಬಯಸಿದ ಪ್ರಶ್ನೆಗಳನ್ನು ಬರೆದುಕೊಡಿ. ನಾನು ತಲುಪಿಸುತ್ತೇನೆ," ಬ್ರಿಟ್ಟೆನ್ ಹೇಳಿದ.

ನಾನು ಪ್ರಶ್ನೆ ಕಳಿಸಿ ಹಲವಾರು ದಿನಗಳುರುಳಿದವು. ಉತ್ತರ ಬಂದಿರಲಿಲ್ಲ. ನ್ಯೂಯಾರ್ಕ್‌ಗೆ ಮರಳಿದೆ. ಆ ವಿಳಾಸಕ್ಕೆ ಇಮಾರಿಯಿಂದ ಬಂದ ಪತ್ರವೊಂದು ನನ್ನ ಬರವನ್ನೆ ನಿರೀಕ್ಷಿಸಿತ್ತು. ಅಣ್ಣ-ತಮ್ಮಂದಿರ ನಡುವೆ ಸಂಘಟನೆಗೆ ಸಂಬಂಧಿಸಿದಂತೆ ಉಂಟಾದ ವಿರಸದ ಬಗ್ಗೆ ಕೇಳಲಾದ ಪ್ರಶ್ನೆಗೆ ಹೀಗೆ ಸಮಜಾಯಿಷಿ ನೀಡಿದ್ದ, "ನನ್ನ ದೃಷ್ಟಿಯಲ್ಲಿ ನಮ್ಮ ಸಂಘರ್ಷವು ಸ್ವಾತಂತ್ರ್ಯ ಭೂಮಿಯನ್ನು ಪಡೆದುಕೊಳ್ಳಲು ಗಂಭೀರವಾಗಿ ಯೋಚಿಸುವವರು ಮತ್ತು ಕಾಕ್‌ಟೈಲ್ ಪಾರ್ಟಿಗಳಲ್ಲಿ ಕ್ರಾಂತಿಕಾರಿ 'ಕೆಲಸ'ಗಳನ್ನು ಮಾಡುವ, ಅರ್ಥವಿಲ್ಲದ ರ್‍ಯಾಲಿಗಳನ್ನು ಏರ್ಪಡಿಸುವವರ ನಡುವಿನ ಮೂಲಭೂತ ಹೋರಾಟ."

ಜಮೀನು ಖರೀದಿ ಒಪ್ಪಂದದಂತೆ ಲೊಫ್ಟನ್ ಮ್ಯಾಸನ್‌ಗೆ ಹಣ ನೀಡಲು ಆರ್.ಎನ್.ಎ. ವಿಫಲವಾಯಿತೆಂಬುದನ್ನು ಅದರ ಧುರೀಣನೂ ಆದ ಆತ ಒಪ್ಪಿಕೊಂಡಿದ್ದ. ಆದರೆ ಕರಿಯನೊಬ್ಬನ ಭೂಮಿಯನ್ನು ಯಾವುದೇ ಪ್ರತಿಫಲ ಇಲ್ಲದೆ ವಶಪಡಿಸಿಕೊಳ್ಳಲು ಆರ್.ಎನ್.ಎ. ಉದ್ದೇಶಿಸಿತ್ತೆಂಬ ವರದಿಯನ್ನು ನಿರಾಕರಿಸಿದ್ದ. ತಮ್ಮ ಯತ್ನಗಳನ್ನು 'ಕರಿಯ ಬಂಡವಾಳಶಾಹಿ' ಎಂದು ಕರೆದಿದ್ದ. ಬಿಳಿಯ ಮಾಧ್ಯಮಗಳ ಮೇಲೆ ಘೂತ್ಕರಿಸಿದ್ದ.

"ಬಿಳಿಯರಿಗೆ ಲಾಭದಾಯಕವೆಂದು ಕಂಡುಬರದ ಯಾವ ಸೌಲಭ್ಯವನ್ನೂ ಪಡೆಯಲು ಕರಿಯರಾದ ನಮಗೆ ಇಲ್ಲಿಯತನಕ ಸಾಧ್ಯವಾಗಿಲ್ಲ. ದಕ್ಷಿಣದ ಬಿಳಿಯರಿಗಿಂತ ಉತ್ತರದ ಬಿಳಿಯರು ಪ್ರಗತಿಪರರು. ಅಲ್ಲಿನ ಕರಿಯರು ಎಲ್ಲ ಸವಲತ್ತುಗಳನ್ನು ಪಡೆದುಕೊಂಡು ಬಿಳಿಯರೊಂದಿಗೆ ಸಹಬಾಳ್ವೆ ನಡೆಸುತ್ತಿದ್ದಾರೆ. ಕರಿಯರೇ ತುಂಬಿರುವ ಮಿಸ್ಸಿಸ್ಸಿಪ್ಪಿಗೆ ಸಾರ್ವಭೌಮತ್ವವನ್ನು ಕಲ್ಪಿಸುವುದು ಸರಳ ಮತ್ತು ತರ್ಕಬದ್ಧ ಕ್ರಮವಾಗುತ್ತದೆ. ಕರಿಯರ ಅಸಮಾಧಾನ ಕೊನೆಗೊಂಡು, ಅಮೇರಿಕದ ಬಗ್ಗೆ ಕಳಕಳಿ ಇರುವ ಬಿಳಿಯರು ನೆಮ್ಮದಿಯ ನಿಟ್ಟುಸಿರು ಬಿಡುತ್ತಾರೆ" ಎಂದು ಪರಿಹಾರ ಸೂಚಿಸಿದ್ದ.

"ಮೆಂಫಿಸ್‌ನಿಂದ ಲೂಸಿಯಾನ ಗಡಿಯವರೆಗೆ ಮಿಸ್ಸಿಸ್ಸಿಪ್ಪಿ ನದೀಪಾತ್ರದ ಮೇಲಿರುವ ಇಪ್ಪತ್ತೈದು ಕರಿಯರ ಪ್ರಾಂತ್ಯಗಳನ್ನು ಒಂದುಗೂಡಿಸುವುದೀಗ ನಮ್ಮ ಗುರಿ. ಇದನ್ನು ನಾವು 'ಕುಶ್' ಜಿಲ್ಲೆಯೆಂದು ಕರೆಯುತ್ತೇವೆ. ಜನಮತಗಣನೆಯ ಆಧಾರದ ಮೇಲೆ ಇದು ಸ್ವತಂತ್ರಗೊಳ್ಳಲಿದೆ. ಇಲ್ಲಿಯ ಜನ ನವ ಆಫ್ರಿಕನ್; ಪ್ರಭುತ್ವ ನವ ಆಫ್ರಿಕನ್. ಈ ಚೌಕಟ್ಟಿನಲ್ಲಿಯೇ ನಾವು ಮುಂದಿನ ಕ್ರಮಗಳನ್ನು ನಿರ್ವಹಿಸುತ್ತೇವೆ," ಎಂದು ಪ್ರತಿಪಾದಿಸಿದ್ದ.

ಆಫ್ರಿಕಾ ಗಣರಾಜ್ಯದ ಕುರಿತು ನಾನು ಕೇಳಿದ ಪ್ರಶ್ನೆಗೆ ಆತ ಹೀಗೆ ಪ್ರತಿಕ್ರಿಯಿಸಿದ್ದ, "ನಾನು ಅಥವಾ ನಮ್ಮವರು ದಕ್ಷಿಣ ಅಮೇರಿಕವನ್ನು ಹಗೆ ಎಂದು ಭಾವಿಸಿಲ್ಲ ಎಂಬುದು ನಿಮ್ಮ ಇಂಗಿತವಾಗಿದ್ದರೆ ಅದು ಬಾಲಿಶ. ಸ್ವಾತಂತ್ರ್ಯವನ್ನು ನಮ್ಮಿಂದ ದೂರವಿಡಬಯಸಿದ ಬಿಳಿಯರು ನಮ್ಮನ್ನು ಜೈಲಿನಲ್ಲಿಡಲು, ಕೊಲ್ಲಲು ಶಪಥ ಮಾಡಿದ್ದಾರೆ ಎಂಬ ಅನಿಸಿಕೆ ನಿಮ್ಮದಾಗಿದ್ದರೆ ಅದು ಪ್ರಮಾದ. ನಾವು ಬಯಸಿದ್ದನ್ನು ಪಡೆದೇ ತೀರುತ್ತೇವೆಂಬುದು ನಮಗೆ ಮನವರಿಕೆಯಾಗಿದೆ. ದೇವರು ಯಾವಾಗಲೂ ನಮ್ಮೊಂದಿಗಿದ್ದಾನೆ. ಬಿಡುಗಡೆ, ಸ್ವಾತಂತ್ರ್ಯ ಮತ್ತು ಸಮೃದ್ಧಿಯನ್ನು ಪಡೆಯಲು ಕುಶ್ ಜನರು ತುದಿಗಾಲ ಮೇಲಿದ್ದಾರೆ. ಸದ್ಯದಲ್ಲಿಯೇ ನಾವು ಚುನಾವಣೆಯನ್ನು ನಡೆಸಿ ಈ ಭಾಗದ ಕರಿಯರ ಪ್ರಥಮ ಚುನಾಯಿತ ಮಂಡಳಿ ಅಸ್ತಿತ್ವಕ್ಕೆ ಬರಲಿದೆ.

ಪ್ರಜಾಶಾಸನದ ಪರಿಣಾಮಗಳನ್ನು ಅಮೇರಿಕ ಹೇಗೆ ಒಪ್ಪಿಕೊಳ್ಳುವಂತೆ ಮಾಡಬೇಕೆಂಬುದನ್ನು ಮತ್ತೊಮ್ಮೆ ವಿವರಿಸುತ್ತೇನೆ. ಈಗ ವಿರಮಿಸುವೆ." ●

ಅವರೀಗ
ಮಹಾರಾಷ್ಟ್ರದ
ಕ್ಯಾಬಿನೆಟ್ ಸಚಿವ
ಸಬೀರ್ ಶೇಖ್

# ಹಿಂದುತ್ವವಾದಿ ಮುಸ್ಲಿಂ ಶಿವಸೈನಿಕ!

ವಿಲಕ್ಷಣ ರಾಜಕೀಯ ನಿಷ್ಠೆಯನ್ನು ಹೊರತುಪಡಿಸಿದರೆ ಮಹಾರಾಷ್ಟ್ರದ ಮಂತ್ರಿಮಂಡಳದ ಸದಸ್ಯರಾಗಿರುವ ಸಬೀರ್ ಶೇಖ್‌ರ ಬಗೆಗೆ ಅಷ್ಟಾಗಿ ಹೇಳುವಂತಹುದೇನೂ ಇಲ್ಲ. ಅವರ ಈ ವಿಲಕ್ಷಣ ನಿಷ್ಠೆಯಿಂದಾಗಿಯೇ ಈಗ ರಾಷ್ಟ್ರಮಟ್ಟದಲ್ಲೂ ಅನೇಕರ ಗಮನ ಸಬೀರ್ ಶೇಖ್‌ರತ್ತಲೇ ಅವರು ಒಬ್ಬ ಕಟ್ಟಾ ಮುಸ್ಲಿಂ ಶಿವಸೈನಿಕರು!

ಮುಸ್ಲಿಂ ಶಿವಸೈನಿಕ! ಅದೂ ಮುಸ್ಲಿಂ ವಿರೋಧಿಯೆಂದು ಭಾವಿಸಲ್ಪಟ್ಟ ಶಿವಸೇನೆಯಲ್ಲಿ! ಯಾರಾದರೂ ಈ ಬಗೆಯ ವಿಸ್ಮಯ ಅಥವಾ ಸಂಶಯ ವ್ಯಕ್ತಪಡಿಸಿದಾಗ ಸಬೀರ್ ಶೇಖ್ ನೀಡುವ ಸಮಾಧಾನ ಇದು: "ನೀವು ಭಾವಿಸಿದ ಹಾಗೆ ಶಿವಸೇನೆ ಮುಸ್ಲಿಂ ವಿರೋಧಿ ಅಲ್ಲವೇ ಅಲ್ಲ. ಅದು ವಿರೋಧವಾಗಿರುವುದು ರಾಷ್ಟ್ರದ್ರೋಹಿಗಳಿಗೆ ಮಾತ್ರ."

ಸಬೀರ್ ಶೇಖ್‌ರ ಹೆಸರು ಕಿವಿಗೆ ಬಿದ್ದೊಡನೆ ತಟ್ಟನೆ ನೆನಪಾಗುವುದು ಹಿಂದೂ ಭೂಯಿಷ್ಠವೇ ಆದ ಭಾರತೀಯ ಜನತಾ ಪಕ್ಷದ ಧುರೀಣ ಸಿಕಂದರ್ ಬಖ್ತ್‌ರ ಹೆಸರು. ಇಬ್ಬರೂ ಮುಸ್ಲಿಮರು; ಇಬ್ಬರೂ ಹಿಂದೂ ಪ್ರಧಾನವಾದ ಎರಡು ಬೇರೆ ಬೇರೆ ರಾಜಕೀಯ ಪಕ್ಷಗಳಲ್ಲಿದ್ದಾರೆ ಎನ್ನುವುದನ್ನು ಹೊರತುಪಡಿಸಿದರೆ ಅವರಲ್ಲಿ ಹೆಚ್ಚಿನ ಸಾಮ್ಯವಿಲ್ಲ. ವಾಸ್ತವವಾಗಿ ಸಿಕಂದರ್ ಬಖ್ತ್ ಕಾಂಗ್ರೆಸ್ಸಿನಿಂದ ಬಿಜೆಪಿಗೆ ಸೇರಿಕೊಂಡವರು. ಆದರೆ ಸಬೀರ್ ಶೇಖ್ ಹಾಗಲ್ಲ. ಮೊದಲಿನಿಂದಲೂ ಅವರ ನಿಷ್ಠೆ ಶಿವಸೇನೆಗೇ. ೧೯೬೬ ರಿಂದಲೂ ಅವರು ಅದರ ಸದಸ್ಯರಾಗಿದ್ದಾರೆ.

ಸಬೀರ್ ಶೇಖ್ ಹುಟ್ಟಿದ್ದು ಮಹಾರಾಷ್ಟ್ರದ ನಾರಾಯಣಗಾಂವ್‌ನಲ್ಲಿ. ಶಿವನೇರಿಯ ಬಳಿಯೇ ಆ ಹಳ್ಳಿ. (ಶಿವಾಜಿ ಹುಟ್ಟಿದ್ದು ಶಿವನೇರಿಯಲ್ಲಿ. ಹೆಸರೇ ಸೂಚಿಸುವಂತೆ ಒಂದು ಕಾಲದಲ್ಲಿ ಇಲ್ಲಿ ಕನ್ನಡ ಮಾತನಾಡುವವರು ಬಹು ಸಂಖ್ಯೆಯಲ್ಲಿ ಇದ್ದಿರಬೇಕು: ಆ ಮಾತು ಬೇರೆ.) ಶಿವಾಜಿ ಹುಟ್ಟಿದ ಸ್ಥಳದಲ್ಲೆ ತಾವೂ ಹುಟ್ಟಿದ್ದೇವೆ ಎನ್ನುವ ಕಾರಣಕ್ಕಾಗಿಯೋ ಏನೋ ಸಬೀರ್ ಶೇಖ್‌ರಿಗೆ ಶಿವಾಜಿಯ ಮೇಲೆ ಮೊದಲಿನಿಂದಲೂ ಅಭಿಮಾನ. ಶಿವಾಜಿಯ ಬಗೆಗೆ ಕೈಗೆ ಸಿಕ್ಕ ಎಲ್ಲ ಪುಸ್ತಕಗಳನ್ನು ಅವರು ಓದಿದ್ದಾರಂತೆ. ಓದಿದಂತೆಲ್ಲ ಶಿವಾಜಿಯ ಬಗೆಗಿನ ಅಭಿಮಾನ ಹೆಚ್ಚಾಗಿದೆಯಂತೆ.

ಹಿಂದೆ ಅಂಬರನಾಥದ ಕಾರಖಾನೆಯೊಂದರಲ್ಲಿ ಕೆಲಸ ಮಾಡುತ್ತಿದ್ದಾಗ ಮಹಾರಾಷ್ಟ್ರದಲ್ಲೆ ಮಹಾರಾಷ್ಟ್ರಿಗರಿಗೆ ಹೇಗೆ ಅನ್ಯಾಯವಾಗುತ್ತಿದೆ ಎನ್ನುವುದನ್ನು ಅವರು ಕಣ್ಣಾರೆ ಕಂಡರಂತೆ. ಈ ಸಮಯದಲ್ಲೆ 'ಮಾರ್ಮಿಕ'ದಲ್ಲಿ ಪ್ರಕಟವಾಗುತ್ತಿದ್ದ ಬಾಳ ಠಾಕರೆಯವರ ಲೇಖನಗಳನ್ನೋದಿ ಮಹಾರಾಷ್ಟ್ರದಲ್ಲಿ ಮಹಾರಾಷ್ಟ್ರೀಯರಿಗೇನಾದರೂ ಅಷ್ಟಿಷ್ಟು ನ್ಯಾಯ ದೊರೆಯುವುದಿದ್ದರೆ ಅದು

• 'ಎಂ. ದೀಪಾ'



ಶಿವಸೇನೆಯ ಮೂಲಕವೇ ಎಂದು ನಿರ್ಧರಿಸಿ ಶಿವಸೇನೆಯನ್ನು ಸೇರಿದರಂತೆ. ೨೮ ವರ್ಷಗಳ ನಂತರವೂ ಸಬೀರ್ ಶೇಖ್‌ರ ನಿಷ್ಠೆ ಬದಲಾಗಿಲ್ಲ.

"ಹಾಗಾದರೆ ನೀವು ನಿಮ್ಮನ್ನು ಮೊದಲು ಮಹಾರಾಷ್ಟ್ರಿಗನೆಂದು ಪರಿಗಣಿಸುವಿರೋ ಅಥವಾ ಮುಸ್ಲಿಮನೆಂದು ಪರಿಗಣಿಸುವಿರೋ?" ಎಂದು ಯಾರಾದರೂ ಕೇಳಿದರೆ ಸಬೀರ್ ಶೇಖ್, "ಎರಡೂ ಅಲ್ಲ, ಮೊಟ್ಟ ಮೊದಲು ನಾನು ಭಾರತೀಯ: ಅನಂತರ ಮಹಾರಾಷ್ಟ್ರಿಗ; ಆಮೇಲೆ ಮುಸಲ್ಮಾನ. ಹಾಗೆಂದ ಮಾತ್ರಕ್ಕೆ ಧರ್ಮದ ಬಗೆಗೆ ನನಗೆ ಕಡಿಮೆ ನಿಷ್ಠೆಯಿದೆಯೆಂದು ಮಾತ್ರ ಭಾವಿಸಬೇಡಿ. ದಿನಾಲೂ ನಾನು ನಮಾಜು ಮಾಡುತ್ತೇನೆ. ಒಂದು ದಿನವೂ ಅದನ್ನು ತಪ್ಪಿಸಿಲ್ಲ. ರಮಜಾನಿನ ಸಮಯದಲ್ಲಿ ಒಂದು ತಿಂಗಳ ಉಪವಾಸವನ್ನು ನಿಷ್ಠೆಯಿಂದ ಪಾಲಿಸಿಕೊಂಡು ಬಂದಿದ್ದೇನೆ," ಎಂದು ಉತ್ತರಿಸುತ್ತಾರೆ.

ಇವರು ಶಿವಸೇನೆಯನ್ನು ಸೇರಿದಾಗ ಮನೆತನದ ಜನರಲ್ಲೆ ಇವರ ಬಗ್ಗೆ ತಪ್ಪುಕಲ್ಪನೆ ಉಂಟಾದದ್ದು ಆಶ್ಚರ್ಯವಲ್ಲ. ಈ ಸುದ್ದಿ ತಿಳಿಯುತ್ತಲೇ, "ಏನೋ? ಶಿವಸೇನೆಯನ್ನು ಸೇರಿದ್ದೀ ಅಂತೆ; ಬಾಳ ಠಾಕರೆ ಮುಸ್ಲಿಂ ಧರ್ಮವನ್ನು ಬಿಟ್ಟು ಬಿಡು ಅಂದರೆ ಬಿಟ್ಟುಬಿಡುತ್ತಿಯೇನು ಹಾಗಾದರೆ?" ಎಂದು ಅವರ ಅಣ್ಣ ಕೇಳಿದ್ದನಂತೆ.

ಇದಾದ ಕೆಲವು ದಿನಗಳಲ್ಲಿ ಸಾರ್ವಜನಿಕ ಸಭೆಯೊಂದರಲ್ಲಿ ಮಾತನಾಡುವ ಪ್ರಸಂಗ ಬಂದಾಗ ಸಬೀರ್ ಶೇಖ್ ಈ ವಿಷಯವನ್ನು ಪ್ರಸ್ತಾಪಿಸುತ್ತಾ, "ಒಂದು ವೇಳೆ ಬಾಳ ಠಾಕರೆ ಮುಸ್ಲಿಂ ಧರ್ಮವನ್ನು ಬಿಟ್ಟಬಿಡಲು ಹೇಳಿದರೆ ನಾನು ಮುಸ್ಲಿಂ ಧರ್ಮವನ್ನು ಬಿಡುವುದಿಲ್ಲ; ಬದಲು ಶಿವಸೇನೆಯನ್ನೇ ಬಿಟ್ಟುಬಿಡುತ್ತೇನೆ. ಆದರೆ ಮುಸ್ಲಿಂ ಧರ್ಮವೂ ಒಂದೇ ರಾಷ್ಟ್ರದ್ರೋಹವೂ ಒಂದೇ ಎನ್ನುವುದು ಎಂದಾದರೂ ಸಿದ್ಧವಾದರೆ ನಾನು ಧರ್ಮವನ್ನು ಬಿಟ್ಟು ಬಿಡುತ್ತೇನೆಯೇ ಹೊರತು ಮಾತೃಭೂಮಿಗೆ ಎರಡು ಬಗೆಯುವ ಮಟ್ಟಕ್ಕೆ ಎಂದೂ ಇಳಿಯುವುದಿಲ್ಲ," ಎಂದು ಘೋಷಿಸಿದರು. ಬಾಳ ಠಾಕರೆಯವರಿಗೆ ಇವರ ಭಾವನೆ ಬಹಳ ಮೆಚ್ಚುಗೆಯಾಯಿತಂತೆ.

"ಮುಸ್ಲಿಮರ ಬಗೆಗೆ ಇಷ್ಟೆಲ್ಲಾ ಮತ್ಸರ ತುಂಬಿಕೊಂಡಿರುವವರ ಶಿವಸೇನೆಯಲ್ಲಿ ಇದ್ದುಕೊಂಡೂ ನಿಮ್ಮ ಧರ್ಮದ ಬಗೆಗಿನ ಅಭಿಮಾನವನ್ನು ಹೇಗೆ ಉಳಿಸಿಕೊಳ್ಳುತ್ತೀರಿ?" ಎಂದು ಯಾರಾದರೂ ಕೇಳಿದರೆ, "ಮತ್ಸರ? ಅದೆಂಥಾ ಮತ್ಸರ?" ಎಂದು ಸಬೀರ್ ಶೇಖ್ ಅಮಾಯಕರಾಗಿ ಕೇಳುತ್ತಾರೆ.

"ಬಾಳ ಠಾಕರೆಯವರ ಭಾಷಣಗಳಾಗಲಿ 'ಸಾಮನಾ'ದಲ್ಲಿನ ಅವರ ಲೇಖನಗಳಾಗಲಿ ಮುಸ್ಲಿಮರ ಬಗೆಗೆ ಮತ್ಸರಭರಿತವಾಗಿರುವದಿಲ್ಲವೆ?" ಎಂದಾಗ ಸಬೀರ್ ಶೇಖ್‌ರಿಂದ, "ಓಹ್! ಅವೆ? ಅವಾವವೂ ಮುಸ್ಲಿಮರ ವಿರೋಧವಾಗಿಲ್ಲ: ರಾಷ್ಟ್ರ ವಿರೋಧಿಗಳಾದ ಮುಸ್ಲಿಮರನ್ನು ಮಾತ್ರ ಅವು ಉದ್ದೇಶಿಸಿದ್ದು," ಎಂಬ ಉತ್ತರ ತಟ್ಟನೆ ಬರುತ್ತದೆ.

"ಹಾಗಾದರೆ ರಾಷ್ಟ್ರವಿರೋಧಿಗಳಾದ ಮುಸ್ಲಿ



'ದೇಶದ ಭಾರ ಹೊರುತ್ತೇವೆ'
ಎನ್ನುತ್ತಾರಿವರು
ವಾಸ್ತವ-
ಇವರ ಭಾರಕ್ಕೆ
ಕುಸಿಯುತ್ತಿದೆ
ಭಾರತ!

•ಗೊರವರ ಯಲ್ಲಪ್ಪ•

ಮರು ಯಾರು?"

"ಪಾಕಿಸ್ತಾನದತ್ತ ನಿಷ್ಠೆಯಿರುವವರು; ಕ್ರಿಕೆಟ್ ಮ್ಯಾಚಿನಲ್ಲಿ ಭಾರತ ಸೋತು ಪಾಕಿಸ್ತಾನ ಗೆದ್ದಾಗ ಸಂತೋಷದಿಂದ ಪಟಾಕಿ ಹಾರಿಸುವವರು."

"ಸರಿ, ಆದರೆ ಇಡೀ ಮುಸ್ಲಿಂ ಸಮುದಾಯದಲ್ಲಿ ಹಾಗೆ ಮಾಡುವವರು ಎಷ್ಟು ಜನ ಸಿಗುತ್ತಾರೆ?"

"ಬಹಳ ಜನ ಇರಲಿಕ್ಕಿಲ್ಲ. ನೂರರಲ್ಲಿ ಒಬ್ಬರೋ ಇಬ್ಬರೋ ಇರಬಹುದು. ಆದರೆ ಪ್ರಶ್ನೆ ಅದಲ್ಲ. ಈ ಒನ್ ಪರ್ಸೆಂಟ್ ಮಂದಿ ಕೇಕೆ ಹಾಕಿ ಕುಣಿಯುತ್ತಿದ್ದಾಗ ಉಳಿದ ೯೯ ಪರ್ಸೆಂಟ್ ಮಂದಿ ಏನು ಮಾಡುತ್ತಿರುತ್ತಾರೆ ಎನ್ನುವುದೇ ಬಹು ಮುಖ್ಯ ಪ್ರಶ್ನೆ. ನಿಜವಾಗಿಯೆಂದರೆ ಇಂಥಾ ಪ್ರಸಂಗದಲ್ಲಿ ಮುಸ್ಲಿಂ ಧುರೀಣರು ತಂತಾವೇ ಮುಂದೆ ಬಂದು ಈ ಕೃತ್ಯಗಳನ್ನು ಖಂಡಿಸಬೇಕು: ಆ ಕುರಿತು ಪತ್ರಿಕೆಗಳಲ್ಲಿ ಹೇಳಿಕೆಕೊಡಬೇಕು ಆದರೆ ಯಾರೂ ಹಾಗೆ ಮಾಡುವುದೇ ಇಲ್ಲ. ಪರಿಣಾಮವಾಗಿ ನಾಲ್ಕು ಜನರಲ್ಲಿ ಮುಸ್ಲಿಮರ ಬಗ್ಗೆ ತಪ್ಪು ಕಲ್ಪನೆ ಬೆಳೆದು ಬಿಡುತ್ತದೆ," ಎಂಬುದು ಸಬೀರ್ ಸಮಜಾಯಿಷಿ.

"ಬಾಬ್ರಿ ಮಸೀದೆಯನ್ನು ಕೆಡವಿದ ನಂತರ ಅನೇಕ ಕಡೆ ಗಲಭೆಗಳು ನಡೆದವು. ಸಾವಿರಾರು ಅಮಾಯಕ ಮುಸಲ್ಮಾನರು ವಿನಾಕಾರಣ ಪ್ರಾಣ ಕಳೆದುಕೊಂಡರು ಹೀಗೆ ಪ್ರಾಣ ಕಳೆದುಕೊಂಡವರನ್ನೂ ರಾಷ್ಟ್ರವಿರೋಧಿಗಳೆನ್ನಲಾದೀತೇ?" ಎಂದು ಯಾರಾದರೂ ಕೇಳಿದಾಗ ಅವರು, "ಅಮಾಯಕರು ವಿನಾಕಾರಣ ಬಲಿಯಾದರು. ಹಾಗಾಗಬಾರದಿತ್ತು ನಿಜ. ಆದರೆ ಹಿಂದುಗಳಿಗೆ ರಾಮನ ಬಗೆಗೆ ಎಂತಹ ನಿಷ್ಠೆಯಿದೆ ಎಂತಹ ಭಾವನೆಗಳಿವೆ ಎನ್ನುವುದು ಯಾರೂ ಅರಿಯದ ವಿಷಯವೇನಲ್ಲ. ಇಂತಹುದರಲ್ಲಿ ಯಾವುದೋ ಕಾಲದಲ್ಲಿ ಬಾಬರ್ ಕಟ್ಟಿಸಿದ ಆ ಕಟ್ಟಡವನ್ನು ಮುಸಲ್ಮಾನರು ತಂತಾವೇ ಹಿಂದುಗಳಿಗೆ ಕೊಟ್ಟುಬಿಟ್ಟಿದ್ದರೆ ಮುಸಲ್ಮಾನರ ಬಗೆಗಿನ ಗೌರವ ಇನ್ನಷ್ಟು ಹೆಚ್ಚುತ್ತಿತ್ತು; ಹಿಂದು-ಮುಸಲ್ಮಾನರಲ್ಲಿ ಸಾಮರಸ್ಯ ಬೆಳೆಯುತ್ತಿತ್ತು. ಅಂದ ಮಾತ್ರಕ್ಕೆ ಹಿಂದುಗಳು ಆ ಕಟ್ಟಡವನ್ನು ಕೆಡವಿದ್ದು ಸರಿ ಎಂದೇನೂ ನಾನು ಹೇಳುವುದಿಲ್ಲ. ಬದಲು ಮುಸಲ್ಮಾನರು ಹಿಂದುಗಳ ಭಾವನೆಯನ್ನು ಗೌರವಿಸಿದ್ದರೆ ಇಷ್ಟೆಲ್ಲ ರಾದ್ಧಾಂತ ಆಗುತ್ತಿರಲೇ ಇಲ್ಲ ಎಂದು ಹೇಳುತ್ತೇನೆ," ಎನ್ನುತ್ತಾರೆ ಸಬೀರ್ ಶೇಖ್.

ಇವು ಹಿಂದೂ ಕಟ್ಟಾಭಿಮಾನಿಗಳನ್ನು ಪುಳಕಿ

ತಗೊಳಿಸುವ ಮಾತುಗಳೇ ಸರಿ. (ಒಬ್ಬರಂತೂ 'ಸಬೀರ್ ಶೇಖ್ ಯಾವಾಗಲೂ ಹಿಂದೂ ಮತಾಂಧರಿಗಿಂತ ಹೆಚ್ಚು ಮತಾಂಧರಂತೆ ಮಾತನಾಡುತ್ತಾರೆ' ಎಂದು ಹೇಳಿದರು)

"ಮುಸಲ್ಮಾನ ಧರ್ಮಕ್ಕೆ ಸೇರಿದವರಾದ ನೀವು ಶಿವಸೇನೆಯಲ್ಲಿದ್ದುಕೊಂಡೂ ಮುಸ್ಲಿಂ ಸಮುದಾಯದ ಹಿತವನ್ನು ಹೇಗೆ ರಕ್ಷಿಸುತ್ತೀರಿ? ಮುಸಲ್ಮಾನರು ಬೀದಿಗಳಲ್ಲಿ ನಮಾಜು ಮಾಡುವುದರ ಕುರಿತು ಶಿವಸೇನೆಯ ಧೋರಣೆ ಏನಿದೆಯೆನ್ನುವುದು ನಿಮಗೆ ಗೊತ್ತೇ ಇದೆ. ಅದನ್ನು ನೀವು ಹೇಗೆ ಬೆಂಬಲಿಸುತ್ತೀರಿ? ಬೆಂಬಲಿಸಿದರೆ ಸಮಾಜಕ್ಕೆ ಎರಡುಬಗೆದಂತಾಗುತ್ತದೆ. ಬೆಂಬಲಿಸದೆ ಇದ್ದರೆ ಪಕ್ಷವಿರೋಧಿಯಾದಂತಾಗುತ್ತದೆ," ಎಂದಾಗ ಸಬೀರ್ ಶೇಖ್ ಹೇಳುತ್ತಾರು "ಮುಸಲ್ಮಾನರು ಬೀದಿಗಳಲ್ಲಿ ನಮಾಜು ಮಾಡುತ್ತಾರೆ ಎನ್ನುವುದಕ್ಕೆ ಪ್ರತಿಯಾಗಿ ಹಿಂದುಗಳು ಬೀದಿಗಳಲ್ಲಿ ಆರತಿ ಮಾಡುವ ಸ್ಥಿತಿ ಹೊಸದಾಗಿ ಶುರುವಾಯಿತು. ಆದರೆ ಮುಸಲ್ಮಾನರು ಬೀದಿಗಳಲ್ಲಿ ನಮಾಜು ಮಾಡುವುದು ಇತರ ಧರ್ಮದವರನ್ನು ಕೆರಳಿಸಲಿಕ್ಕಲ್ಲ; ಅವರಿಗೆ ನಮಾಜು ಮಾಡಲು ಮಸೀದೆಗಳಲ್ಲಿ ಸ್ಥಳ ಇಲ್ಲ ಎನ್ನುವುದು ಶಿವಸೇನೆಗೆ ತಾನು ಅಧಿಕಾರಕ್ಕೆ ಬಂದ ಮೇಲೆ ಗೊತ್ತಾಯಿತು. ಪ್ರಾರ್ಥನೆಗೆ ಎಲ್ಲರಿಗೂ ಸ್ಥಳ ದೊರೆಯುವ ಹಾಗೆ ಮಸೀದೆಗಳನ್ನು ವಿಸ್ತರಿಸಲು ಅನುಮತಿ ನೀಡಬೇಕೆಂಬ ಬಗ್ಗೆ ಪ್ರಯತ್ನಗಳು ನಡೆಯುತ್ತಾ ಇವೆ."

ವಾಸ್ತವವಾಗಿ ಶಿವಸೇನೆಯ ಬಗೆಗಿನ ನಿಷ್ಠೆಯೊಂದೇ ಸಬೀರ್ ಶೇಖ್‌ರ ಬಂಡವಾಳವಲ್ಲ. ಅವರು ಅಂಬರನಾಥದಿಂದ ಆರಿಸಿ ಬಂದಿದ್ದಕ್ಕೆ ಬೇರೆ ಕಾರಣಗಳೂ ಇವೆ. ಶಿವಾಜಿಯ ಕಟ್ಟಾ ಅಭಿಮಾನಿಗಳೆಂಬ ಖ್ಯಾತಿ ಅವರಿಗಿದೆ. ಸ್ವತಃ ಪರ್ವತಾರೋಹಿಗಳಾದ ಸಬೀರ್ ಶೇಖ್ ಪರ್ವತಾರೋಹಣದ ಅನೇಕ ಶಿಬಿರಗಳನ್ನು ಏರ್ಪಡಿಸಿದ್ದಾರೆ. ಇದೆಲ್ಲಕ್ಕಿಂತ ಹೆಚ್ಚಾಗಿ ಅವರ ಕೈಗಳು ಶುದ್ಧವಾಗಿವೆ. ಯಾರೂ ಶೇಖ್‌ರ ಚಾರಿತ್ರ್ಯವನ್ನು ಪ್ರಶ್ನಿಸುವ ನೈತಿಕ ಧೈರ್ಯವನ್ನು ತೋರಿಸಿಲ್ಲ.

ಸಬೀರ್ ಶೇಖ್‌ರನ್ನು ಪಾಖಂಡನೆಂದು ಬಗೆಯುವವರೂ ಇದ್ದಾರೆ. ಅಂಥವರ ಬಗೆಗೆ ಅವರು ದಿವ್ಯ ನಿರ್ಲಕ್ಷ್ಯದಿಂದಲೆ ಇರುತ್ತಾರೆ. ಆದರೆ ಯಾರಾದರೂ ಮೇಲಿಂದ ಮೇಲೆ ಕೆದಕಿ ಕೇಳಿದಾಗ ಸಬೀರ್ ಶೇಖ್ ಹೇಳುತ್ತಾರೆ: "ನಾನೊಬ್ಬ ಹಿಂದುಸ್ತಾನಿ; ಹೀಗಾಗಿ ಹಿಂದುತ್ವವಾದಿ. ಮತ್ತೆ, ಹಿಂದುತ್ವಕ್ಕೂ ಧರ್ಮಕ್ಕೂ ಸಂಬಂಧವೇ ಇಲ್ಲ. ಹಿಂದುತ್ವವೆನ್ನುವುದು ಸಂಸ್ಕೃತಿಗೆ ಸಂಬಂಧಿಸಿದ್ದೆ ಹೊರತು ಧರ್ಮಕ್ಕಲ್ಲ. ನಮ್ಮ ಧರ್ಮಗಳು ಬೇರೆ ಬೇರೆಯಾಗಿರಬಹುದು; ಆದರೆ ನಮ್ಮೆಲ್ಲರ ಸಂಸ್ಕೃತಿ ಒಂದೆ. ಅದು ಜೀವನದ ಅವಿಭಾಜ್ಯ ಅಂಗ. ಅದನ್ನೆಂದೂ ಬದಲಿಸಲಾಗದು."

ಹೌದು, ನಾವು ಧರ್ಮವನ್ನು ಬದಲಿಸಬಹುದು, ಆದರೆ ಸಂಸ್ಕೃತಿಯನ್ನು ಎಂದಾದರೂ ಬದಲಿಸಲಾದೀತೆ? ●

(ಆಧಾರ: 'ಟೈಮ್ಸ್ ಆಫ್ ಇಂಡಿಯಾ'ದಲ್ಲಿ ರಾಧಾ ರಾಜಾಧ್ಯಕ್ಷರ ಲೇಖನ)

---

*ಹೆಂಗಸು ಗಂಡಸನ್ನು ಮದುವೆಯ ಕಾರಣದಿಂದ ಒಪ್ಪಿಕೊಳ್ಳುತ್ತಾಳೆ. ಇನ್ನು ಗಂಡಸು? ಹೆಂಗಸಿಗೋಸ್ಕರ ಮದುವೆಯನ್ನು ಒಪ್ಪಿಕೊಳ್ಳುತ್ತಾನೆ.*

– ಗ್ರೆಗೊರಿ ಮೆಸನ್

●

*ವಿವಾಹ ಬಂಧನದ ಸರಪಣಿ ಅದೆಷ್ಟು ಭಾರವಾದದ್ದೆಂದರೆ ಅದನ್ನು ಹೊರಲು ಇಬ್ಬರಂತೂ ಬೇಕೇಬೇಕು. ಒಮ್ಮೊಮ್ಮೆ ಮೂರನೆ ವ್ಯಕ್ತಿಯೂ ಬರಬೇಕಾಗುತ್ತದೆ.*

– ಡ್ಯೂಮಾ

---

ಮಾತು-ಮಾಣಿಕ್ಯ

೧೮

# ಬೆನ್ನು ಬಲದ ಪ್ರತೀಕ!

ಮಮತೆಯ ಮೂರ್ತ ಸ್ವರೂಪಳೆನಿಸಿದ ಮಾತೆಯ ಬೆನ್ನು ಬಿಡದೆ ಮತ್ತೆ ಮತ್ತೆ ಅವಳ ಬೆನ್ನು ಹತ್ತಿ ಓಡಾಡುವುದು ಮಗುವಿನ ಸಾಮಾನ್ಯ ಅಭ್ಯಾಸ. ಯಾವನಾದರೊಬ್ಬ ನಮ್ಮನ್ನು ಒಂದೆ ಸಮನೆ ಹಿಂಬಾಲಿಸಿ ಬರುತ್ತಿದ್ದರೆ ಹರಿಶ್ಚಂದ್ರನನ್ನು ಬೆನ್ನು ಹತ್ತಿದ ನಕ್ಷತ್ರಕನಂಥವ ಎಂದು ಆತನನ್ನು ಮೂದಲಿಸುತ್ತೇವೆ. ಅಂದಿನ ಹರಿಶ್ಚಂದ್ರ ನಾವಾಗಿರಲಿ ಬಿಡಲಿ ನಕ್ಷತ್ರಕನೊಬ್ಬ ನಮ್ಮ ಪಾಲಿಗಿರಲಿ ಇಲ್ಲದಿರಲಿ, ನಮ್ಮ ನೆರಳು ಮಾತ್ರ ನಮ್ಮ ಬೆನ್ನು ಬಿಡದು. ಭೂತಬಾಧೆಗೆ ಒಳಗಾದವರು ತಮ್ಮನ್ನು ಅತೃಪ್ತ ಪಿಶಾಚಿ ಬೆನ್ನು ಹತ್ತಿ ಕಾಡುತ್ತಿದೆ ಎಂದು ದೂರುತ್ತಾರೆ.

'ಬೆನ್ನು ಹತ್ತು' ಎಂಬ ಪದವನ್ನು ಇನ್ನೊಂದು ಅರ್ಥದಲ್ಲೂ ಬಳಸಲಾಗುತ್ತದೆ. ಶಾಲೆಯ ಅಭ್ಯಾಸವನ್ನು ಕಡೆಗಣಿಸಿ, ಚಿತ್ರಕಲೆ, ಇಲ್ಲವೆ, ಸಂಗೀತದಂತಹ ಹವ್ಯಾಸವನ್ನು ಇರಿಸಿಕೊಂಡವನನ್ನು ಅದರ ಬೆನ್ನು ಹತ್ತಿದ್ದಾನೆ ಎಂದು ಬಣ್ಣಿಸುತ್ತೇವೆ. ಅದೇ ತೆರನಾಗಿ ಇಸ್ಪೀಟನಂತಹ ಚಟ ಇಲ್ಲವೆ ರಾಜಕೀಯದಂತಹ ಉಪದ್ವ್ಯಾಪದ ಬೆನ್ನು ಹತ್ತುವವರಿಗೂ ಕೊರತೆ ಇಲ್ಲ.

ಭೂತ ಪಿಶಾಚಿಗಳು ಬೆನ್ನು ಹತ್ತಿದರೂ ಅವು ಕಣ್ಣಿಗೆ ಕಾಣದಂಥವು. ಆದರೆ ಮುದ್ದು ಮಕ್ಕಳು ತಮ್ಮನ್ನು ತಾವೇ ಕ್ರೀಡೆಯಲ್ಲಿ ತೊಡಗಿಸಿಕೊಳ್ಳಲು ಪ್ರತ್ಯಕ್ಷವಾಗಿ ಬೆನ್ನು ಹತ್ತುತ್ತವೆ. ಅರ್ಥಾತ್ ತಮ್ಮ ತಾತಂದಿರ ಬೆನ್ನೇರುತ್ತವೆ. "ಕುರಿ ಮರಿ ಬೇಕೆ ಕುರಿ ಮರಿ?" ಎಂದು ಕೇಳುತ್ತವೆ. ಇಂಥ ಮೋಜು ಮಗುವಿಗೂ ತಾತನಿಗೂ ತರುವ ಆನಂದಕ್ಕೆ ಪಾರವೇ ಇಲ್ಲ. ಆದರೇನು? ಇಂದಿನ ದಿನಮಾನದ "ನಾವಿಬ್ಬರು ನಮಗಿಬ್ಬರು" ಎಂಬ ನವೀನ ಧಾಟಿಯ ಸಂಕುಚಿತ ಕೌಟುಂಬಿಕ ವ್ಯವಸ್ಥೆಯ ಹಿನ್ನೆಲೆಯಲ್ಲಿ ಇಂತಹ ದೃಶ್ಯ ತೀರ ಅಪರೂಪ ಎಂದರೆ ತಪ್ಪಾಗದು.

ಕವಿ ಅಂಬಿಕಾತನಯದತ್ತರ ಕಲ್ಪನಾ ವಿಲಾಸ "ಭೃಂಗದ ಬೆನ್ನೇರಿ ಬಂತು." ಸಾವಿರ ಕುದುರೆಯ ಸರದಾರರೆನಿಸಿದ ವೀರಾಧಿವೀರರು ಕುದುರೆಯ ಬೆನ್ನೇರಿ ಕಾಳಗಕ್ಕೆ ಅಣಿಯಾಗುತ್ತಿದ್ದ ಕಾಲವೊಂದಿತ್ತು. ಅಂದು ರಾಜಮಹಾರಾಜರ ಸಡಗರದ ಮೆರವಣಿಗೆಯ ಕಾಲಕ್ಕೆ ಆನೆಯ ಬೆನ್ನ ಮೇಲೆ ಅಂಬಾರಿ. ಅದರೊಳಗೆ ಆ ಗೌರವಾನ್ವಿತ ವ್ಯಕ್ತಿ. ಹೀಗೆ ಆನೆಯ ಬೆನ್ನೇರುವುದು ಗೌರವದ ಸೂಚಕವಾದರೆ, ಕತ್ತೆಯ ಬೆನ್ನ ಮೇಲೆ ಬಾಲದ ಕಡೆಗೆ ಮುಖವನ್ನು ಮಾಡಿ ಕೂಡಿಸಿ ಮೆರೆಸುವುದು ವ್ಯಕ್ತಿಗೆ ಅವಮಾನ ಪಡಿಸುವುದರ ದ್ಯೋತಕವೆನಿಸಿದೆ. ಇವೆಲ್ಲದಕ್ಕೂ ಕಳಸವಿಟ್ಟಂತೆ ನಮ್ಮ ಪುರಾಣಗಳು ಬಣ್ಣಿಸುವ ಮೃತ್ಯುದೇವತೆ ಯಮರಾಯ ಕೋಣನ ಬೆನ್ನ ಮೇಲೆ ಸವಾರಿ ಮಾಡಿ ಬರುವ ಮಹರಾಯ!

ಅಂದ ಚೆಂದವಾದ ಕುಸುರಿನ ಕಲಾಕೃತಿಯೊಂದು ಉಂಟು ಮಾಡುವ ಅಚ್ಚರಿ ಬೆರಳು ಕಚ್ಚುವಂಥದು ಎಂದು ಬಣ್ಣಿಸಲಾಗುತ್ತದೆ. ಇಂಥ ಒಂದು ಪದ ಪ್ರಯೋಗ ಆಂಗ್ಲ ಭಾಷೆಯಲ್ಲಿ ಬೇರೊಂದು ಅರ್ಥದಲ್ಲಿದೆ "Back Biting" ಎನ್ನುತ್ತಾರೆ ಆ ಜನ. ಬೆನ್ನು ಕಚ್ಚುವುದು ಎಂಬ ಇದರ ಅನುವಾದ ಕನ್ನಡದಲ್ಲಿ ವಿಚಿತ್ರವೆನಿಸೀತು. ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ ಎಂಬ ಬಸವಣ್ಣನವರ ವಚನ ಆತ್ಮಸ್ತುತಿ ಮತ್ತು ಪರನಿಂದೆ ಗೈಯುವುದು ಬೇಡ ಎನ್ನುತ್ತದೆ. ಇಲ್ಲಿನ "ಇದಿರ" ಎಂಬ ಪದವನ್ನು ಎದುರು ಎಂದು ಬದಲಿಸಿದರೆ ಓರ್ವನನ್ನು ಅವನೆದುರಿಗೆ ಬಯ್ಯದೆ, ಹಿಂದಿನಿಂದ ಟೀಕಿಸು ಎಂದು ಅಪಾರ್ಥ ಹೊರಡುತ್ತದೆಯಲ್ಲ, ಅದುವೆ "ಬೆನ್ನು ಕಚ್ಚು"ವುದು ಅರ್ಥಾತ್ ಇನ್ನೊಬ್ಬರ ವಿಷಯದಲ್ಲಿ ಅಲ್ಲದ ಸಲ್ಲದ ಚಾಡಿಯನ್ನು ಹರಡಿ ಚಾರಿತ್ರ್ಯವಧೆಯಲ್ಲಿ ತೊಡಗುವುದು.

ಬೆನ್ನು ಬಲದ ಪ್ರತೀಕ. ಚುನಾವಣೆಯಲ್ಲಿ ಹುರಿಯಾಳುವಿನ ಗೆಲುವಿಗೆ ಕಾರಣ ಜನತೆಯ ಬೆಂಬಲ. ರಾಷ್ಟ್ರಪತಿಗ

ಳಂತಹ ಪ್ರಮುಖ ವ್ಯಕ್ತಿಗಳು ಸಂಚಾರಕ್ಕೆ ಹೊರಟಾಗ ಅವರ ಮುಂಚೂಣಿಯಲ್ಲಿ ಸಶಸ್ತ್ರ ಆರಕ್ಷರು ಇರುವಂತೆ ಅವರ ಹಿಂಬದಿಗೆ ಆರಕ್ಷರು ಬೆಂಗಾವಲು ಒದಗಿಸುತ್ತಾರೆ. "ಕಣ್ಗೆ ಕಾಮನ ರಕ್ಷೆ, ಬೆನ್ಗೆ ಭೀಮನ ರಕ್ಷೆ, ಮುಂಗೈಗೆ ಮುರಾರಿ ರಕ್ಷೆ" ಎಂದು ತಾಯಿ ಮಗುವನ್ನು ಹರಸುವಂತೆ ಬೆಂಗಾವಲು ಪಡೆಯವರು ಭೀಮ ರಕ್ಷೆಯನ್ನು ಕಲ್ಪಿಸುವಲ್ಲಿ ನಿರಂತರ ನಿರತರು.

ನಮ್ಮನ್ನು ಸಮರ್ಥಿಸುವವರನ್ನು ನಮ್ಮ "ಬೆನ್ನು ಕಟ್ಟಲು ಇವರುಂಟು" ಎಂದು ಪರಿಗಣಿಸಿ ನೆಮ್ಮದಿಯ ಉಸಿರುಬಿಡುತ್ತೇವೆ- ಪಾಂಡವಪಕ್ಷಪಾತಿಯಾದ ಶ್ರೀ ಕೃಷ್ಣ ಅವರ ಬೆನ್ನು ಕಟ್ಟಲು ಸತತವಾಗಿ ಬಗೆಬಗೆಯ ಕ್ರಮಗಳನ್ನು ಕೈಕೊಂಡಿದ್ದರಿಂದ ಪಾಂಡವರಿಗೆ ಗೆಲುವು ಕಟ್ಟಿಟ್ಟ ಬುತ್ತಿಯಾಯಿತು. ತಮ್ಮ ಬೆನ್ನು ತಮಗೆ ಕಾಣದಿದ್ದರೂ ರಣಾಂಗಣದಲ್ಲಿ ಸೋತ ಸೈನಿಕರು ತಮ್ಮ ಬೆನ್ನು ತೋರಿಸುತ್ತಾರೆ ಎಂದರೆ ಕಾಲಿಗೆ ಬುದ್ಧಿ ಹೇಳುತ್ತಾರೆ ಎಂದರ್ಥ. ಚಳಿಯನ್ನು ಸಹಿಸಲಾರದ ಜನ ಸೂರ್ಯನತ್ತ ಬೆನ್ನೊಡ್ಡಿ ಬಿಸಿಲು ಕಾಯಿಸುತ್ತಾರೆ. "ಅಗ್ನೆ ವಹ್ನಿಃ ಪೃಷ್ಠೆ ಭಾನೂ ರಾತ್ರೌ ಚಿಬುಕ ಸಮರ್ಪಿತ ಜಾನುಃ" (ಎದುರಿಗೆ ಬೆಂಕಿ, ಬೆನ್ನಿಗೆ ಭಾಸ್ಕರ, ರಾತ್ರಿಯಲ್ಲಿ ಮೊಳಕಾಲುಗಳ ನಡುವೆ ಗದ್ದ) ಎಂದು ಬಣ್ಣಿಸುವ "ಭಜಗೋವಿಂದಂ" ಸಾಲು ಹಳೆಯ ತಲೆಮಾರಿನ ಹಳ್ಳಿಗರ ಅಭ್ಯಾಸಕ್ಕೆ ಹಿಡಿದ ಕೈಗನ್ನಡಿ. ಈಗ ಇದೆಲ್ಲ ಕಣ್ಮರೆ. ನಗರ ಪ್ರದೇಶಗಳಲ್ಲಿ ನೆಲೆಯೂರಿರುವ ಏರ್‌ಕಂಡಿಶನ್ ವ್ಯವಸ್ಥೆ ಗ್ರಾಮೀಣ ಭಾಗದಲ್ಲೂ ಪದಾರ್ಪಣ ಮಾಡುವ ದಿನ ದೂರವಿಲ್ಲ ತಾನೆ?

ಸಜೀವಿಗಳಿಗೆ ಹೇಗೋ ಹಾಗೆಯೇ ನಿರ್ಜೀವಿಗಳಿಗೂ ಬೆನ್ನು ಉಂಟು.

ಇದರಿಂದಾಗಿಯೇ "ಹೆಚ್ಚಿನ ವಿವರ ಬೆನ್ನು ಪುಟದ ಮೇಲೆ," "ಕಾಗದದ ಬೆನ್ನು ಮಗ್ಗಲಿಗೆ ಏನನ್ನೂ ಬರೆಯಕೂಡದು," ಎಂಬಿವೇ ಮುಂತಾದ ನಿರ್ದೇಶನಗಳು ಕಂಡುಬರುವವು. ಒಡಹುಟ್ಟಿದ ತಮ್ಮನನ್ನು "ಬೆನ್ನಿಗೆ ಬಿದ್ದವ" ಎಂದು ಕರೆಯುವ ರೂಢಿ. ಸಂಸ್ಕೃತ ಶಬ್ದ "ಅನುಜ"ದಲ್ಲಿ ಇದೇ ಭಾವದ ಮಾರ್ದನಿ.

"ಕಣ್ಣಿಗೆ ಕಣ್ಣು ಹತ್ತಲಿಲ್ಲ" ಎಂಬ ಪದ ಪ್ರಯೋಗ ನಿದ್ದೆಗೇಡಿತನವನ್ನು ಅರುಹುವಂತೆ "ಹಾಸಿಗೆಗೆ ಬೆನ್ನು ಕೂಡ ಹಚ್ಚಲಿಲ್ಲ" ಎಂಬುದು ಅಗತ್ಯವಾಗಿ ಬೇಕಿದ್ದ ವಿಶ್ರಾಂತಿಯ ಅಭಾವವನ್ನು ಸೂಚಿಸುತ್ತದೆ. ಪಾರ್ಶ್ವವಾಯುವಿನಂತಹ ದೀರ್ಘಕಾಲದ ವ್ಯಾಧಿಗಳಿಗೊಳಗಾದ ರೋಗಿ ಹಾಸಿಗೆಯ ಮೇಲೆ ಒರಗಿ ಒರಗಿ ಬೆನ್ನು ಕೆತ್ತಿ ಕೊನೆಗೊಮ್ಮೆ "ಶಯ್ಯಾ ವ್ರಣ" ("ಬೆಡ್ ಸೋರ್")ಕ್ಕೆ ತುತ್ತಾಗುವ ಸರದಿ ತಪ್ಪಿದ್ದಲ್ಲ. ಭದ್ರವೆನಿಸುವ ಈ ಬೆನ್ನು ಅಂಥ ಕಾಲಕ್ಕೆ ಛಿದ್ರಗಳಿಗೆ ತವರಾಗುವ ದುರ್ದೈವಿ. ಗೀತೆಯಲ್ಲಿ "ಸಮಕಾಯಶಿರೋಗ್ರೀವಂ" ಎಂದು ಮೊದಲಾಗಿ ಬಣ್ಣಿಸಿದಂತೆ ಯೋಗಿಯು ಏಕಾಗ್ರ ಚಿತ್ತದಿಂದ ಧ್ಯಾನದಲ್ಲಿ ನಿರತರಾಗಲು ಬೆನ್ನು ಕತ್ತು ತಲೆಗಳನ್ನು ಸರಳರೇಖೆಯಂತೆ ನೆಟ್ಟಗೆ ಇರಿಸುವದು ಅತ್ಯಗತ್ಯ. ಆದರೆ ಮುಪ್ಪಿನಿಂದಾಗಿ, ಇಲ್ಲವೆ ಅಂಗವಿಕಲತೆಯಿಂದಾಗಿ, ಬೆನ್ನು ಬಾಗಿ "ಗೂನು ಬೆನ್ನಾ"ಗುವುದುಂಟು. ಹಿಂದಿನ ಕಾಲದ ರಾಣಿವಾಸದಲ್ಲಿ "ಗೂನು ಬೆನ್ನಿ"ನವರೂ ಕುಳ್ಳರೂ ಮೋಜನ್ನು ಒದಗಿಸುವ ಸಜೀವ ಉಪಕರಣದಂತಿದ್ದರು. ಕೈಕೆಯಿಯ ವಿಮಲ ಚಿತ್ತವನ್ನು ಕದಡುವಂತೆ ಕಿವಿಯೂದಿದ ಮಂಥರೆ ಕೂಡ ಇಂಥ ಗೂನು ಬೆನ್ನಿನವಳು.

ದುಷ್ಯಂತನು ಆಶ್ರಮ ಮೃಗವನ್ನು ಬೇಟೆಗೆಂದು ಬೆನ್ನಟ್ಟಿಕೊಂಡು ಹೋದುದರ ಪರ್ಯವಸಾನವೆ ಕಣ್ವರ ಅನುಪಸ್ಥಿತಿಯಲ್ಲಿನ ದುಷ್ಯಂತ ಶಕುಂತಲೆಯರ ಗಾಂಧರ್ವ ವಿವಾಹ.

ಭದ್ರತೆಯ ದ್ಯೋತಕವೆನಿಸಿದ ಬೆನ್ನಲ್ಲಿ (ಹಿಂದಿನಿಂದ ಬಂದು ಚೂರಿಯಿಂದ) ಇರಿಯುವುದು ನೀಚತನದ ಪ್ರವೃತ್ತಿ; ವಂಚಕತನದ ದುಷ್ಕೃತಿ. ಈಗೀಗ ವೈಯಕ್ತಿಕ ದ್ವೇಷದಿಂದಾಗಿಯೋ ಕೋಮುವಾರು ಗಲಭೆಗಳ ಕಲುಷಿತ ವಾತಾವರಣ ದಿಂದಾಗಿಯೋ ಬೆನ್ನಲ್ಲಿ ಇರಿಯುವುದು ದಿನ ನಿತ್ಯದ ಸುದ್ದಿ. ಇಂಥ ಅನಾಗರಿಕ ಕೃತ್ಯವು ಸೌದರ್ಯ ಸೌಜನ್ಯ ಸಾಮರಸ್ಯ ಸಾಮಂಜಸ್ಯಗಳ ನಾಗರಿಕತೆಯ ಮೇಲೆ ದಾಳಿಯಿಟ್ಟು ತಾಂಡವವಾಡುತ್ತಿರುವುದು ತುಂಬ ಶೋಚನೀಯ. ಸಾಮರ್ಥ್ಯದ ಸಂಕೇತವಾದ ಬೆನ್ನು ಇಂತು ಅಪಾಯಕ್ಕೆ ಒಳಗಾಗುತ್ತಿದ್ದರೆ, ಈ ಬೆನ್ನು ಕಾಯುವ ಕೆಲಸವನ್ನು ವಹಿಸಿಕೊಳ್ಳಲು ಸಾಮಾಜಿಕರಲ್ಲಿ ನೈತಿಕ ಮೌಲ್ಯಗಳ ಪ್ರಜ್ಞೆ ಮೂಡಿಬರಲೆಂದು ಆಶಿಸಬಹುದಲ್ಲವೆ?



ಫೈಲೋಕ್ಸೆರಾ ವರ!

# ದ್ರಾಕ್ಷಿಯ ಮರು ಸೃಷ್ಟಿ....

"ದ್ರಾಕ್ಷಿ ಬಳ್ಳಿಗಳ ಮೇಲೆ ಅತ್ಯಂತ ಭಯಂಕರವಾದ ಹೊಸ ಶತ್ರುವೊಂದು ಕಾಣಿಸಿಕೊಂಡಿದ್ದು ರ್ಹೋನ್ ಪ್ರಾಂತದಲ್ಲೆಲ್ಲ ಇದರ ಹಾವಳಿ ತೀವ್ರವಾಗುತ್ತಿದೆ. ಕೇವಲ ಮೂರು ವರ್ಷಗಳ ಅವಧಿಯಲ್ಲಿ ನೂರಾರು ಹೆಕ್ಟೇರುಗಳಷ್ಟು ದ್ರಾಕ್ಷಿ ಸಂಪೂರ್ಣವಾಗಿ ಹಾಳಾಗಿ ಹೋಗಿದೆ ಎಂದರೆ ಇದರ ಭೀಕರತೆಯನ್ನು ಅಂದಾಜು ಮಾಡಬಹುದು...." ಮಾಂಶಿಯರ್ ಪ್ಲಾಂಖನ್ ಪ್ಯಾರಿಸ್ಸಿನ ವಿಜ್ಞಾನ ಅಕಾಡೆಮಿಯ ಸಭೆಯನ್ನುದ್ದೇಶಿಸಿ ೧೮೬೮ರ ಆಗಸ್ಟ್ ಇರಂದು ಮಾತನಾಡುತ್ತಿದ್ದ..... "ಮೇ-ಜೂನ್ ಸುಮಾರಿಗೆ ಆರೋಗ್ಯದಿಂದ ನಳ-ನಳಿಸುತ್ತಿರುವ ಬಳ್ಳಿಗಳ ಎಲೆಗಳು ಏಕೋ ಏನೋ ಹಳದಿಯಾಗಿ, ಕೆಂಪಾಗಿ ಆಗಸ್ಟ್ ಹೊತ್ತಿಗೆ ಉದುರಿ ಬೀಳುತ್ತವೆ. ದೃಢವಾದ ಕಾಂಡಗಳೂ ಸೊರಗತೊಡಗುತ್ತವೆ. ಕೆಲವು ಬದುಕುಳಿಯಲು ಹೋರಾಟ ನಡೆಸಿದರೂ ಸಾಧ್ಯವಾಗದೆ ಅವುಗಳ ಬೆಳವಣಿಗೆ ಕುಂಠಿತವಾಗುತ್ತದೆ. ಚಳಿಗಾಲದಲ್ಲಿ ಸೊರಗುವ ಈ ಕ್ರಿಯೆ ನಿಂತರೂ ಮುಂಬರುವ ಋತುವಿನಲ್ಲಿ ಒಡೆಯುವ ಮೊಗ್ಗುಗಳು ತುಂಬಾ ಅಶಕ್ತವಾಗಿರುವುದರಿಂದ ಬಳ್ಳಿಯು ಸಂಪೂರ್ಣವಾಗಿ ಸತ್ತುಹೋಗುತ್ತದೆ. ನಿಮಗೆಲ್ಲ ಅಚ್ಚರಿಯಾಗಬಹುದು ಈ ದರಿದ್ರ ಪೀಡೆಯಿಂದಾಗಿ ಸೇಂಟ್ ಮಾರ್ಟಿನ್‌ನಲ್ಲಿ ಏಳೆಂಟು ಹೆಕ್ಟೇರುಗಳಷ್ಟು ದ್ರಾಕ್ಷಿ ಬಳ್ಳಿಗಳ 'ಸ್ಮಶಾನ'ವೇ ನಿರ್ಮಾಣವಾಗಿದೆ...." ಫ್ರಾನ್ಸಿನಲ್ಲಿ ದ್ರಾಕ್ಷಿಗೊದಗಿದ ಸ್ಥಿತಿಯಿಂದ ಪ್ಲಾಂಖನ್ ನಿಜಕ್ಕೂ ಆತಂಕಿತನಾಗಿದ್ದ.

## ಕಾಣಿಸದ ಕಾರಣ

ದ್ರಾಕ್ಷಿ ಬಳ್ಳಿಗಳು ಏಕೆ ಸೊರಗುತ್ತವೆ ಎಂಬುದೇ ನಿಗೂಢ ರಹಸ್ಯವಾಗಿತ್ತು. ಬಳ್ಳಿಗಳ ಮೇಲೆಲ್ಲೂ ಬ್ಯಾಕ್ಟೀರಿಯಾ, ಶಿಲೀಂಧ್ರಗಳ ಆಕ್ರಮಣವಾಗಲಿ, ಕೀಟಗಳ ಕೊರೆತವಾಗಲಿ ಕಾಣುತ್ತಿರಲಿಲ್ಲ. ಆದರೂ ಬಳ್ಳಿಗಳು ಒಣಗುತ್ತಿದ್ದವು! ವಿಜ್ಞಾನಿಗಳೆಲ್ಲ ಕಾಣಿಸದ ಕಾರಣಕ್ಕಾಗಿ ತಡಕಾಡತೊಡಗಿದರು. ಕಾರಣ ಹುಡುಕುವುದರಲ್ಲಿಯೇ ಹಗಲೂ-ರಾತ್ರಿ ನಿರತನಾಗಿದ್ದ ಪ್ಲಾಂಖನ್, ರೋಗ

• ಸೋಮಶೇಖರ ಎಸ್.ರುಳಿ

ಗ್ರಸ್ತ ಗಿಡಗಳನ್ನು ಬೇರು ಸಹಿತ ಕಿತ್ತು ಅವುಗಳನ್ನು ಪರೀಕ್ಷಿಸತೊಡಗಿದ. ಕೆಲವು ಗಿಡಗಳ ಬೇರಿನ ಸಮೂಹದಲ್ಲಿ ಇರಬೇಕಾದ ಸೂಕ್ಷ್ಮವಾದ 'ಹೀರು ಬೇರುಗಳು (absorptive rootlets)' ಇಲ್ಲದೇ ಇರುವುದು ಆತನ ಗಮನಕ್ಕೆ ಬಂತು. ಇನ್ನು ಕೆಲವು ಗಿಡಗಳಲ್ಲಿ 'ಹೀರುಬೇರು'ಗಳಿದ್ದರೂ ಅವು ಕಪ್ಪಾಗಿ, ಕರಕಲಾಗಿ ಹೋಗಿದ್ದವು. ಇನ್ನು ಕಾಂಡದ ಕೆಳಭಾಗದಲ್ಲಿದ್ದ ಚಿಕ್ಕ ಬೇರುಗಳ ಮೇಲೆ ಅಲ್ಲಲ್ಲಿ ಗಂಟುಗಳು ಉಂಟಾಗಿದ್ದುದು ಕಾಣಿಸಿತು. ನಿಜಕ್ಕೂ ಇಂಥ ಸ್ಥಿತಿಯ ಬೇರುಗಳುಳ್ಳ ಗಿಡಗಳು ಸೊರಗಿ,

ಒಣಗುತ್ತಿರುವುದರಲ್ಲಿ ಪ್ಲಾಂಖನ್ನನಿಗೆ ಆಶ್ಚರ್ಯ ವೇನೂ ಕಂಡುಬರಲಿಲ್ಲ. ಗ್ಯಾಸ್ಪಾರಿನ್ ಎಂಬ ಉತ್ಸಾಹಿ ಪೋಷಕಾಂಶಗಳ ಕೊರತೆ, ಭೀಕರವಾದ ಬರಗಾಲದ ನಂತರ ತೀವ್ರ ಕೊರೆತದ ಚಳಿಗಾಲ ಗಳೇ ದ್ರಾಕ್ಷಿ ಗಿಡಗಳ ಈ ದಯನೀಯ ಪರಿಸ್ಥಿತಿಗೆ ಕಾರಣವೆಂದು ವಾದಿಸಿದ. ಕಲ್ಪನೆಗೆ ನಿಲುಕದೆ ಅಸಹಾಯಕರಾದ ಜನ ಇದು 'ಯಾವುದೋ ರೋಗ'ವಿರಬೇಕೆಂದು ಅಭಿಪ್ರಾಯಪಟ್ಟು ಕೈಚೆಲ್ಲಿದರು. ಈ ಸಮಸ್ಯೆ ಮೊಟ್ಟಮೊದಲು ಕಾಣಿಸಿಕೊಂಡದ್ದು ೧೮೬೫ರಲ್ಲಿ ಎಂದು ಗೊತ್ತಿದ್ದೂ ಕೆಲವರು ೧೮೬೮ರ ಮೇನಲ್ಲಿ ಬಿದ್ದ ಇಬ್ಬನಿಯಿಂದಲೇ ಹೀಗಾಯಿತೆಂದದ್ದು ಅವರು ದಿಕ್ಕೆಟ್ಟು ಹೋಗಿದ್ದರೆಂಬುದಕ್ಕೆ ಸ್ಪಷ್ಟ ನಿದರ್ಶನವಾಗಿತ್ತು. 'ದಿ ಗಾರ್ಡನರ್ಸ್ ಕ್ರಾನಿಕಲ್'ನಲ್ಲಿ ರೆವರೆಂಡ್ ಎಂ.ಜೆ.ಬರ್ಕಲಿ ಈ ವಿಷಯವನ್ನು ಚರ್ಚಿಸುತ್ತ ಇದೊಂದು ಗಂಭೀರವಾದ ಪೀಡೆಯೆಂದೂ ಇಂಗ್ಲಂಡಿನ ರೈತರು ಈ ಪೀಡೆ ಆ ದೇಶದೊಳಕ್ಕೆ ಪ್ರವೇಶಿಸುವುದಕ್ಕೆ ಮುನ್ನ ಸಂಶಯಾಸ್ಪದ ಗಿಡಗಳನ್ನು ಸುಟ್ಟು ಹಾಕಬೇಕೆಂದೂ ಸಲಹೆಯಿತ್ತ. ಇಂಗ್ಲಂಡ್ ಮಟ್ಟಿಗೆ ಈ ವಿಚಾರ ಸರಿಯಾಗಿದ್ದರೂ ಫ್ರಾನ್ಸಿನ ಮಟ್ಟಿಗೆ ಇಂಥದೊಂದು ಸಲಹೆ ತುಂಬಾ ತಡವಾಗಿತ್ತೆಂದೇ ಹೇಳಬೇಕು.

## ಪ್ಲಾಂಖನ್ನನ ಪ್ರಯತ್ನ

ಈ ಶತ್ರು ದ್ರಾಕ್ಷಿ ಬಳ್ಳಿಗಳ ಮೇಲೆ ಆಕ್ರಮಿಸುವ ರೀತಿಯೇ ಗಮನಾರ್ಹವಾಗಿತ್ತು. ವೈರಿ ಪಾಳೆಯದ ಸೈನಿಕರು ಕೋಟೆಯ ನೆಲಮಾಳಿಗೆಯಲ್ಲಿ ತೆವಳುತ್ತ ಹೋಗುವಂತೆ, ದ್ರಾಕ್ಷಿ ತೋಟದ ನೆಲದೊಳಗಿಂದಲೇ ಇದು ಸಾಲು-ಸಾಲು ಬಳ್ಳಿಗಳನ್ನು ಆಕ್ರಮಿಸುತ್ತ ಸಮಾನಾಂತರವಾಗಿ ಚಲಿಸುತ್ತಿತ್ತು. ಮುನ್ಪಡೆಯ ಸೈನಿಕರು ಸಾಲಾಗಿ ಶತ್ರುಗಳ ಶಿರಸ್ಸನ್ನು ಚೆಂಡಾಡುವಂತೆ ಇದು ಬೇರುಗಳನ್ನು ಕತ್ತರಿಸಿ ಹಾಕುತ್ತಿತ್ತು. ದ್ರಾಕ್ಷಿ ತೋಟದ ಮೊದಲ ಸಾಲು ಒಣಗಿ ಸತ್ತು ಹೋಯಿತೆಂದರೆ ಉಳಿದೆಲ್ಲ ಸಾಲುಗಳೂ ಕಬಳಿಸಲ್ಪಡುತ್ತವೆ ಎಂದೇ ಲೆಕ್ಕವಾಗಿತ್ತು. ಪ್ಲಾಂಖನ್ ಒಂದು ಸಜೀವ ಕಾರಣಕ್ಕಾಗಿ ನಿದ್ದೆ ನೀರಡಿಕೆ ಬಿಟ್ಟು ಪ್ರಯತ್ನಿಸುತ್ತಿದ್ದ. ಕೆಲವರು ಯಾವುದೋ ಭಯಂಕರವಾದ ಶಿಲೀಂಧ್ರದ ಹಾವಳಿ ಇದಾಗಿರಬೇಕೆಂದು ಅಭಿಪ್ರಾಯಪಟ್ಟರು. ಕೇವಲ ಶಿಲೀಂಧ್ರವೇ ಗಿಡಗಳ ಜೀವವನ್ನು ಹಿಂಡುತ್ತಿದೆ ಎಂದರು. 'ಲೆ-ಪೌರಿಡಿ' (Le-pouridie) ಎಂಬ ರೋಗದ ಲಕ್ಷಣಗಳೂ ಈಗ ಹೊಸದೊಂದು 'ಸಮಸ್ಯೆ' ಉಂಟುಮಾಡಿದ ಲಕ್ಷಣಗಳನ್ನೇ ಹೋಲುತ್ತಿದ್ದುದರಿಂದ ಜನ ಆ ನಿಟ್ಟಿನಲ್ಲಿ ವಿಚಾರಮಾಡಿದುದು ಸಹಜವಾಗಿತ್ತು. ಬೇರುಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದ ಪ್ಲಾಂಖನ್ನನಿಗೆ ಶಿಲೀಂಧ್ರದ ಸುಳಿವು ಮಾತ್ರ ಎಲ್ಲಿಯೂ ಸಿಗಲಿಲ್ಲ. ಬದಲಾಗಿ ಕೆಲವು ಹಳದಿ ಬಣ್ಣದ 'ಚುಕ್ಕೆ'ಗಳು ಕಂಡವು. ಇವೇ ಚುಕ್ಕೆಗಳನ್ನು ಆತ ಕಣ್ಣಲ್ಲಿ ಕಣ್ಣಿಟ್ಟು ಗಮನಿಸಿದಾಗ ಅವು ಕೇವಲ ಚುಕ್ಕೆಗಳಾಗಿರದೆ 'ಯಾವುದೋ' ಒಂದು ಹುಳುವಿನ ತತ್ತಿ ಮತ್ತು ಪ್ರೌಢ ಹೆಣ್ಣು ಹುಳುಗಳಾಗಿದ್ದವು. ದ್ರಾಕ್ಷಿ ಬಳ್ಳಿಗಳು ಒಣಗಿ ಹೋಗುವುದಕ್ಕೆ ಇದೊಂದೇ ಕಾರಣವೆಂದು ಪ್ಲಾಂಖನ್ ಬಲವಾಗಿ ನಂಬಿದ. ಇಲ್ಲದಿದ್ದರೆ ಈ ಹುಳುಗಳಿಗೆ ಬೇರಿನ ಮೇಲೇನು ಕೆಲಸ? ಆತ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಆ ಹುಳುಗಳ ಪೂರ್ವಾಪರವನ್ನು ಕುರಿತು ವಿಚಾರಮಾಡಿದಾಗ ಅವು 'ಹೇನಿ'ನಂಥ ಹುಳುಗಳ ಜಾತಿಗೆ ಸೇರಿದವುಗಳೆಂದೂ, ಕೆಲವು ತರಕಾರಿ ಬೆಳೆಗಳ ಬೇರುಗಳ ಮೇಲೆ ಜೀವನ ಸಾಗಿಸುತ್ತವೆಂದೂ ತಿಳಿದುಬಂತು. ಇಂಥದೊಂದು ಅಮೂಲ್ಯವಾದ ಸಂಶೋಧನೆಯ ಹಕ್ಕನ್ನು ತನ್ನದಾಗಿಸಿಕೊಳ್ಳುವ ಭರದಲ್ಲಿ ತನ್ನ ಕೈಗೆ ಸಿಕ್ಕ ಈ 'ಗಿಡದ ಹೇನಿ'ಗೆ (Plant-lice) ರೈ ಝೂಫಿಸ್ ವಾಸ್ಟಾಟ್ರಿಕ್ಸ್ ಎಂದು ಹೆಸರಿಸಿದ. ಆದರೆ ಪ್ಲಾಂಖನ್ನನ ಸಂಶೋಧನೆ ಬೆಳಕಿಗೆ ಬರುವುದಕ್ಕೆ ಮುಂಚೆಯೇ ಈ ಕೀಟಕ್ಕೆ ಫೋಸ್ಕೋಲೋಂಬ್ ಎನ್ನುವ ತಜ್ಞ ಫೈಲೋಝುರಾ ಎಂಬ ಹೆಸರನ್ನು ಇಟ್ಟುಬಿಟ್ಟಿದ್ದ. ಹಟ ಬಿಡದ ತ್ರಿವಿಕ್ರಮನಂತೆ ಪ್ಲಾಂಖನ್ ತನ್ನ 'ಮಗು'ವಿಗೆ ಫೈಲೋಝುರಾ ವಾಸ್ಟಾಟ್ರಿಕ್ಸ್ ಎಂದು ಮರುನಾಮಕರಣ ಮಾಡಿದ.

ಆದರೆ ಸಮಸ್ಯೆ ಆಗಲೂ ಬಗೆ ಹರಿಯಲಿಲ್ಲ. ೧೮೬೩ರಷ್ಟು ಹಿಂದೆಯೇ ವೆಸ್ಟ್‌ವುಡ್ ಎಂಬಾತ ಇಂಥದೇ ಬಗೆಯ ಕೀಟವನ್ನು ನೋಡಿದ್ದುದಾಗಿ ಹೇಳಿ ಅದನ್ನು ಪೆರಿಟಿಂಬಿಯಾ ವಿಟಿಸಾನಾ ಎಂದು ಹೆಸರಿಸಿದ್ದ. ಅಮೇರಿಕೆಯಲ್ಲಿ ಇದೇ ಕೀಟವನ್ನು ಬೇರೆ-ಬೇರೆ ಹೆಸರುಗಳಿಂದ ಕರೆಯುತ್ತಿದ್ದುದು ತಡವಾಗಿ ಗೊತ್ತಾಯಿತು. ಇದರಿಂದಾಗಿ ಒಂದು ಥರದ ಗೊಂದಲವುಂಟಾಗಿ ನಿಜಕ್ಕೂ ಯಾರು ಈ ಕೀಟವನ್ನು ಮೊಟ್ಟ-ಮೊದಲು ವೈಜ್ಞಾನಿಕ ನೀತಿ-ನಿಯಮಗಳಿಗನುಗುಣವಾಗಿ ವರ್ಗೀಕರಿಸಿದರು ಎಂಬುದು ಕಡೆಗೂ ಗೊತ್ತಾಗಲಿಲ್ಲವಾದರೂ ಇದಕ್ಕೆ 'ಫೈಲೋಕ್ಸೆರಾ' ಹೆಸರೇ ಖಾಯಮ್ಮಾಗಿ ಉಳಿದುಕೊಂಡಿತು.

## ಫೈಲೋಕ್ಸೆರಾದ ಸುತ್ತ....

ಗಿಡದ ಹೇನು ಇಷ್ಟೆಲ್ಲ ಅನಾಹುತಗಳಿಗೆ ಕಾರಣವೆಂದು ಸಾಬೀತಾದ ಮೇಲೆ ಅದರ ಜೀವನ ಚರಿತ್ರೆಯನ್ನು ಅರಿಯಲು ಸಂಶೋಧನೆಗಳು ಭರದಿಂದ ಮೊದಲಾದವು. ಫೈಲೋಕ್ಸೆರಾದ ಬದುಕೇ ತನ್ನ ಬದುಕಿನಂತಾಗಿದ್ದ ಪ್ಲ್ಯಾಂಖನ್ ಅದರ ಜೀವನ ಚಕ್ರವನ್ನು ಅಭ್ಯಸಿಸಿ ವಿವರಿಸಿದ. ಈ ಕೀಟಗಳು ಇಂಚಿನ ಹತ್ತನೇ ಒಂದು ಭಾಗದಷ್ಟು ಉದ್ದವಾಗಿದ್ದು, ದಿಟ್ಟಿಸಿ ನೋಡಿದರೆ ಬರಿಗಣ್ಣಿಗೆ ಕಾಣುತ್ತಿದ್ದವು. ಅವುಗಳ ಬೆಳವಣಿಗೆಯ ಹಂತಗಳನ್ನೆಲ್ಲ ಸುಲಭವಾಗಿ ಅವು ರೂಪಾಂತರಗೊಳ್ಳುವಾಗ ಕೂಡ ಗುರುತಿಸಬಹುದಿತ್ತು. ರೆಕ್ಕೆ ಇಲ್ಲದ ಹೆಣ್ಣು ಕೀಟಗಳು ತಮ್ಮ ಚೂಚುಗವನ್ನು ಬೇರಿನೊಳಗೆ ತೂರಿಸಿ ಅದರೊಳಗಿನ ಗಿಡದಲ್ಲಿನ ಆಹಾರಾಂಶಗಳನ್ನೆಲ್ಲ ಹೀರಿಕೊಂಡು, ಬೇರಿನ ಕೋಶಗಳನ್ನು ಜಖಂ ಮಾಡುತ್ತಿದ್ದವು. ಇಂಥ ಗಾಯಗಳೇ ಹೆಚ್ಚಾಗಿ ಅವೆಲ್ಲ ಉಲ್ಬಣಗೊಂಡು ಗಂಟುಗಳಾಗುತ್ತಿದ್ದವು. ಈ ಗಂಟುಗಳಿಂದಾಗಿ ಆಹಾರ, ನೀರಿನ ಸರಬರಾಜಿಗೆ ತಡೆಯುಂಟಾಗಿ, ಬರಬರುತ್ತ ಎಲೆಗಳು, ಕಾಂಡ ಒಣಗತೊಡಗಿ, ಕೊನೆಗೊಮ್ಮೆ ಗಿಡಗಳು ಸತ್ತು ಹೋಗುತ್ತಿದ್ದವು. ಇದೇ ಗಂಟುಗಳು ಮೊದಲಿಗೆ ಹಳದಿಯಾಗಿದ್ದು, ದಿನ ಕಳೆದಂತೆ ಕಪ್ಪಾಗಿ, ಕೊಳೆತುಕೊಂಡು ಬೇರಿನ ಸಮೂಹ ತೀವ್ರವಾಗಿ ಧ್ವಂಸವಾಗಲು ಕಾರಣವಾಗುತ್ತಿದ್ದವು.

ಹೆಣ್ಣು ಕೀಟಗಳು ಮಾತ್ರ ನಿಜಕ್ಕೂ ಜಯಿಸಲಸಾಧ್ಯವಾಗಿದ್ದವು. ಗಂಡಿನ ಸಂಪರ್ಕವಿಲ್ಲದೆಯೇ ತಾಯಿಯಾಗಬಲ್ಲ ಸಾಮರ್ಥ್ಯ ಅವುಗಳದು. ಆ ಹೆಣ್ಣು ಕೀಟಗಳ ಪ್ರಜನನ ಶಕ್ತಿ ಕೂಡ ಆ ಅಗಾಧವಾಗಿತ್ತು. ಒಂದು ಹೆಣ್ಣು ಹೇನು ಒಂದು ಜೀವಂತ ತತ್ತಿಯ 'ಫ್ಯಾಕ್ಟರಿ' ಎಂದರೂ ಅತಿಶಯೋಕ್ತಿಯಾಗಲಿಕ್ಕಿಲ್ಲ! ಅದು ತತ್ತಿ ಇಡಲು ಪ್ರಾರಂಭಿಸಿದರೆ ಒಂದು ದಿನದಲ್ಲಿ ಸರಾಸರಿ ೩೦ ತತ್ತಿಗಳನ್ನು ಇಡುತ್ತಿತ್ತು. ಫೈಲೋಕ್ಸೆರಾದ ಜೀವನ ಚಕ್ರದ ಒಂದು ಹಂತದಲ್ಲಿ ರೆಕ್ಕೆಯುಳ್ಳ ಹೆಣ್ಣು ಗಿಡದ ಕಾಂಡದ ಮೇಲೆ ಎರಡು ಬಗೆಯ ಅಂದರೆ ದೊಡ್ಡ ಹಾಗೂ ಸಣ್ಣ ತತ್ತಿಗಳನ್ನು ಇಡುತ್ತಿತ್ತು. ಇವುಗಳಿಂದ ಕ್ರಮವಾಗಿ ರೆಕ್ಕೆ ಇಲ್ಲದ ಹೆಣ್ಣು ಹಾಗೂ ಗಂಡು ಕೀಟಗಳು ಹುಟ್ಟಿ, ದೊಡ್ಡವಾಗಿ, ಮತ್ತೆ ಸಂಯೋಗಹೊಂದಿ ತಮ್ಮ 'ರಕ್ತ ಬೀಜಾಸುರ' ಸಂತಾನವನ್ನು ಮುಂದುವರೆಸುತ್ತಿದ್ದುವು...

## ಕಾಡಿನ ಬೆಂಕಿ

ಫೈಲೋಕ್ಸೆರಾದ ಬದುಕಿನ ಎರಡು ಹಂತಗಳು ನಿಜಕ್ಕೂ ಇಷ್ಟೆಲ್ಲ ಅನಾಹುತಕ್ಕೆ ಕಾರಣವಾಗಿ



೧. ರೆಕ್ಕೆ ಇಲ್ಲದ ಹೆಣ್ಣು ಕೀಟ

೨. ರೆಕ್ಕೆ ಇಲ್ಲದ ಗಂಡು ಕೀಟ

೧. ರೆಕ್ಕೆಯುಳ್ಳ ಹೆಣ್ಣು ಕೀಟ




೨. ಹೆಣ್ಣು ಮೊಟ್ಟೆ

೩. ಗಂಡು ಮೊಟ್ಟೆ



೧. ರೆಕ್ಕೆ ಇಲ್ಲದ ಹೆಣ್ಣು ಕೀಟ

೨. ಮೊಟ್ಟೆಗಳು

ದ್ದವು. ಒಂದು ರೆಕ್ಕೆ ಇರುವ ಹೆಣ್ಣುಗಳದ್ದಾದರೆ ಇನ್ನೊಂದು ರೆಕ್ಕೆ ಇಲ್ಲದ ಹೆಣ್ಣುಗಳದ್ದು. ಮೊದಲಿಗೆ ಇವೆರಡೂ ಬೇರೆ-ಬೇರೆ ಪ್ರಭೇದಗಳ ಕೀಟಗಳೆಂದೇ ಭಾವಿಸಲಾಗಿತ್ತು. ರೆಕ್ಕೆ ಇಲ್ಲದವುಗಳು ನೆಲದೊಳಗೆ ಸುರಂಗ ಹೊಡೆದು ಗಿಡಗಳನ್ನು ಕೆಡವಿದರೆ, ರೆಕ್ಕೆಯುಳ್ಳವುಗಳು ಗಾಳಿಯಲ್ಲಿ ತೇಲಿ ಹೋಗಿ, ದೂರದ ತೋಟಗಳಿಗೆ ಲಗ್ಗೆ ಹಾಕಿ ಅವುಗಳನ್ನು ಮುಗಿಸಲು ಮೊದಲಾಗುತ್ತಿದ್ದವು.

ಗಾಳಿಯಿಂದ ಫೈಲೋಕ್ಸೆರಾ ಹಬ್ಬುತ್ತಿತ್ತು ಎನ್ನುವ ವಾದದಲ್ಲಿ ನಿಜವಿತ್ತೋ ಇಲ್ಲವೋ. ಆದರೆ ಲೆ-ಗಾರ್ಡ್‌ನಿಂದ ಅತ್ಯಂತ ವೇಗವಾಗಿ ಇಡೀ ಫ್ರಾನ್ಸಿನ ತೋಟಗಳಲ್ಲೆಲ್ಲ ಈ ಮಾರಿ ಕಾಡಿನ ಬೆಂಕಿಯಂತೆ ಧಗ-ಧಗಿಸಿದ್ದು ಮಾತ್ರ ಸುಳ್ಳಲ್ಲ. ಸುಮಾರು ಇಪ್ಪತ್ತು ವರ್ಷಗಳಲ್ಲಿ ಅಂದರೆ ೧೮೮೫ರಷ್ಟೊತ್ತಿಗೆ ಅದು ಇಡೀ ಯುರೋಪನ್ನಷ್ಟೇ ಅಲ್ಲದೆ ಆಸ್ಟ್ರೇಲಿಯಾದಲ್ಲಿ ಕೂಡ ತನ್ನ ಅರಸೊತ್ತಿಗೆಯನ್ನು ವಿಸ್ತರಿಸಿತು. ಫ್ರಾನ್ಸಿನ ಸುಮಾರು ೨೫ ಲಕ್ಷ ಎಕರೆಯಷ್ಟು ದ್ರಾಕ್ಷಿಯನ್ನು ಫೈಲೋಕ್ಸೆರಾ ಸರ್ವನಾಶಮಾಡಿ, ಪ್ರಶಿಯದ ಸೈನ್ಯಕ್ಕಿಂತ ಭೀಕರವಾದ ರುದ್ರ ತಾಂಡವವಾಡಿತು. ತನ್ನ ದೇಶದ ತೋಟಗಳನ್ನೇ ನೆಚ್ಚಿದ, ಫ್ರಾನ್ಸಿನ ಆರ್ಥಿಕತೆಯ ಬೆನ್ನೆಲುಬಾಗಿದ್ದ ಸುರೆಯ ಉದ್ಯಮಕ್ಕೆ ಇದರಿಂದ ಚೇತರಿಸಿಕೊಳ್ಳಲಾಗದಂಥ ಪೆಟ್ಟು ಬಿತ್ತು. ಸರ್ಕಾರ ೫೦೦ ಲಕ್ಷಕ್ಕೂ ಅಧಿಕ ಪೌಂಡುಗಳಷ್ಟು ನಷ್ಟವನ್ನು ಪ್ರತಿವರ್ಷವೂ ಅನುಭವಿಸತೊಡಗಿತೆಂದರೆ, ಈ ಷಟ್ಪಾದಿಯ ವಿನಾಶಕ ಸಾಮರ್ಥ್ಯವನ್ನು ಯಾವ ಪ್ರಳಯಕ್ಕೂ ಹೋಲಿಸಲು ಸಾಧ್ಯವಿಲ್ಲ.

## ಹತಾಶ ಯತ್ನಗಳು

ಒಂದು ನಿರ್ದಿಷ್ಟ ಕಾರಣಕ್ಕಾಗಿಯೇ ಕಾದು ಕೂತಿದ್ದ ರೈತರು ಫೈಲೋಕ್ಸೆರಾದ ಹಾವಳಿಯನ್ನು ನಿಯಂತ್ರಿಸಲು ಬಗೆ-ಬಗೆಯ ಅಸ್ತ್ರಗಳನ್ನು ಬಳಸಿದರು. ಕಾರ್ಬನ್ ಡೈ ಸಲ್ಫೈಡ್ ದ್ರಾವಣವನ್ನು ತೋಟದಲ್ಲೆಲ್ಲ ಚೆಲ್ಲಿದರು. ಅದರಿಂದೇಳುವ ಹೊಗೆಯಿಂದ ಕೀಟಗಳು ಉಸಿರುಗಟ್ಟಿ ಸಾಯುತ್ತವೆಂದು ಭಾವಿಸಿದರು. ಆದರೆ ಅದು ಅಷ್ಟು ಸುಲಭವಾಗಿ ಶರಣಾಗುವ ವೈರಿಯಾಗಿರಲಿಲ್ಲ. ಸರಕಾರ ಈ ವಿಷಯದಲ್ಲಿ ತನಿಖೆ ನಡೆಸುವುದಕ್ಕಾಗಿ ಆಯೋಗಗಳನ್ನು, ಸಮಿತಿಗಳನ್ನು ನೇಮಿಸಿತು. ವಿಜ್ಞಾನ ಅಕಾಡೆಮಿ, ಕೃಷಿ ಇಲಾಖೆ, ಅಧಿಕಾರಿಗಳು, ಭೂಮಾಲಿಕರು, ರೈತರು ಎಲ್ಲರದೂ ಒಂದೇ ಚಿಂತೆಯಾಗಿತ್ತು: ಫೈಲೋಕ್ಸೆರಾವನ್ನು ಹೆಡಮುರಿಗೆ ಹೇಗೆ ಕಟ್ಟುವುದು....?

## ಅಮೇರಿಕದಿಂದ ಬಂದ ಉತ್ತರ

ಫೈಲೋಕ್ಸೆರಾ ಫ್ರಾನ್ಸಿನಲ್ಲಿ ತನ್ನ ಆಟಾಟೋಪ ಮೆರೆಯುತ್ತಿದ್ದಾಗಲೇ ಅಂಥದೇ ಒಂದು ಹುಳು ಅಮೇರಿಕದ ದ್ರಾಕ್ಷಿಗೂ ಗಂಟು ಬಿದ್ದಿತ್ತು. ಆದರೆ

ಒಂದು ವ್ಯತ್ಯಾಸವೆಂದರೆ ಫ್ರಾನ್ಸಿನಲ್ಲಿ ಅದು ಬೇರಿಗೆ ಲಗ್ಗೆ ಹಾಕಿದ್ದರೆ, ಅಮೇರಿಕದಲ್ಲಿ ಹಸಿರಾದ ಎಲೆಗಳ ಮೇಲೆ ಅದು ಬದುಕು ಸಾಗಿಸುತ್ತಿತ್ತು. ತತ್‌ಕ್ಷಣಕ್ಕೆ ಇವೆರಡೂ ಕೀಟಗಳು ಬೇರೆ-ಬೇರೆ ಎಂದು ಭಾಸ ವಾದರೂ ಮುಂದೆ ಅವೆರಡೂ ಒಂದೇ ಎಂಬುದು ಗೊತ್ತಾಯಿತು.

ಒಂದೇ ಥರದ ಕೀಟ ಫ್ರಾನ್ಸಿನಲ್ಲಿ ಬೇರುಗಳ ಮೇಲೆ ಕಂಡು ಬರುವುದಕ್ಕೂ, ಅಮೆರಿಕದಲ್ಲಿ ಎಲೆಗಳ ಮೇಲೆ ಇರುವುದಕ್ಕೂ ಕಾರಣವಿತ್ತು. ಫ್ರಾನ್ಸಿನಲ್ಲಿ (ಯುರೋಪಿನಲ್ಲಿ) ಕೇವಲ ವಿಟಿಸ್ ವಿನಿಫೆರಾ ಪ್ರಭೇದದ ದ್ರಾಕ್ಷಿಯ ಕೃಷಿ ವ್ಯಾಪಕವಾ ಗಿತ್ತು. ಆದರೆ ಅಮೇರಿಕದಲ್ಲಾದರೋ ಸುಮಾರು ೧೮ ಬೇರೆ-ಬೇರೆ ಪ್ರಭೇದಗಳ ದ್ರಾಕ್ಷಿ ಇತ್ತು. ಇಲ್ಲಿ ಫೈಲೋಕ್ಸೆರಾಕ್ಕೆ ತನ್ನ ಬಲಿಯನ್ನು ಆಯ್ದುಕೊ ಳ್ಳಲು ಸಾಕಷ್ಟು ಅವಕಾಶವಿತ್ತು. ಅಲ್ಲದೆ ಯುರೋ ಪಿನಿಂದ ಕಡಿಮೆ ಸಂಖ್ಯೆಯಲ್ಲಿ ಕೀಟಗಳು ಅಮೆ ರಿಕಕ್ಕೆ ವಲಸೆ ಬಂದದ್ದರಿಂದ ಅವು ಎಲ್ಲ ಕಡೆಗೂ ಹಂಚಿ ಹೋಗಿ ದ್ರಾಕ್ಷಿಯ ಮೇಲೆ ಅಷ್ಟಾಗಿ ಒತ್ತಡ ಇಲ್ಲದೆ ನೈಸರ್ಗಿಕ ಸಮತೋಲನ ನಿರ್ಮಾಣವಾ ಗಿತ್ತು. ಆರಂಭಕ್ಕೆ ದಾಳಿಗೊಳಗಾದ ಎಲೆಗಳು ಸ್ವಾದಿಷ್ಟವಾಗಿ ಕಂಡದ್ದರಿಂದ ಕೀಟಗಳು ಬೇರುಗಳ ಗೋಜಿಗೇ ಹೋಗಲಿಲ್ಲ ಎಂದು ಮಿಸ್ಸೌರಿಯ ಅಧಿಕೃತ ಕೀಟ ಶಾಸ್ತ್ರಜ್ಞನಾಗಿದ್ದ ಚಾರ್ಲ್ಸ್ ರೀಲಿ ಅಭಿಪ್ರಾಯಪಟ್ಟ. ಅವನ ವಿಚಾರ ಕೆಲವೊಮ್ಮೆ ನಗೆ ಪಾಟಲಾದರೂ ಆ ಸಾಧ್ಯತೆಯನ್ನು ತಳ್ಳಿಹಾಕುವಂ ತಿರಲಿಲ್ಲ. ಈ ಚಿಕ್ಕ ಹೇನು ಇಡೀ ಅಮೆರಿಕದ ದ್ರಾಕ್ಷಿಯನ್ನು ಮುಗಿಸಬಲ್ಲದು ಎಂದೇ ರೀಲಿ ನಂಬಿದ್ದ. ಆತನ ಆತಂಕಕ್ಕೆ ಇಂಬೆನ್ನುವಂತೆ ಕ್ಯಾಲಿಫೋರ್ನಿಯಾ ಒಂದನ್ನು ಬಿಟ್ಟರೆ ಉಳಿದೆಡೆ ಇದ್ದ ವಿಟಿಸ್ ವಿನಿಫೆರಾ ಸರ್ವನಾಶವಾಗಿತ್ತು. ಫ್ರೆಂಚ್ ಸರಕಾರದ ಕೋರಿಕೆಯ ಮೇರೆಗೆ ಫ್ರಾನ್ಸಿಗೆ ಭೇಟ್ಟಿಕೊಟ್ಟು ಅಲ್ಲಿಯ ಪರಿಸ್ಥಿತಿಯನ್ನು ಅಧ್ಯಯನ ಮಾಡಿದ ನಂತರ ರೀಲಿ ಒಂದು ನಿರ್ಧಾರಕ್ಕೆ ಬಂದ. ಅದೆಂದರೆ ಅಮೇರಿಕದ ಬೇರಿನ ಮೇಲೆ ಫ್ರಾನ್ಸಿನ ದ್ರಾಕ್ಷಿಯ ಕಾಂಡ, ಎಲೆ ಬೆಳೆಯುವಂತೆ ಕಸಿ ಮಾಡಿ ಗಿಡದ ಮರುಸೃಷ್ಟಿ ಮಾಡುವುದು....! ಅಮೇರಿಕದ ಬೇರು ಹಾಗೂ ಫ್ರಾನ್ಸಿನ ಎಲೆ ಫೈಲೋಕ್ಸೆರಾಕ್ಕೆ ನಿರೋಧಕತೆಯನ್ನು ಹೊಂದಿದ್ದ ರಿಂದ ಇದು ಸಾಧ್ಯವಾಗಬಹುದಾಗಿದ್ದ ಕಲ್ಪನೆಯಾ ಗಿತ್ತು. ಆದರೆ ಇದರ ಸಾಧ್ಯಾಸಾಧ್ಯತೆಯೊಂದಿಗೇ ಇನ್ನೂ ಕೆಲವು ಪ್ರಮುಖವಾದ ಪ್ರಶ್ನೆಗಳೇಳುತ್ತಿ ದ್ದವು. ಫ್ರಾನ್ಸಿನಲ್ಲಿ ದ್ರಾಕ್ಷಿಯ ಬೇಸಾಯ ಒಂದು ಬೃಹತ್ ಉದ್ಯಮಕ್ಕಿಂತಲೂ ಹೆಚ್ಚಾಗಿ, ಸುರೆ ಅಲ್ಲಿಯ ಜನರ ಸಾಮಾಜಿಕ ಬದುಕಿನ ಅವಿಭಾಜ್ಯ ಅಂಗವಾಗಿತ್ತು. ದ್ರಾಕ್ಷಿಗೆ ಮರುಜೀವ ಕೊಡುವ ಭರದಲ್ಲಿ ವಿನಿಫೆರಾದ ವಿಶಿಷ್ಟಸ್ವಾದ ಎಲ್ಲಿ ಹಾಳಾಗಿ ಹೋಗುತ್ತದೋ ಎಂಬುದು ಎಲ್ಲರಿಗೂ ಇದ್ದ ಆತಂಕ. ಆದರೆ ನಾಲಿಗೆಗೆ ಕಡಿವಾಣ ಹಾಕಿ ದ್ರಾಕ್ಷಿಯ ಈ ಮಹಾವ್ಯಾಧಿಗೆ ಮುಕ್ತಿ ಕರುಣಿಸು ವುದು ಅತ್ಯಂತ ಅವಶ್ಯಕವಾಗಿತ್ತು.

ರೀಲಿ ಫ್ರೆಂಚ್ ಸರಕಾರಕ್ಕೆ ಉತ್ತಮವಾದ ಅಮೇರಿಕದ ಬೇರು ಸಸಿಗಳನ್ನು ಆಯ್ಕೆ ಮಾಡಿಕೊ ಳ್ಳಲು ನೆರವಾದ. ವೈರಿಯನ್ನು ಸೋಲಿಸುವ ಒಂದು ಉತ್ತಮ ಉಪಾಯವೆಂದರೆ ಅದನ್ನು ಉಪವಾಸ ಬೀಳುವಂತೆ ಮಾಡುವುದು. ಕಸಿ, ಹೈಬ್ರಿಡೀಕರಣ ಹಾಗೂ ತುಂಬಾ ಕಾಳಜಿಯಿಂದ ಮಾಡಿದ ರೋಗ ನಿರೋಧಕ ತಳಿಗಳ ಆಯ್ಕೆ ತಡವಾಗಿಯಾದರೂ ಫೈಲೋಕ್ಸೆರಾವನ್ನು ಹಸಿವೆ ಯಿಂದ ಕಂಗಾಲಾಗುವಂತೆ ಮಾಡುವಲ್ಲಿ ಯಶ ಸ್ವಿಯಾದವು. ಫ್ರಾನ್ಸಿನಲ್ಲಿ ಮತ್ತೆ 'ಮಾನವ ಸೃಷ್ಟಿ'ಯ ದ್ರಾಕ್ಷಿ ಬಳ್ಳಿಗಳು ನಳ-ನಳಿಸತೊಡಗಿದವು.

●

---

**ಒಬ್ಬ ಪುಟ್ಟ ಬಾಲಕಿಯ ಪ್ರಾರ್ಥನೆ: "ಓ ದಯಾಮಯನೆ, ದುಷ್ಟರನ್ನು ಶಿಷ್ಟರನ್ನಾಗಿ ಮಾಡು,.... ಶಿಷ್ಟರನ್ನು ಇನ್ನಷ್ಟು ಶಿಷ್ಟರನ್ನಾಗಿಡು."**

---

# ಶ್ರೀಸಾಮಾನ್ಯನ ಮೃತ್ಯುಪತ್ರ

• ಪ್ರೊ. ಜಿ.ಡಿ. ನಾಡಕರ್ಣಿ

ಸ್ವತಂತ್ರ ಭಾರತದ ನಾಗರಿಕನಾದ ನಾನು ಈ ಮೃತ್ಯುಪತ್ರವನ್ನು ಅಕ್ಕಲ ಹುಷಾರಿಯಿಂದ, ಸ್ವ-ಇಚ್ಛೆಯಿಂದ ಬರೆಯುತ್ತಿರುವೆ. ಅನೇಕ ವಿಷಯಗಳಲ್ಲಿ ಅಸಾಮಾನ್ಯನಾದ ನನ್ನನ್ನು ಜನ, ತಿಳಿಯದೆ, ಅದೇಕೋ ಶ್ರೀಸಾಮಾನ್ಯ ಎಂದೇ ಕರೆಯುತ್ತಿದ್ದಾರೆ! ಅದರಿಂದ ಅವರಿಗೆ ಸಂತೋಷವಾಗುತ್ತಿದ್ದರೆ, ಅವರು ಹಾಗೆ ಕರೆದುಕೊಳ್ಳಲಿ. ಈ ಮೃತ್ಯುಪತ್ರ ಬರೆಯುವಾಗ ನಾನು ವಿದೇಶಿ ಅಥವಾ ಸ್ವದೇಶಿ ಮಾದಕಪೇಯ ಸೇವಿಸಿಲ್ಲ ಎಂದು ಆತ್ಮಸಾಕ್ಷಿಯಾಗಿ ಸಾರುತ್ತಿರುವೆ. ಅಲ್ಲದೆ, ಯಾರ ಒತ್ತಾಯಕ್ಕೂ ಒಳಗಾಗಿಲ್ಲ.

ಲೋಕವೆಲ್ಲ ತಿಳಿದಿರುವಂತೆ, ನಾನೊಬ್ಬ ಸಮತಾವಾದಿ ಅಂತೆಯೇ, ನಾಲ್ಕು ಗಂಡು ಮತ್ತು ನಾಲ್ಕು ಹೆಣ್ಣು ಮಕ್ಕಳನ್ನು ನಾನು ಹಡೆದಿರುವೆ. (ಆಗ ಕುಟುಂಬ ಯೋಜನೆ ಪ್ರಚಾರದಲ್ಲಿ ಬಂದಿರಲಿಲ್ಲ) "ನೆಲಸಮತಾವಾದ"ವನ್ನು ಒಪ್ಪದ ನಿಜ ಸಮತಾವಾದಿ ನಾನು. ಪರೀಕ್ಷೆಗೆ ಕುಳಿತ ವಿದ್ಯಾರ್ಥಿಗಳ ಫಲಿತಾಂಶದಲ್ಲಿ ಪ್ರಥಮವರ್ಗ, ದ್ವಿತೀಯವರ್ಗ ಇತ್ಯಾದಿ ಭೇದಮಾಡುವದನ್ನು ನಾನು



ಸುತರಾಂ ಒಪ್ಪುವುದಿಲ್ಲ. ಅವರೆಲ್ಲರೂ ನನ್ನ ದೃಷ್ಟಿಯಲ್ಲಿ ಸಮಾನರು! ಸರಕಾರೀ ಹಣ ಮತ್ತು ನನ್ನ ಸ್ವಂತ ಹಣ ಇವೆರಡರಲ್ಲಿಯೂ ಯಾವ ಭೇದ ಕಾಣದ ಶುದ್ಧ ಅದ್ವೈತಿ ನಾನು!

ಕಳೆದ ೩೦ ವರ್ಷಗಳಿಂದ ನಾನು ವಾಸವಾಗಿರುವ ಬಾಡಿಗೆಯ ಮನೆಯನ್ನು, ಅದಕ್ಕೆ ಕೊಡಬೇಕಾಗಿರುವ ಎರಡು ವರ್ಷಗಳ ಬಾಡಿಗೆಯ ಬಾಕೀ ಸಹಿತ, ಮನೆಯ ಮಾಲೀಕರಿಗೆ ವಾಪಸು ಬಿಟ್ಟಿದ್ದೇನೆ. ನನ್ನ ಮೇಲೆ ಹೂಡಿರುವ ಮನೆ ಬಿಡಿಸುವ ದಾವೆಯನ್ನು ಅವರು ಕೂಡಲೇ ಹಿಂತೆಗೆದುಕೊಳ್ಳಬೇಕು.

"ಋಣಂ ಕೃತ್ವಾ, ಘೃತಂ ಪಿಬೇತ್" ಎಂಬ ಆರ್ಯೋಕ್ತಿಗೆ ಅನುಸಾರವಾಗಿ ಮತ್ತು ನಮ್ಮ ಸರಕಾರದ ಉದಾರ ಧೋರಣೆಗೆ ಅನುಗುಣವಾಗಿ, ನಾನು ಸಾಲ ಎಲ್ಲೆಲ್ಲಿ, ಎಷ್ಟೆಷ್ಟು ಸಿಗುತ್ತದೆಯೋ ಅಷ್ಟನ್ನು ಪಡೆದುಕೊಳ್ಳಲು ಹಿಂದೆ ಬಿದ್ದಿಲ್ಲ. ನನಗೆ ಸಾಲ ಕೊಟ್ಟಿರುವ ಬ್ಯಾಂಕು, ಸಹಕಾರಿ ಸೊಸೈಟಿ, ಫೈನಾನ್ಸ್ ಕಂಪನಿಗಳು; ಅಲ್ಲದೆ, ಉದ್ರಿ ಇರುವ ಕಿರಾಣಿ ಅಂಗಡಿಯವರು, ಕೈಗಡ ಕೊಟ್ಟ ಮಿತ್ರರು ತಾವು ಮಾಡಿದ ತಪ್ಪಿಗೆ ತಾವೇ ಶಿಕ್ಷೆ ಅನುಭವಿಸಲಿ! ಏಕೆಂದರೆ, ತಿಳಿದೂ ತಿಳಿದೂ ನನ್ನಂಥವನಿಗೆ ಅವರು ಸಾಲ ಕೊಟ್ಟದ್ದು ಅವರದೇ ಅಕ್ಷಮ್ಯ ಅಪರಾಧ. ಈ ವಿಷಯದಲ್ಲಿ ಮುಂಬಯಿಯ (ಕು)ಪ್ರಸಿದ್ಧ ದಲ್ಲಾಳಿ ನನಗೆ ಮಾರ್ಗದರ್ಶಕ, ಗುರು! ಕೋಟಿ-ಕೋಟಿಗಟ್ಟಲೆ ಸಾಲವನ್ನು ಅವನು ಪಡೆದರೂ, ಅದು ಸಾಲ ಕೊಟ್ಟವರ ತಪ್ಪೇ ಹೊರತು, ಆ ಸಾಹಸಿ ಪ್ರಾಮಾಣಿಕ ದಲ್ಲಾಳಿಯ ತಪ್ಪು ಖಂಡಿತ ಅಲ್ಲ!

ನನ್ನ ಮನೆಯಲ್ಲಿ ಸ್ವಂತ ವಾಚನಾಲಯವಿದೆ. ನನ್ನ ಸ್ವಂತ ಪುಸ್ತಕಗಳನ್ನೆಲ್ಲ ಬೇರೆಯವರು ಎರವಲು ತೆಗೆದುಕೊಂಡು ಹೋಗಿ, ವಾಪಸು ಕೊಟ್ಟಿಲ್ಲ. ಅದನ್ನು ಅನುಸರಿಸಿ, ನಾನೂ ಬೇರೆಯವರಿಂದ ಪುಸ್ತಕ ಪಡೆದವನು (ಹಿಂದೆ ಬೀಳದೆ). ಮರಳಿ ಅವರಿಗೆ ಕೊಟ್ಟಿಲ್ಲ! ಯಾಕೆ ಕೊಡಬೇಕು? ಅಂತೆಯೇ, ನನ್ನಲ್ಲಿ ಸಾಕಷ್ಟು ಕನ್ನಡ ಪುಸ್ತಕಗಳ ಸಂಗ್ರಹವಿದೆ. ಅವೆಲ್ಲ ನನ್ನ ಸ್ವಂತ ಮಾಲ್ಕಿಯವೇ ಎಂದು ಧಾರಾಳವಾಗಿ ಹೇಳಬಹುದು. ನನ್ನ ಮರಣಾನಂತರ ಈ ಪುಸ್ತಕಗಳನ್ನು ಇಂಗ್ಲೀಷ್ ಮೀಡಿಯಂ ಶಾಲೆಗಳು ತಮ್ಮ ವಾಚನಾಲಯಕ್ಕೆ ತೆಗೆದುಕೊಳ್ಳಬೇಕು.

ನನ್ನ ನಿಧನಾನಂತರ, ದಿನಪತ್ರಿಕೆಗಳಲ್ಲಿ ಶೋಕ ಸೂಚಿಸುವ ಸಂದೇಶಗಳು, ದುಃಖಸೂಚಕ ಗೊತ್ತುವಳಿಗಳು ಪ್ರಕಟವಾಗಬಹುದು. ನನ್ನ ನಿಧನದಿಂದ ಸಾರಸ್ವತ ಪ್ರಪಂಚಕ್ಕೆ ಅಪಾರ ಹಾನಿ, ತುಂಬಿಬಾರದ ನಷ್ಟ ಎಂದೂ; ಮತ್ತು ನನ್ನಲ್ಲಿ ಇಲ್ಲದ ಸದ್ಗುಣಗಳನ್ನು ಆರೋಪಿಸಿ ನನ್ನ ಬಗ್ಗೆ ಬರೆಯಲ್ಪಟ್ಟಂಥ ಪ್ರಶಂಸಾತ್ಮಕ ಲೇಖನಗಳು, ಸ್ಮೃತಿಗಳು; ಮತ್ತು ಯಾರೂ ಕಾಣದ, ಯಾರ ಕೈಗೂ ಸಿಗದೆ ಇರುವ ನನ್ನ ಪವಿತ್ರ ಆತ್ಮಕ್ಕೆ ಚಿರಶಾಂತಿ ಕೋರುವ ಗೊತ್ತುವಳಿಗಳು; ನನ್ನ ಕುಟುಂಬಕ್ಕೆ ಪರಮಾತ್ಮನು ದುಃಖಸಹಿಸುವ ಶಕ್ತಿಯನ್ನೀಯಲೆಂದು ಕೋರುವ ನಿರ್ಣಯಗಳು- ಮುಂತಾದ ಶುದ್ಧ ನಿರುಪಯೋಗಿ ವಿಷಯಗಳನ್ನೆಲ್ಲ ನನ್ನ ಎಲ್ಲಾ ಮಕ್ಕಳು ಸಮವಾಗಿ ಹಂಚಿಕೊಳ್ಳಬೇಕೆಂದು ಇಚ್ಛಿಸುತ್ತೇನೆ.

ಅಖಂಡ ಭಾರತದ ವಿಶಾಲ ಚಿತ್ರವನ್ನೇ ಸದಾ ನಾನು ನನ್ನ ಮನಸ್ಸಿನ ಮುಂದೆ ಇರಿಸಿಕೊಂಡಿರುವುದರಿಂದ, ಪ್ರಾಂತೀಯ ಸಂಕುಚಿತ ಭಾವನೆಗಳು ನನ್ನ ಕನಸು-ಮನಸ್ಸಿನಲ್ಲಿ ಸುಳಿದಿಲ್ಲ! ರಾಜಧಾನಿ ಬೆಂಗಳೂರಿನಲ್ಲಿ ತೆಲುಗು-ತಮಿಳು ಜನರ ಸಂಖ್ಯೆ ಬೆಳೆದರೆ, ಅದನ್ನು ಕಂಡು ಸಂತಸಪಟ್ಟಿರುವೆ. ಭಾಷಾಬಾಂಧವ್ಯ ವರ್ಧನೆಗಾಗಿ, ನನಗೆ ತಿಳಿಯದಿದ್ದರೂ, ನಾನು ತಮಿಳು-ಮರಾಠಿ ಸಿನೇಮಾಗಳನ್ನು ತಪ್ಪದೆ ನೋಡುತ್ತಿರುವೆ. ಕರ್ನಾಟಕದ ರಾಜಧಾನಿಯಲ್ಲಿ ಶೂರ ಶಿವಾಜಿ ಛತ್ರಪತಿಯ ಪ್ರತಿಮೆ ನಿಲ್ಲಿಸುವುದಕ್ಕೆ ನನ್ನ ಹೃತ್ಪೂರ್ವಕ ಅನುಮೋದನೆಯನ್ನು ಸಾರ್ವಜನಿಕವಾಗಿ ನೀಡಿರುವೆ. ಕನ್ನಡಿಗರು ಉದಾರಹೃದಯಕ್ಕೂ ಅತಿಥಿ ಸತ್ಕಾರಕ್ಕೂ ಪೂರ್ವಕಾಲದಿಂದಲೂ ಹೆಸರುಕೆಡಿಸಿಕೊಂಡಿದ್ದಾರೆ! ಯಾರು ಬಂದರೂ, ಅವರನ್ನು ಸ್ವಾಗತಿಸುವುದರಲ್ಲಿ ಹಿಂದೆ ಬಿದ್ದಿಲ್ಲ! ಅದನ್ನು ಅನುಸರಿಸಿಯೇ ನಾನೂ

ನಡೆದಿರುವೆ.

ಕರ್ನಾಟಕದ ಗಡಿಪ್ರದೇಶದಲ್ಲಿ ಬೇರೆ ಭಾಷೆಯವರು ಠಾಣೆ ಹೂಡಿ, ತಮ್ಮ ಬೇಳೆ ಬೇಯಿಸಿಕೊಳ್ಳುತ್ತಿದ್ದರೆ, ಅದನ್ನು ಕ್ರೂರವಾಗಿ ಖಂಡಿಸುವ ಪ್ರವೃತ್ತಿಯು, ಉದಾರ ಹೃದಯದ ಕನ್ನಡಿಗನಾದ ನನ್ನಲ್ಲಿ ಎಳ್ಳಷ್ಟೂ ಇಲ್ಲ! ನನ್ನ ಈ ಉದಾರ ನಿಲುಮೆಯನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದೆ, ಕೆಲವು ಸಂಕುಚಿತ ಕನ್ನಡಾಭಿಮಾನಿಗಳು ನನ್ನನ್ನೂ "ಕನ್ನಡದ ದ್ರೋಹಿ" ಎಂದು ಬೆರಳುಮಾಡಿ ತೋರಿಸುತ್ತಾರೆ. ಆದರೆ, ನಾನು ಎದೆಗುಂದುವವನೇ? ಅಂಥ ಕ್ಷುಲ್ಲಕ ದೃಷ್ಟಿಯ ಟೀಕೆಗಳನ್ನು ನಾನು ಹಚ್ಚಿಕೊಂಡಿಲ್ಲ.

ಹಿಂದೆ, ಗಾಂಧೀಜಿ "ದೇಶಕ್ಕಾಗಿ ದುಡಿಯಿರಿ, ಮಡಿಯಿರಿ" ಎಂದು ಘೋಷಿಸಿದರು. ಸ್ವಾತಂತ್ರ್ಯ ಪ್ರಾಪ್ತಿಯ ನಂತರ, ಅವೆರಡೂ ಈಗ ಅವಶ್ಯವಿಲ್ಲ. ಈಗ ಅತ್ಯವಶ್ಯವಿರುವ ಘೋಷಣೆ "ದೇಶಕ್ಕಾಗಿ ಕುಡಿಯಿರಿ" ಎಂಬುದೇ ಆಗಿದೆ! ಕುಡಿತದಿಂದ ಆಗುವ ಲಾಭವೆಷ್ಟು ಬಲ್ಲಿರಾ? ಬಡವರ ದಿನದ ದುಡಿಮೆಯ ಶ್ರಮ ಪರಿಹಾರವಾಗುತ್ತದೆ, ಚಿಂತೆಗಳು ಮರೆತುಹೋಗುತ್ತವೆ. ಇನ್ನು, ಶ್ರೀಮಂತ ಯುವಕರ ಪ್ರತಿಷ್ಠೆ (ಕುಡಿತದಿಂದ) ಸಮಾಜದಲ್ಲಿ ಅಭಿವೃದ್ಧಿ ಹೊಂದುತ್ತದೆ. ಮುಖ್ಯವಾಗಿ, ಮದ್ಯಪಾನದಿಂದ ಸರಕಾರಕ್ಕೆ ಹೆಚ್ಚಿನ ಆದಾಯ ದೊರೆಯುವುದಿಲ್ಲವೇ? ಮದ್ಯಪಾನ ನಿಷೇಧ ಮಾಡಿದರೆ, ಕಳ್ಳಭಟ್ಟಿಗಳು ಹುಟ್ಟಿಕೊಳ್ಳುತ್ತವೆ. ಹಾಗೆ ಕದ್ದು-ಮುಚ್ಚಿ ಕುಡಿಯುವದಕ್ಕಿಂತ, ಬಹಿರಂಗವಾಗಿ, ISI ಮುದ್ರೆಯನ್ನು ಹೊಂದಿದ, ಅಧಿಕೃತ ಮದ್ಯಸೇವಿಸುವದು ತಮಗೂ, ರಾಷ್ಟ್ರಕ್ಕೂ ಏಕಕಾಲಕ್ಕೆ ಉಪಯೋಗಬೀಳುವುದಿಲ್ಲವೇ?

ಪ್ರಜಾಪ್ರಭುತ್ವದ ಯಶಸ್ಸು ಭಾರತೀಯ ಮತದಾರನ ಮೇಲೆ ಪೂರ್ಣ ಅವಲಂಬಿಸಿದೆ. ಹಾಗೆ ನೋಡಿದರೆ ಸ್ವತಂತ್ರ ಭಾರತದಲ್ಲಿ ಕೂಸು ಜನಿಸಿದೊಡನೆಯೇ ಅದಕ್ಕೆ ಮತದಾನಮಾಡುವ ಪವಿತ್ರ ಕೆಲಸ ಮತ್ತು ಹೊಣೆ ಸಹಜವಾಗಿ ಪ್ರಾಪ್ತವಾಗುವವು. ಮುಗ್ಧತೆಯೇ ಮತದಾರನ ಮುಖ್ಯ ಲಕ್ಷಣ-

ಎಂಬುದು ಇತ್ತೀಚಿನ ಚುನಾವಣೆಗಳಿಂದ ಸ್ಥಿರಪಟ್ಟಿದೆ. ಆದ್ದರಿಂದ, ಆದಷ್ಟು ತೀವ್ರ ಮತದಾನದ ವಯಸ್ಸನ್ನು ೧೮ ರಿಂದ ೮ಕ್ಕೆ ಇಳಿಸಬೇಕು. ವಯಸ್ಸಾಗುತ್ತಾ ಹೋದಂತೆ, ವಿಚಾರಮಾಡುವುದು, ವಿವೇಕ ಉಪಯೋಗಿಸುವದು- ಇತ್ಯಾದಿ ವಿಚಿತ್ರ ಮತ್ತು ಅನಾವಶ್ಯಕ ವಿಷಯಗಳ ಬೆಳವಣಿಗೆ ವ್ಯಕ್ತಿಯ ಮನಸ್ಸಿನಲ್ಲಿ ಆಗುತ್ತದೆ. ಆದ್ದರಿಂದ, ಆದಷ್ಟು ಕಡಿಮೆ ವಯಸ್ಸಿನವರಿಗೆ (ಅಂದರೆ, ಸದ್ಯಕ್ಕೆ ೮ ವರ್ಷದವನಿಗೆ ಅಥವಾ ವರ್ಷದವಳಿಗೆ) ಮತ ಚಲಾಯಿಸುವ ಹಕ್ಕು ಕೊಡಬೇಕು. ಇಂಥ ಮತದಾರ ತಲೆಕೆಡಿಸಿಕೊಳ್ಳದೆ, ತನ್ನ ಮುಗ್ಧ ಸ್ವಭಾವದಿಂದ ಮತದಾನದ ಪವಿತ್ರ ಕಾರ್ಯವನ್ನು ಸಮರ್ಪಕವಾಗಿ ಮಾಡಬಲ್ಲನು. ಮತ್ತು ಇಂಥ ಮತದಾರನ ಮನವೊಲಿಸಿ, ತಮಗೆ ಮತ ನೀಡುವಂತೆ ಮಾಡುವುದು ರಾಜಕೀಯ ಪಕ್ಷಗಳಿಗೆ ಸುಲಭವಾಗುವುದಿಲ್ಲವೆ? ನನ್ನ ನಿಧನದ ನಂತರ ಚುನಾವಣೆಗೆ ಸಂಬಂಧಿಸಿದ ಈ ಸುಧಾರಣೆಗಳು ಕೂಡಲೇ ಕಾರ್ಯಗತವಾಗಬೇಕು.

ನನ್ನದು ಇನ್ನೂ ಒಂದು ಕೊನೆಯ ಇಚ್ಛೆ ಎಂದರೆ, ಸರಕಾರೀ ಕಚೇರಿಗಳಲ್ಲಿಯೂ ಇಂದಿನ ಯುಗಧರ್ಮಕ್ಕೆ ತಕ್ಕಂತೆ ಕೆಲವು ಮಾರ್ಪಾಡುಗಳನ್ನು ಮಾಡುವುದವಶ್ಯ. ಎಲ್ಲ ಸರಕಾರೀ ನೌಕರರ ಕುರ್ಚಿಗಳನ್ನು ಬದಲಿಸಿ, ಅವುಗಳ ಸ್ಥಳದಲ್ಲಿ ಈಸೀ ಚೇರ್‌ಗಳನ್ನು ಇಡಬೇಕು. ಅಂದರೆ, ಈಗಿನ ಕುಳಿತುಕೊಂಡೇ ತೂಕಡಿಸುವ ನೌಕರನ ತೊಂದರೆ ನಿವಾರಣೆಯಾಗುತ್ತದೆ! ನೌಕರರು ಮುಷ್ಕರ ನಡೆಸುವುದು ಇಂದಿನ ನಿತ್ಯದ ಸಾಮಾನ್ಯ ಕಾರ್ಯಕ್ರಮವಾದ್ದರಿಂದ, ಸರಕಾರದವರು ಕಚೇರಿಯ ಹತ್ತರ, ಮುಷ್ಕರ ಮಾಡುವವರ ಅನುಕೂಲಕ್ಕಾಗಿ ಕಾಯಂ ಕಟ್ಟಡವನ್ನು ಕಟ್ಟಿಸಿಕೊಡಬೇಕು. ಹಾಗೂ ಅನ್ನಸತ್ಯಾಗ್ರಹ ಮಾಡುವ ನೌಕರರಿಗೆ ಕಾಲಕಾಲಕ್ಕೆ ತಿಂಡಿಯ ಸರಬರಾಜು, ಬೇಸಿಗೆಯಲ್ಲಿ ಶರಬತ್ತು, ಚಳಿಗಾಲದಲ್ಲಿ ಬಿಸಿಕಾಫಿಯ ವ್ಯವಸ್ಥೆಯನ್ನು ಸರಕಾರೀ ಖರ್ಚಿನಲ್ಲಿಯೇ ಮಾಡಬೇಕು. ಸತ್ಯಾಗ್ರಹಿಗಳ ಫೋಟೋ ತೆಗೆಯಲು ಕೆಲವು ಫೋಟೋಗ್ರಾಫರರನ್ನು ನೇಮಿಸಬೇಕು. ಅಲ್ಲದೆ, "ಲಂಚ ಮುಟ್ಟುವುದಿಲ್ಲ" ಎಂಬ ಫಲಕವನ್ನು ಕೆಂಪು ಮಸಿಯಲ್ಲಿ ಬರೆಯಿಸಿ, ಪ್ರತಿಯೊಬ್ಬ ನೌಕರನು "ಲಂಚ ಮುಟ್ಟುವುದಿಲ್ಲ" ಎಂಬ ಘೋಷಣೆಯನ್ನು ಅಕ್ಷರಶಃ ಪಾಲಿಸಿದರೆ ವಿಚಕ್ಷಕ ದಳದವರ ಕೈಯಲ್ಲಿ ಸಿಕ್ಕಿಬೀಳುವ ಪ್ರಸಂಗ ತಪ್ಪಿ ಹೋಗುತ್ತದೆ. (ನೌಕರನು ತಾನು ಲಂಚ ಸ್ವೀಕರಿಸುವುದೇ ಇಲ್ಲ ಎಂದು ಹೇಳಿಲ್ಲ; ಕೇವಲ ಕೈಯಿಂದ ಮುಟ್ಟುವುದಿಲ್ಲ ಎಂಬ ಪ್ರತಿಜ್ಞೆಯನ್ನಷ್ಟೇ ಮಾಡಿರುವನಲ್ಲವೇ?)

"ಚಲನ ಚಿತ್ರಗಳಲ್ಲಿ ಹಿಂಸೆ, ಕ್ರೌರ್ಯ, ಅತ್ಯಾಚಾರ ಮೊದಲಾದವು ಬಹಳ ಬೆಳೆದಿವೆ; ಅವುಗಳನ್ನು ನೋಡುವ ಯುವಕರ ಮನಸ್ಸು ಕೆರಳಿ, ತಾಮಸೀ ಭಾವನೆಗಳ ಬೆಳವಣಿಗೆಗೆ ಅವಕಾಶ ದೊರೆಯುತ್ತದೆ" ಎಂಬ ವಿಚಿತ್ರ ವಾದ ಒಂದಿದೆ. ಅದರಲ್ಲಿ ಹುರುಳಿಲ್ಲವಾದ್ದರಿಂದ ಅದನ್ನು ಸುತರಾಂ ನಾನು ಒಪ್ಪುವುದಿಲ್ಲ. ಹಿಂದೆ, ಕಾವ್ಯಗಳಲ್ಲಿ ವೀರರಸ, ಶೃಂಗಾರರಸಗಳ ಚಿತ್ರಣಕ್ಕೆ ಪ್ರಾಚೀನ ಕವಿಗಳು ಪ್ರಾಧಾನ್ಯ ಇತ್ತಿಲ್ಲವೇ? ಹಾಗೆಯೇ, ಇಂದಿನ ಸಿನೇಮಾಗಳಲ್ಲಿಯ ಫೈಟಿಂಗ್ ದೃಶ್ಯಗಳನ್ನು ಯುವಕರು ಮೈಯೆಲ್ಲ ಕಣ್ಣಾಗಿ ನೋಡುವದರಿಂದ, ಅವರಲ್ಲಿ ರಕ್ತ ಸಂಚಾರವು ಹೆಚ್ಚಾಗಿ, ಶೌರ್ಯಪ್ರವೃತ್ತಿ ಖಂಡಿತ ಹೆಚ್ಚಾಗುತ್ತದೆ. ಇನ್ನು ಸಿನೇಮಾಗಳಲ್ಲಿ ನಾಯಕ-ನಾಯಕಿಯರು ಅರೆನಗ್ನ ರೂಪದಲ್ಲಿ ಇರುತ್ತಾರೆಂದು ಕೆಲವು ಮಡಿವಂತರು ವಿನಾಕಾರಣ ಖಂಡಿಸುತ್ತಾರೆ. ಹಾಗೆ ನೋಡಿದರೆ ನಮ್ಮ ಕೆಲವೊಂದು ದೇವತಾ ಮೂರ್ತಿಗಳು ಬಟ್ಟೆ-ಬರೆ ಧರಿಸದೆ, ದಿಗಂಬರ ರೂಪದಲ್ಲಿಯೇ ನಿಂತಿಲ್ಲವೇ? ಅವು ಅಶ್ಲೀಲವಲ್ಲ ಇಷ್ಟೇ ಅಲ್ಲ, ಪೂಜ್ಯ ಎಂದು ಭಾವಿಸಿದ ಮೇಲೆ, ಮಾನವರಿಗೂ ಇದನ್ನೇ ಏಕೆ ಅನ್ವಯಿಸಬಾರದು? ಈ ಬಗೆಯ ಮಡಿವಂತಿಕೆ ಇನ್ನಾದರೂ ಹೋಗಬೇಕು.

ನಾನು ಜೀವನದಲ್ಲಿ ಮಾಡಿದ ಪಾಪ-ಪುಣ್ಯಗಳಿಗೆ ನಾನು ಹೊಣೆಗಾರನಲ್ಲ! ಅದಕ್ಕೆಲ್ಲ ಸಮಾ

ಜವೇ ಹೊಣೆ. ನಾನು ಸಮಾಜ ಜೀವಿಯಾಗಿ ಬದುಕಬೇಕಾದ್ದರಿಂದ ಯಥೋಚಿತವಾಗಿ ನಡೆದು ಕೊಂಡಿರುವೆ. ಸುಳ್ಳು ಹೇಳಬೇಕಾದ, ಕರತಪ್ಪಿಸಬೇಕಾದ, ರೆಕಾರ್ಡುಗಳನ್ನು ತಿದ್ದಬೇಕಾದ ಅನಿವಾರ್ಯ ಪ್ರಸಂಗಗಳನ್ನು ಸಮಾಜವೇ ನಿರ್ಮಿಸಿದೆ. ನನ್ನ ಸ್ಥಾನದಲ್ಲಿ ಸ್ವತಃ ಹರಿಶ್ಚಂದ್ರನೇ ಇದ್ದರೂ, ಅವನೂ ನನ್ನಂತೆಯೇ ನಡೆದುಕೊಳ್ಳುತ್ತಿದ್ದನೆಂಬುದರಲ್ಲಿ ಯಾವ ಸಂದೇಹವಿಲ್ಲ. ಸ್ವಾತಂತ್ರ್ಯ ಹೋರಾಟಗಾರರೆಂದು ಹೇಳಿಕೊಂಡು, ಒಂದು ದಿನವೂ ಜೇಲುವಾಸವನ್ನು ಅನುಭವಿಸದ ಅನೇಕರು ಅದಾವ ರೀತಿಯಲ್ಲಿಯೋ ಹೋರಾಟಗಾರರ ಪಟ್ಟಿಯಲ್ಲಿ ಅಗ್ರಸ್ಥಾನ ಪಡೆದು, ಪಿಂಚಣಿ ಗಿಟ್ಟಿಸಿಕೊಂಡರಲ್ಲ! ಅವರಂತೆ ನಾನೇನು ನಡೆದುಕೊಂಡಿಲ್ಲವಲ್ಲ! ನನ್ನ ಪಾಪದ (ಅಥವಾ ಪುಣ್ಯದ) ಲಾಭ-ಹಾನಿಯನ್ನು ಸಮಾಜಕ್ಕೆ ಬಿಟ್ಟು ಬಿಟ್ಟಿರುವೆ. ನನಗೂ ಅವುಗಳಿಗೂ ಯಾವ ಸಂಬಂಧವೂ ಇಲ್ಲವೆಂದು ಈ ಮೂಲಕ ಘೋಷಿಸುತ್ತಲಿರುವೆ!

ನನ್ನನ್ನು ನಾಸ್ತಿಕ ಎಂದು ಕೆಲವರು ಭಾವಿಸಿದ್ದಾರೆ. ಆದರೆ, ಆದರ ನೈತಿಕ ಜವಾಬ್ದಾರಿ ಎಲ್ಲ ಪರಸ್ಪರ ವಿರೋಧಿಯಾದ ವಿವಿಧ ಧರ್ಮಗುರುಗಳಿಗೂ, ಧರ್ಮಗ್ರಂಥಗಳಿಗೂ ಸೇರುತ್ತದೆ. ನಮ್ಮ ಅಸಂಖ್ಯ ಸಂಸ್ಕೃತ ಗ್ರಂಥಗಳು ಅವುಗಳ ಭಾಷ್ಯ, ಟೀಕೆಗಳು, ಖಂಡನ-ಮಂಡನಗಳು ಆಧ್ಯಾತ್ಮದಲ್ಲಿ ನನ್ನಂಥವನಿಗೆ ದಾರಿ ತೋರಿಸುವದರ ಬದಲು, ದಿಕ್ಕು ತಪ್ಪಿಸಿದವು! ನಿಜ ಜೀವನಕ್ಕೆ ಸಂಬಂಧವಿಲ್ಲದ ಕೇವಲ ಕಲ್ಪಿತ ಮೋಕ್ಷವಿಚಾರದ ಬಗ್ಗೆ ಚರ್ಚೆ ನನ್ನಂತೆ, ಅನೇಕರಿಗೆ ನಿಷ್ಪ್ರಯೋಜಕವಾಯಿತು. ನೀತಿ-ಸದಾಚಾರ, ಸಾತ್ವಿಕ ಜೀವನಗಳನ್ನು ಕುರಿತು ಹೇಳದೆ, ಕೇವಲ ಪೂಜೆ-ಪುನಸ್ಕಾರ, ನಾಮಸ್ಮರಣೆ, ನದೀ ಸ್ನಾನಗಳ ಮಹತ್ವವನ್ನು ಹಿರಿಯರು ವಿವರಿಸಿದರು. ಅಲ್ಲದೆ, ಭಾರತದಲ್ಲಿ ಅಸಂಖ್ಯ ದೇವತೆಗಳು, ಹೊಸ ಹೊಸ ವಿಚಿತ್ರ ಬಾಬಾಗಳು ಉದಯಿಸಿದ್ದರಿಂದ, ನಾನು ಯಾರ ಪೂಜೆ ಮಾಡಬೇಕು, ಯಾರ ಶಿಷ್ಯನಾಗಬೇಕು- ಎಂಬುದು ತಿಳಿಯದೆ ಗೊಂದಲದಲ್ಲಿ ಬಿದ್ದು, ನಾನು ಹೇಗೆ ಜನಿಸಿದೆನೋ ಹಾಗೆ ಹಸುಗೂಸಿನಂತೆ ಬೆಳೆದು ಜೀವನಸಾಗಿಸಿದೆ. ನಾನು ನಾಸ್ತಿಕನಂತೆ ಕಾಣುತ್ತಿದ್ದರೆ, ಖಂಡಿತ ಆ ತಪ್ಪು ನನ್ನದಲ್ಲ! ಇಲ್ಲಿಯೂ ಸಮಾಜ ಮತ್ತು ಧರ್ಮಗುರುಗಳೇ ತಪ್ಪಿತಸ್ಥರು!

ಎಂದು ಸತ್ಯವನ್ನು ಹೇಳುತ್ತ, ಈ ಮೃತ್ಯುಪತ್ರವನ್ನು ಕೊನೆಗೊಳಿಸುತ್ತಿರುವೆ.

ಶ್ರೀ (ಅ)ಸಾಮಾನ್ಯ

## ಸುಮ್ಮನಾಗಿಸುವ ದಾರಿ

ಆ ಹುಡುಗನ ಹೆಸರು ಆರಿಫ್. ಏಳು ವರ್ಷದ ಬಾಲಕ. ಈಗ ಬಾಲಾಪರಾಧಿಗಳ ಶಾಲೆಯಲ್ಲಿದ್ದಾನೆ. ಅವನಿಗೊಂದು ಪ್ರತ್ಯೇಕ ಕೋಣೆಯಿದೆ. ಅವನ ಕಾವಲಿಗೆ ಇಬ್ಬರು ಪೊಲೀಸರು! ಯಾಕೆ?

ನಾಲ್ವರು ಮಕ್ಕಳನ್ನು ಬಾವಿಗೆ ಎಸೆದ ಅಪರಾಧಕ್ಕಾಗಿ ಈ ಶಿಕ್ಷೆ. ಕೂಸುಗಳು ಅತ್ತರೆ ಈತನಿಂದ ನೋಡಲಾಗುವುದಿಲ್ಲವಂತೆ. ಅವರನ್ನು ಸುಮ್ಮನಾಗಿಸುವುದಕ್ಕೆ ಆತ ಕಂಡುಕೊಂಡಿರುವ ಉಪಾಯವೆಂದರೆ ಮಗುವನ್ನೆತ್ತಿ ಬಾವಿಗೆಸೆದು ಬಿಡುವುದು. ಹೀಗೆ ಎಸೆಯುವ ಹೊತ್ತಿನಲ್ಲೇ ಒಮ್ಮೆ ಸಿಕ್ಕುಬಿದ್ದ. ಪೊಲೀಸು ಅತಿಥಿಯಾದ.

ಆರಿಫ್ ಎರಡು-ಮೂರು ವರ್ಷದವನಿದ್ದಾಗ ತುಂಬ ಅಳುತ್ತಿದ್ದ. ಆದಾಗಲೇ ತಾಯಿಯನ್ನು ಬೇರೆ ಕಳಕೊಂಡಿದ್ದ. ಅಪ್ಪ ಮತ್ತೊಂದು ಮದುವೆ ಮಾಡಿಕೊಂಡು ಆರಿಫ್‌ನನ್ನು ಮಲತಾಯಿಯ ಉಡಿಗೆ ಹಾಕಿದ. ಆದರೆ ಅಳುವ ಈ ಹುಡುಗನನ್ನು ಆಕೆ, "ಬಾವಿಗೆ ಎಸೆದುಬಿಡುತ್ತೇನೆ ನೋಡು" ಎಂದು ಹೆದರಿಸುತ್ತಿದ್ದಳು.

ಹೀಗೇ ಬೆಳೆದ ಹುಡುಗನಿಗೆ ಅಳುವ ಮಗುವನ್ನು ಸುಮ್ಮನಾಗಿಸುವ ದಾರಿ ಕಂಡಿತು. ಯಾವುದೇ ಮಗು ಅತ್ತದ್ದು ಕೇಳಿದರೂ ಸರಿ ಅದನ್ನೆತ್ತಿಕೊಂಡು ಓಡತೊಡಗಿದ.

# ಸೂರ್ಯಗಳಲ್ಲಿ ಮುಖಗಳು



ನೀವು ನಿತ್ಯ ನೋಡುತ್ತೀರಿ ನಿಲ್ದಾಣಗಳಲ್ಲಿ ಮತ್ತು
ಕ್ರೂರ ಕಚೇರಿಗಳೆದುರು ಕಾಯುತ್ತ ಬೇಸರಿಸುವ,
ಅನಾಸಕ್ತ ಸೂರ್ಯನಿಗೆ ಬೆನ್ನೊಡ್ಡಿ ನಿಂತಿರುವ
ಅಸಂಖ್ಯಾತ ಉತ್ಸುಕ ಜನರ ಮುಖಗಳನ್ನು.

ಸಪಾಟು, ದುಂಡು, ಕೋಲು ಮುಖಗಳು ಕೆಲವು
ಉದ್ದೇಶ ಪೂರ್ವಕ ಮುಗುಳು ಮಿಂಚಿಸುವ ಚಹರೆಗಳು.
ತಮ್ಮ ಗುರುತು ಮರ್ಮಗಳ ಬಚ್ಚಿಡಲು ಯತ್ನಿಸುವ, ನೇರ
ಅಥವಾ ಓರೆನೋಟದ ಕೃತಕ-ಕೋಮಲ ಪಹರೆಗಳು.

ದೇವ ದೇವಿಯರಂತೆ ಶಿಲ್ಪಗೊಂಡ ಆಕೃತಿಗಳ ಚೆಲುವು
ದಂತಕತೆ ಪುರಾಣಗಳಿಂದೆದ್ದು ಬಂದ ಜೀವಂತ ಪ್ರತಿಮೆಗಳು.
ಋಷಿ ಮುನಿ ಸಂತ ನದಿ ಪರ್ವತ ಹೂವುಗಳ ಮತ್ತು
ಅಲೌಕಿಕ, ಸ್ವರ್ಗೀಯ ಅಪ್ಸರೆಯರನ್ನು ನೆನಪಿಸುವವರು.

ಕೈಗೊಂಡ ಕಾರ್ಯಗಳ ಸಫಲತೆಗಾಗಿ ತವಕಿಸುವ
ಆತ್ಮವಿಶ್ವಾಸ ಸೂಸುವ ಕೆಲ ಯುವಕ ಯುವತಿಯರು
ವಿಫಲತೆಗಳ ಕುರಿತು ಕಮ್ಮಿ ಹತಾಶರಾಗುವ ಬದಲು,
ತಮ್ಮ ಶಂಕೆಗಳೇ ಹೆಚ್ಚು ದಿಟವೆಂದು ಭಯಗೊಂಡ ಕೆಲವರು.



ಕೆಲವರು ಕೇವಲ ಮೃಗಜಲಗಳ ಹಿಂಬಾಲಿಸಿ ಸೋತು
ತಮ್ಮ ಭ್ರಮ ನಿರಸನಗಳನ್ನು ಮರೆಯಲೆತ್ನಿಸುವವರು.
ಕೆಲವರು ದೂರದ ನುಣ್ಣನೆಯ ಬೆಟ್ಟಸಾಲುಗಳ ದಿಟ್ಟಿಸುತ
ಆದರಾಚೆಯ ಕಣಿವೆಗಳ ಕಲ್ಪನೆಯಲ್ಲಿ ಮೈಮರೆತವರು.

ಪ್ರತಿಯೊಬ್ಬನೂ-ಒಬ್ಬಳೂ- ತನ್ನ ಮಾಯಾನಗರಿಯನ್ನು
ಕುಸಿದ ಕಣ್ಣಿವೆಗಳ ಸುತ್ತ ಸಿಂಗರಿಸಿಕೊಂಡು
ಅನಿಶ್ಚಿತತೆ ತಮ್ಮ ಭರವಸೆಗಳಿಗೆ ಆತಂಕ ಒಡ್ಡಿದರೂ
ಜಾರುತ್ತಿರುವ ಅವಕಾಶಗಳ ಬೆನ್ನು ಬಿಡಲಾರದವರು.

ತಮ್ಮ ಹರಯದ ದಿನಗಳನ್ನು ಮೀರಿ ಬೆಳೆಯುತ್ತ
ತಮ್ಮ ವಿವಾಹ ಪ್ರಾಯಗಳನ್ನು ಮೀರಿ ಬೆಳೆಯುತ್ತ
ತಮ್ಮ ಆಪ್ತ ಆಕಾಂಕ್ಷೆಗಳನ್ನು ಮೀರಿ ಬೆಳೆಯುತ್ತ
ಅದೃಶ್ಯ ಗುರಿಗಳೆಡೆ ಕಾಲೆಳೆಯುತ್ತ ಅಥವ ಓಡುತ್ತ

ಏನನ್ನೂ ಸಾಧಿಸದ ಸ್ಥಿತಿ ತಲುಪಿ ವಿಷಾದಿಸುವವರು
ಇನ್ನೊಂದು ದಿನ ಕಳೆಯಿತು, ಇನ್ನೊಂದು ಮಾಸ,
ಇನ್ನೊಂದು ವರುಷ ಭಯಭಗ್ನತೆಗಳ ಪದರುಗಳನ್ನು
ಪೇರಿಸುವ ಕಟು ಸತ್ಯವನು ಮೀರಲಾಗದ ಉಪಹಾಸ.

ಸಣ್ಣವೇ ಇರಲಿ, ಸರ್ಪ-ಸುತ್ತುಗಳಂತೆಯೇ ಇರಲಿ
ಎಂದೆಂದಿಗೂ 'ಕ್ಯೂ'ಗಳು ಕಲೆತು ಚದರುವುವು
ಆದರೆ ತರಹೇವಾರಿ ಉತ್ಸುಕ ಮುಖಗಳು ಮಾತ್ರ
ಒಂದೊಂದಾಗಿ ತಮ್ಮ ಜಾಗಗಳ ಬದಲಿಸುವುವು.

• ಅಬ್ದುಲ್ ಮಜೀದ್ ಖಾನ್

# ಬೇಂದ್ರೆ ನೆನಪು

ಗಾಲವ ಋಷಿಯ ತಪೋ ನಿಕುಂಜ (ಗಲಗಲಿ), ಪೆರ್ದೊರೆಯ ಪುಣ್ಯ ಭೂಮಿಯಲ್ಲಿ ನನ್ನ ಬಾಲ್ಯದ ಚಟುವಟಿಕೆಗಳು. ಆಗಿನಿಂದಲೇ ಬೇಂದ್ರೆಯವರ 'ಗರಿ,' 'ನಾದಲೀಲೆ,' 'ಉಯ್ಯಾಲೆ,' 'ಸಖೀಗೀತ' ಮುಂತಾದ ಕವನ ಸಂಗ್ರಹಗಳ ಕವಿತೆಗಳೆಲ್ಲ ಕಂಠಸ್ಥ. ಇದಕ್ಕೆಲ್ಲ ಪ್ರೇರಣೆ ನನ್ನ ಕಕ್ಕನ ಮಗ 'ಬಾಳು.' ಕುಂಟನಾಗಿದ್ದ ಆತನದು ಸುಮಧುರ ಕಂಠ. ಸತ್ಯಕಾಮರಂತೂ ಆತನನ್ನು 'ಗಾಲವಕಿನ್ನರಿ' ಎಂದೇ ಕರೆಯುತ್ತಿದ್ದರು. ಇದೆಲ್ಲ ೧೯೪೦ರಿಂದ ೪೫ರ ಅವಧಿಯ ಮಾತು. 'ಗಾಲವಕಿನ್ನರಿ' ಕಾಲನೂರಿಗೆ ಕಾಲು ಕಿತ್ತಿದ ಮೇಲೆ ಗಲಗಲಿ ಮೂಕವಾಯಿತು. ಬೇಂದ್ರೆಯವರ ಕವ



## ಮದುವೆಗೆ ಮಧ್ಯಸ್ಥ!

# ಬಿಸ್ಕತ್ತು ಕೊಟ್ಟರು!

ಸುಮಾರು ೧೯೭೭-೭೭ರ ನವೆಂಬರ್ ಅಥವಾ ಡಿಸೆಂಬರ್ ತಿಂಗಳಿರಬಹುದು. ಆರನೇ ತರಗತಿಯ ವಿದ್ಯಾರ್ಥಿಯಾಗಿದ್ದ ನನಗೆ ಸಾಹಿತ್ಯದ ಬಗೆಗೆ ಸರಿಯಾದ ತಿಳುವಳಿಕೆಯಿರದಿದ್ದರೂ ವರ ಕವಿ ಬೇಂದ್ರೆಯವರು ಕನ್ನಡ ಭಾಷೆಯ ಸುಪ್ರಸಿದ್ಧ ಕವಿಗಳೆಂಬುದು ಗೊತ್ತಿತ್ತು. ಗುಲಬರ್ಗಾ ನಗರದ ಬ್ರಹ್ಮಪುರ ಬಡಾವಣೆಯಲ್ಲಿ ನಮ್ಮ ಮನೆ. ಪಕ್ಕದಲ್ಲಿಯೇ ಭಾರತದ ಪ್ರಸಿದ್ಧ ಚಿತ್ರಕಲಾವಿದರಾಗಿದ್ದ ದಿ. ಎಸ್.ಎಮ್. ಪಂಡಿತರ ಕಲಾಗುರು ಶಂಕರ್‌ರಾವ್ ಆಳಂದಕರರ ಮನೆ. ಆಳಂದಕರರು ಬೇಂದ್ರೆಯವರ ಮಿತ್ರರಾಗಿದ್ದರಂತೆ. ಗುಲಬರ್ಗಕ್ಕೆ ಬಂದ ಬೇಂದ್ರೆಯವರು ತಮ್ಮ ಆ ಮಿತ್ರರ ಮನೆಗೂ ಆಗಮಿಸಿದ್ದರು. (ಆ ಹೊತ್ತಿಗಾಗಲೇ ಆಳಂದಕರರು ಸ್ವರ್ಗವಾಸಿಗಳಾಗಿ ಸುಮಾರು ವರ್ಷಗಳಾಗಿದ್ದವು.) ಬೆಳಗಿನ ಹತ್ತು ಗಂಟೆಯ ಸಮಯ ಅದು. ಆಳಂದಕರರ ಮನೆಯ ಎದುರಿಗೆ ಬಹಳ ಜನ ನಿಂತಿರುವುದನ್ನು ಗಮನಿಸಿದ ನಾನು ಅಲ್ಲಿಗೆ ಹೋದೆ. ಇಣುಕಿಕ್ಕಿದೆ. ನಡುಮನೆಯಲ್ಲಿ ಹಾಸಿದ್ದ ಚಾಪೆಯ ಮೇಲೆ ಬೇಂದ್ರೆಯವರು, ಅವರ ಅಕ್ಕಪಕ್ಕದಲ್ಲಿ ಕೆಲವು ಹಿರಿಯರು ಕುಳಿತಿದ್ದರು. ನಾನು ಹಾಗೇ ಒಳಗೆ ನುಸುಳಿದೆ. ಸಂಬಂಧಿಕರು ತೋರಿಸುತ್ತಿದ್ದ ಆಳಂದಕರರ ಸುಂದರ ಕಲಾಕೃತಿಗಳನ್ನು ಬೇಂದ್ರೆಯವರು ಏಕಾಗ್ರತೆಯಿಂದ ನೋಡುತ್ತಿದ್ದರು. ಆದರೆ ನಾನು ಮಾತ್ರ ಕಣ್ಣು ಪಿಳುಕಿಸದೇ ಬೇಂದ್ರೆಯವರನ್ನೇ ನೋಡುತ್ತಿದ್ದೆ. ಅದೇ ಸಮಯಕ್ಕೆ ಚಹಾ-ಬಿಸ್ಕತ್ತುಗಳ ಸರಬರಾಜಾಯಿತು.

ಬೇಂದ್ರೆಯವರು ಅಲ್ಲಿ ಕುಳಿತವರಲ್ಲಿಯೇ ಚಿಕ್ಕವನಾದ ನನ್ನ ತಲೆಯ ಮೇಲೆ ತಮಾಷೆಗಾಗಿ ಹೊಡೆದು ನನಗೆ ಬಿಸ್ಕತ್ತು ಕೊಟ್ಟು ತಾವು ಬರೀ ಚಹ ಕುಡಿದರು. ಅಂದು ಬೇಂದ್ರೆಯವರ ಪವಿತ್ರ ಕೈಗಳಿಂದ ತಲೆ ಮುಟ್ಟಿಸಿಕೊಂಡು, ಬಿಸ್ಕತ್ತು ಪಡೆದು ತಿಂದ ನಾನು ಇಂದಿಗೂ ಆ ಸ್ಪರ್ಶ ಆ ಆತ್ಮೀಯತೆಯನ್ನು ಮೆಲಕು ಹಾಕುತ್ತಿರುತ್ತೇನೆ.

**• ರಾಮರಾವ್ ಟಿ. ಮಾಹೂರಕರ್**

---

ನಗಳ ವಾಚನಕ್ಕೂ ಬ್ರೇಕ್‌ಬಿತ್ತು.

ನಾನು ಪ್ರಾಥಮಿಕ ಶಾಲೆಯ ವಿದ್ಯಾರ್ಥಿಯಾಗಿದ್ದಾಗ ನಮ್ಮೂರು ನಿಜಕ್ಕೂ ಸಾಂಸ್ಕೃತಿಕ ಚಟುವಟಿಕೆಗಳ ತವರೂರು. ನೃಸಿಂಹದೇವರ ಉತ್ಸವವು ಒಳ್ಳೆ ವಿಜೃಂಭಣೆಯಿಂದ ಜರುಗುತ್ತಿತ್ತು. ಆ ಸಂದರ್ಭವನ್ನು ಉಪಯೋಗಿಸಿಕೊಂಡು ವಾರದುದ್ದಕ್ಕೂ ಏಕಾಂಕ ನಾಟಕ, ಕಾವ್ಯವಾಚನ, ಭಾಷಣ, ಈಜು-ಓಟಗಳ ಸ್ಪರ್ಧೆಗಳು. ಬೇಂದ್ರೆ, ಎನ್ಕೆ ಮಾಳವಾಡ, ಶಂಬಾ, ಬೆಟಗೇರಿ ಮುಂತಾದ ಹಿರಿಯ ಸಾಹಿತಿಗಳನ್ನು ಕರೆಸುವ ಪರಿಪಾಠ. ಇವರೆಲ್ಲ ನಮ್ಮ ತಂದೆ (ಪಂ. ಕೇಶವಶರ್ಮಾ ಗಲಗಲಿ)ಯವರ ಸೌಜನ್ಯಕ್ಕೆ ಕಟ್ಟುಬಿದ್ದು ಬಂದು ಹೋಗುತ್ತಿದ್ದರು. ಅಂತೂ ಆಗಿನ 'ವಸಂತೋತ್ಸವ'ಗಳೆಲ್ಲ ತುಂಬ ಯಶಸ್ವಿ.

ಒಂದು ಸಲ ಬೇಂದ್ರೆಯವರು ಅತಿಥಿ. ಅವರದೇ 'ಜಾತ್ರೆ' ನಾಟಕ ಆಡಿದೆವು. ಅದರಲ್ಲಿಯ ನನ್ನ ಪಾತ್ರವನ್ನು ಮೆಚ್ಚಿ ಎರಡು ರೂಪಾಯಿ ಬಹುಮಾನವಿತ್ತರು ಬೇಂದ್ರೆ. ಜತೆಗೆ ಶಬ್ಬಾಸ್ ಎಂದು ಬೆನ್ನ ಮೇಲೊಂದು ಗುದ್ದು. ಅಂದು ಸಂಜೆ ನಮ್ಮೂರ ನದಿಯಲ್ಲಿ ಬೇಂದ್ರೆಯವರೊಂದಿಗೆ ನೌಕಾಯಾನ. ಆಗ ಅವರೊಂದು ಆಶುಕವಿತೆ ಕಟ್ಟಿದರು. ಅದನ್ನೇ ಎರಡೆರಡು ಸಲ ಹೇಳಿ ನನ್ನಿಂದಲೂ ಹೇಳಿಸಿದರು.

ಮುಂದೆ ನಮ್ಮ ಕುಟುಂಬ ಗಲಗಲಿಯಿಂದ ಧಾರವಾಡಕ್ಕೆ ಬಂದು ನೆಲೆನಿಂತಿತು. ತಂದೆಯವರು ನಿವೃತ್ತರಾಗಿದ್ದರು. ಸಾಧನಕೇರಿಯ ಆಲೂರ ವೆಂಕಟರಾಯರ ಪುರಾತನ ಮನೆಯಲ್ಲಿ ನಮ್ಮ ವಾಸ. ಆ ವಿಶಾಲವಾದ ಮನೆಗೆ ಒಮ್ಮೆ ಭಾರತದ

ಹಿಂದಿನ ಪ್ರಧಾನಿ ದಿ. ಮೊರಾರ್ಜಿ ದೇಸಾಯಿಯವರು ಬಂದು ನಮ್ಮ ತಂದೆಯವರೊಂದಿಗೆ ಚರ್ಚೆ ನಡೆಸಿದ್ದುದಿನ್ನೂ ನನಗೆ ನೆನಪಿದೆ. ಸಾಧನಕೇರಿ ಅಂದ ಮೇಲೆ ಕೇಳಬೇಕೆ? ಬೇಂದ್ರೆಯವರ ಆಡುಂಬೊಲ ಅದು. ಅವರೂ, ಆಲೂರ ವೆಂಕಟರಾಯರೂ ಶ್ರೀರಂಗ-ಬೆಟಗೇರಿ ಮೊಹರೆ ಹಣಮಂತರಾಯರೇ ಮುಂತಾದ ಘಟಾನುಘಟಿಗಳೂ ನಮ್ಮ ತಂದೆಯವರೊಂದಿಗೆ ಅರ್ಥಪೂರ್ಣ ಚರ್ಚೆ ನಡೆಸಲು ಆಗೀಗ ಬರುತ್ತಿದ್ದರು. ಬೇಂದ್ರೆಯವರ ವಾಡಿಕೆಯೆ ಜಾಸ್ತಿ. ಆಗೆಲ್ಲ ಅವರು ತಮ್ಮದ್ದೊಂದು ಕವನ ಹಾಡಿ ನಮ್ಮನ್ನೆಲ್ಲ ಮಂತ್ರ ಮುಗ್ಧರನ್ನಾಗಿಸಿಬಿಡುತ್ತಿದ್ದರು. ಅವೆಲ್ಲ ನಮ್ಮ ಪಾಲಿನ ರಸಮಯ ಸನ್ನಿವೇಶಗಳು. ಅವರನ್ನೇ ಅನುಕರಿಸಿ ಹಾಡಿ ಅವರಿಂದಲೇ ಬೆನ್ನು ತಟ್ಟಿಸಿಕೊಳ್ಳುವ ಸೌಭಾಗ್ಯ ನನ್ನದಾಗಿರುತ್ತಿತ್ತು.

ನನ್ನ ಮದುವೆಗೆ ಬೇಂದ್ರೆಯವರದೇ ಮಧ್ಯಸ್ಥಿಕೆ. ಗದುಗಿನ ಸುಪ್ರಸಿದ್ಧ ಸಮಿತಿ ಹೈಸ್ಕೂಲನ್ನು ಹುಟ್ಟುಹಾಕಿ ಬೆಳೆಸಿದ ಹುನಗುಂದ ಮಾಸ್ತರರು ಅಲ್ಲಿಂದ ವಿಜಾಪುರದ ದರ್ಬಾರ್ ಟ್ರೇನಿಂಗ್ ಕಾಲೇಜಿಗೆ ಪ್ರಿನ್ಸಿಪಾಲರಾಗಿ ಹೋದರು. ಅವರ ಸ್ಥಾನವನ್ನು ಬೇಂದ್ರೆಯವರು ತುಂಬಿದರು. ಪಾಪ, ಮುಂದೆ ಹುನಗುಂದ ಮಾಸ್ತರರು ತಮ್ಮ ವಿದ್ಯಾರ್ಥಿಗಳಿಂದಲೇ ಇರಿತಕ್ಕೆ ಬಲಿಯಾದರು. ಅವರ ಮಕ್ಕಳು (ಇಬ್ಬರು ಗಂಡು, ಐದು ಜನ ಹೆಣ್ಣು) ನಿರಾಶ್ರಿತರಂತಾದರು. ಅವರೆಲ್ಲ ಆಗ ಅಲ್ಪವಯಿಗಳು. ಮಾಸ್ತರರ ಮಿತ್ರರೆಲ್ಲ ಸೇರಿಕೊಂಡು ನಿಧಿ ಸಂಗ್ರಹಿಸಿ, ಹೆಣ್ಣು ಮಕ್ಕಳ ಮದುವೆಗೆಂದು ತಲಾ ಎಂಟುನೂರು ರೂಪಾಯಿಗಳಂತೆ ಬ್ಯಾಂಕಿನಲ್ಲಿ ಠೇವಣಿಯಿಟ್ಟರು. ಮುಂದೆ ಬೇಂದ್ರೆಯವರೊಮ್ಮೆ ನಮ್ಮ ಮನೆಗೆ ಬಂದಾಗ, "ಪಂಡಿತರೆ, ನಿಮ್ಮ ಎರಡನೆಯ ಮಗನಿಗೆ ಹುನಗುಂದ ಮಾಸ್ತರರ ಮಗಳನ್ನೇಕೆ ತೆಗೆದುಕೊಳ್ಳಬಾರದು?" ಎಂದು ನನ್ನ ತಂದೆಯವರನ್ನು ಒಳ್ಳೆ ಸಲುಗೆಯಿಂದಲೇ ಕೇಳಿದರು. ಜ್ಯೋತಿಷ್ಯ ಶಾಸ್ತ್ರವನ್ನು ಆಳವಾಗಿ ಬಲ್ಲ ನನ್ನ ತಂದೆ ಜಾತಕ-ಗೀತಕ ಎಂದು ಕೇಳದೆಯೆ, "ಬೇಂದ್ರೆಯವರೇ, ನೀವು ಹೇಳಿದ್ದೀರೆಂದ ಮೇಲೆ ಹಾಗೇ ಆಗಲಿ," ಎಂದು ಒಪ್ಪಿಗೆ ಕೊಟ್ಟುಬಿಟ್ಟರು. ಯಾವುದೇ ಆಡಂಬರವಿಲ್ಲದೆಯೆ ನನ್ನ ಮದುವೆ ಬೇಂದ್ರೆಯವರ ಶುಭೇಚ್ಛೆಗಳೊಂದಿಗೆ ಸಾಂಗವಾಗಿ ನೆರವೇರಿತು.

ನಮ್ಮ ತಂದೆಯವರ ನಿಧನಾನಂತರವೂ ಬೇಂದ್ರೆಯವರು ನಮ್ಮ ಮನೆಗೆ ಬಂದು, ನಮ್ಮ ಜೊತೆಗೂಡಿ, ಮಾತನಾಡಿ, ನಕ್ಕು-ನಗಿಸಿ ಹೋಗಿರುವ ಸಂದರ್ಭಗಳೂ ಅನೇಕ. ಹಾಗೆ ಬಂದಾಗೊಮ್ಮೆ ಅವರೊಂದಿಗೆ ತೆಗೆಸಿಕೊಂಡ ಫೋಟೋಗಳು ಬೇಂದ್ರೆ ನೆನಪನ್ನು ಇನ್ನಷ್ಟು ಗಟ್ಟಿಗೊಳಿಸುತ್ತವೆ.

• ಎಸ್.ಕೆ. ಜೋಶಿ

## ತೋಳ ಸಾಕಿದ ಮಗು

**ಪ್ರಾ**ಣಿಗಳು ಸಾಕಿದ ಮಕ್ಕಳ ವಿಚಾರಗಳನ್ನು ನಾವು ಕಥೆ, ಸಿನಿಮಾಗಳಲ್ಲಿ ನೋಡಿ ತಿಳಿದಿರಬಹುದು. ಆದರೆ, ನಿಜವಾಗಿಯೂ ತೋಳಗಳು ಒಂದು ಮಗುವನ್ನು ಸಾಕಿದ ಪ್ರಸಂಗ ಬಂಗಾಳದ ಮಿಡ್ನಾಪುರದಲ್ಲಿ ಜರುಗಿದೆಯಂತೆ. ೧೯೧೨ರಲ್ಲಿ ಕಮಲ ಎಂಬ ಮಗುವನ್ನು ತೋಳ ಕಚ್ಚಿಕೊಂಡು ಕಾಡಿಗೆ ಹೋಗಿ ತನ್ನ ಮರಿಗಳೊಂದಿಗೆ ಸಾಕಿತಂತೆ! ಎಂಟು ವರ್ಷದ ನಂತರ ಕೆಲವು ಪ್ರಯಾಣಿಕರು ತೋಳಗಳನ್ನು ಓಡಿಸಿ, ಆ ಮಗುವನ್ನು ರಕ್ಷಿಸಿದರಂತೆ! ಮುಂದೆ ಮಿಡ್ನಾಪುರದ ಅನಾಥಾಶ್ರಮದಲ್ಲಿ ಬೆಳೆದ ಈ ಹುಡುಗಿ ನಾಲ್ಕೂ ಕಾಲುಗಳ ಮೇಲೆ ಅಡ್ಡಾಡುತ್ತ ತೋಳದಂತೆಯೇ ಕೂಗುತ್ತಿದ್ದಳಂತೆ!

• ನಾರಾಯಣ ರೈ ಕುಕ್ಕುವಳ್ಳಿ

## ಜ್ಞಾನದ ಖಜಾನೆ:



# ಮುಂಬಯಿಯ ಏಶಿಯಾಟಿಕ್ ಸೊಸೈಟಿ ಗ್ರಂಥಾಲಯ

• ರತ್ನಾಕರ ಶೆಟ್ಟಿ

ಜ್ಞಾನ, ಸಂಶೋಧನೆ, ಸಂಸ್ಕೃತಿ ಇವು ಮೂರರ ಬಲವರ್ಧನೆಗಾಗಿ ಸಮರ್ಪಿತವಾಗಿದ್ದು ಇಂಗ್ಲೆಂಡಿನಲ್ಲಿ ಸ್ಥಾಪಿತವಾದ ರಾಯಲ್ ಏಶಿಯಾಟಿಕ್ ಸೊಸೈಟಿಯ ನಾಲ್ಕು ಶಾಖೆಗಳು ಭಾರತದಲ್ಲಿ ಇಂದಿಗೂ ಕಾರ್ಯನಿರತವಾಗಿವೆ. ವಾಣಿಜ್ಯೋದ್ಯಮಗಳು ಬೆಳೆದುಬಂದಂತೆ ಮುಂಬಯಿಯು ಸಂಪದ್ಭರಿತವಾಗುತ್ತಾ ಭಾರತದ ಆರ್ಥಿಕ ರಾಜಧಾನಿಯಾಗಿ ರೂಪುಗೊಂಡ ಇತಿಹಾಸದೊಂದಿಗೆ ಜ್ಞಾನ ಸಂಪಾದನೆ ಮತ್ತು ಗ್ರಂಥಗಳ ಸಂಗೋಪನೆಗಳ ಇತಿಹಾಸವೂ ಕಳೆತುಂಬಿಕೊಂಡುದಕ್ಕೆ ಸಾಕ್ಷಿಯಾಗಿ ಮುಂಬಯಿಯ ಕೋಟೆ ಪ್ರದೇಶದಲ್ಲಿ ಏಶಿಯಾಟಿಕ್ ಲೈಬ್ರರಿಯ ಬಹು ಸುಂದರ ಕಟ್ಟಡವು ತಲೆ ಎತ್ತಿ ನಿಂತಿದೆ. ಬ್ರಿಟಿಶರ ಕಾಲದ ಉತ್ತಮ ಸ್ಥಾಪತ್ಯ ಶೈಲಿಯಲ್ಲಿ ಕಟ್ಟಲ್ಪಟ್ಟ ಈ ಇಮಾರತಿಯ ಇತಿಹಾಸವು ಸುಮಾರು ಇನ್ನೂರು ವರ್ಷಗಳ ಹಿಂದಿನಿಂದ ಆರಂಭವಾಗುತ್ತದೆ. ಮುಂಬಯಿ ಶಾಖೆಯು ಸ್ಥಾಪನೆಗೊಂಡದ್ದು ೧೮೦೪ರಲ್ಲಿ. ಎಂಟು ಬೃಹತ್ ಕಂಬಗಳುಳ್ಳ ಮೊಗಸಾಲೆಯು ಎತ್ತರದಲ್ಲಿ ಕಾಣುತ್ತಿದ್ದರೆ, ಅಲ್ಲಿಯವರೆಗೆ ಹತ್ತಿಹೋಗಲು ಬಹು ಅಗಲವಾದ ವಿಶಿಷ್ಟ ಮೆಟ್ಟಲುಗಳು. ಜ್ಞಾನ ದೇಗುಲಕ್ಕೆ ಸರ್ವರನ್ನೂ ಆಹ್ವಾನಿಸುತ್ತಿರುವ, ಔನ್ನತ್ಯದತ್ತ ಏರಿ ಹೋಗಲು ಈ ವಿಶಾಲ ಮೆಟ್ಟಲುಗಳು.

ರಾಯಲ್ ಏಶಿಯಾಟಿಕ್ ಸೊಸೈಟಿಯ ಸದಸ್ಯತ್ವದ ಗೌರವವಿದ್ದದ್ದು ಪ್ರಾರಂಭದಲ್ಲಿ ಯುರೋಪಿಯನ್ನರಿಗೆ ಮಾತ್ರ. ಅದನ್ನು ಪಡೆಯಲು ಚುನಾವಣಾ ಪದ್ಧತಿಯನ್ನು ಅನುಸರಿಸಬೇಕಿತ್ತು. ೧೮೩೨ರಲ್ಲಿ ಪಾರಸೀ ಸಮುದಾಯದ ಗೌರವಾನ್ವಿತರಾದ ಮಾನೇಕ್‌ಜೀ ಕರ್‌ಸೇಟ್‌ಜೀ ಎಂಬವರು ಭಾರತೀಯನಾಗಿ ಈ ಸೊಸೈಟಿಯ ಸದಸ್ಯತ್ವವನ್ನು ಪಡೆಯಲು ಉಮೇದುವಾರಿಕೆಯ ಅರ್ಜಿಯನ್ನು ಸಲ್ಲಿಸಿದರಾದರೂ ಮಾನ್ಯತೆ ದೊರೆಯಲಿಲ್ಲ. ನೊಂದುಕೊಂಡರೂ ಮಾನೇಕ್‌ಜೀ ನಿರಾಶರಾಗಲಿಲ್ಲ. ಮುಂದೆ ಲಂಡನ್ನಿಗೆ ಹೋಗಿದ್ದಾಗ ಅವರು ಅಲ್ಲಿಯ ರಾಯಲ್ ಏಶಿಯಾಟಿಕ್ ಸೊಸೈಟಿಯ ಅನಿವಾಸಿ ಸದಸ್ಯನಾಗಿ ನೇಮಕಗೊಂಡರು. ೧೮೪೦ರಲ್ಲಿ ಮತ್ತೊಮ್ಮೆ ಮುಂಬಯಿ ಶಾಖೆಯ ಸದಸ್ಯತ್ವಕ್ಕೆ ಅರ್ಜಿಯನ್ನು ಹಾಕಿದರು. ಅದು ಪುರ

ಸ್ಥಾಪಿಸಲ್ಪಟ್ಟು ಅವರು ಏಶಿಯಾಟಿಕ್ ಸೊಸೈಟಿಯ ಮೊತ್ತ ಮೊದಲ ಭಾರತೀಯ ಸದಸ್ಯರಾದರು. ಆನಂತರ ಭಾರತೀಯರಿಗೆ ಸೊಸೈಟಿಯ ಮಹಾದ್ವಾರವು ತೆರೆದುಕೊಂಡಿತೆಂದೇ ಹೇಳಬೇಕು. ಅಂತಾರಾಷ್ಟ್ರೀಯ ಖ್ಯಾತಿಯ ಭಾರತೀಯ ಡಾಕ್ಟರ್ ಭಾವೂ ದಾಜೀ ಲಾಡ್ ಅದರ ಸದಸ್ಯರಾದರು. ಡಾ. ಲಾಡ್ ಅವರಿಗೆ ಭಾರತದ ಪ್ರಾಚೀನ ಭಾಷೆಗಳ ಮೇಲೆ ಅಸಾಮಾನ್ಯವಾದ ಆಸಕ್ತಿ. ಅನೇಕ ಸಂಸ್ಕೃತ ಗ್ರಂಥಗಳನ್ನು, ಹಸ್ತಲಿಖಿತ ಸಾಮಗ್ರಿಗಳನ್ನು ಸಂಗ್ರಹಿಸಿಟ್ಟುಕೊಂಡಿದ್ದರು. ೧೮೭೪ರಲ್ಲಿ ಅವರು ತೀರಿ ಹೋದ ಮೇಲೆ ಅವರಲ್ಲಿದ್ದ ಅಪೂರ್ವ ಗ್ರಂಥಗಳು, ಪಾಂಡುಲಿಪಿಯ ಪ್ರತಿಗಳು ಸೊಸೈಟಿಯ ಗ್ರಂಥ ಭಂಡಾರಕ್ಕೆ ಸೇರ್ಪಡೆಯಾದುವು. ಆ ಕಾಲದ ಸುಪ್ರಸಿದ್ಧ ಉದ್ಯಮಿಗಳೂ ಜನಸೇವಾನಿರತರೂ ಆಗಿದ್ದ ಸರ್ ಕಾವಸ್‌ಜೀ ಜಹಾಂಗೀರ್ ಮತ್ತು ಜಗನ್ನಾಥ ಶಂಕರ ಶೇಟ್ ಇವರು ಸೊಸೈಟಿಯ ಸಾಂಸ್ಕೃತಿಕ ಸಂಗ್ರಹವನ್ನು ಸಮೃದ್ಧಗೊಳಿಸುವಲ್ಲಿ ಮುಕ್ತ ಹಸ್ತಗಳಿಂದ ನೆರವಾದರು. ಅನೇಕ ಬೆಲೆಬಾಳುವ ಕಾಣಿಕೆಗಳನ್ನು ನೀಡಿದರು. ಅಂತೆಯೇ ಕಾಲಕಾಲಕ್ಕೆ ಇತರ ಅನೇಕ ಶುಭಚಿಂತಕರು ಸೊಸೈಟಿಯ ಪುಸ್ತಕಾಲಯ ಮತ್ತು ವಸ್ತು ಸಂಗ್ರಹಾಲಯಗಳಿಗೆ ತಮ್ಮ ಕೊಡುಗೆಗಳನ್ನು ನೀಡುತ್ತಾ ಬಂದರು. ಸೊಸೈಟಿಯ ಕಾರುಭಾರುಗಳ ಖರ್ಚಿಗೂ ಸಾಕಷ್ಟು ಧನವು ದಾನ ರೂಪದಲ್ಲಿ ಒದಗಿ ಬರುತ್ತಲೇ ಇತ್ತು. ಸೊಸೈಟಿಯ ಭಂಡಾರಕ್ಕೆ ಅನೇಕ ದುರ್ಲಭ ಹಾಗೂ ಅಮೂಲ್ಯವಾದ ವಸ್ತುಗಳು ಸೇರ್ಪಡೆಯಾಗುತ್ತಲೇ ಇದ್ದವು.

ಟೌನ್‌ಹಾಲ್, ನಗರಭವನ, ಸೆಂಟ್ರಲ್ ಲೈಬ್ರರಿ, ಏಶಿಯಾಟಿಕ್ ಲೈಬ್ರರಿ ಎಂದೆಲ್ಲ ಕರೆಯಲ್ಪಡುವ ಈ ಜ್ಞಾನ ಖಜಾನೆಯಲ್ಲಿ ವಿವಿಧ ಭಾಷೆಗಳ ವಿಭಿನ್ನ ವಿಷಯಗಳ ಲಕ್ಷಗಟ್ಟಲೇ ಗ್ರಂಥಗಳ ರಾಶಿ ಇದೆ. ದುರ್ಲಭ ಹಸ್ತಲಿಖಿತ ಪ್ರತಿಗಳು ನೂರಾರಿವೆ. ಸಾವಿರಗಟ್ಟಲೆ ಇತರ ಬೆಲೆಬಾಳುವ ವಸ್ತುಗಳು ಸಂಗ್ರಹಗೊಂಡಿವೆ. ಅವುಗಳನ್ನು ಯೋಗ್ಯ ರೀತಿಯಲ್ಲಿ ರಕ್ಷಿಸಿಡಲು ಅಲ್ಲಿ ಯಥಾಸಂಭವ ಉತ್ತಮ ವ್ಯವಸ್ಥೆಯಿದೆ. ಪ್ರಾಚೀನ ಹಸ್ತಪ್ರತಿಗಳು, ಚಿತ್ರಗಳು ಮತ್ತು ಮೂರ್ತಿಗಳ ಸಂರಕ್ಷಣೆಯ ಬಗ್ಗೆ ಜಾಗರೂಕತೆಯನ್ನೂ ವಹಿಸಲಾಗಿದೆ. ಪುಸ್ತಕಗಳ, ಪತ್ರಿಕೆಗಳು ಮತ್ತು ವೃತ್ತಪತ್ರಿಕೆಗಳ ದುರ್ಲಭ ಸಂಚಿಕೆಗಳನ್ನು ಹೊದಿಕೆ ಹಾಕಿಸಿ ಸುರಕ್ಷಿತವಾಗಿ ಇಡಲಾಗಿದೆ. ಇಲ್ಲಿ ಹನ್ನೆರಡು ಸಾವಿರದಷ್ಟು ಪ್ರಾಚೀನ ನಾಣ್ಯಗಳ ಬೃಹತ್ ಸಂಗ್ರಹವೂ ಇದೆ. ಅವುಗಳಲ್ಲಿ ಕೆಲವನ್ನು ಖರೀದಿಸಲಾಗಿದ್ದರೆ ಹಲವು ನಾಣ್ಯಗಳು ದಾನಿಗಳಿಂದ ಬಂದಂಥವಾಗಿವೆ. ಆ ಸಂಗ್ರಹದಲ್ಲಿ ಮೌರ್ಯರ ಕಾಲದ ಸ್ವರ್ಣಮುದ್ರೆಗಳು ಮತ್ತು ಅಕಬರನ ಸ್ವರ್ಣ ಮೊಹರುಗಳೂ ಇವೆ.

ಭಾರತದ ಎಲ್ಲ ಭಾಷೆಗಳ ಪ್ರಮುಖ ಪತ್ರಿಕೆಗಳೆಲ್ಲ ಬಹುಸಂಖ್ಯೆಯಲ್ಲಿ ಬರುತ್ತಿದ್ದು ಸೊಸೈಟಿಯ ವಾಚನಾಲಯದಲ್ಲಿ ಅವು ಓದುಗರಿಗೆ ಉಪಲಬ್ಧವಿವೆ. ಮುಂಬಯಿಗೆ ಭಾರತದ ಇತರ ರಾಜ್ಯಗಳಿಂದ ವಿಭಿನ್ನ ಭಾಷೆಗಳ ಜನರು ಬಂದು ತಮ್ಮ ತಮ್ಮ ಭಾಷಾ ಪತ್ರಿಕೆಗಳನ್ನು ಹಿಡಿದು ಓದುತ್ತಿರುವುದನ್ನು, ಹಾಳೆಗಳನ್ನು ಸಶಬ್ದ ಮುಗುಚಿ ಹಾಕುತ್ತಿರುವುದನ್ನು ಯಾವಾಗಲೂ ಕಾಣಬಹುದು.

ಇಲ್ಲಿರುವ ವಿರಳವಾದ ಸಂದರ್ಭ ಗ್ರಂಥಗಳನ್ನು ಇತರ ಸಾಹಿತ್ಯಕೃತಿಗಳನ್ನು ಪಡೆದು ಅಧ್ಯಯನ ಮಾಡಲು ಜಗತ್ತಿನಾದ್ಯಂತದ ಓದುಗರು, ಸಂಶೋಧನಾನಿರತರು ಇಲ್ಲಿಗೆ ಬರುತ್ತಿರುತ್ತಾರೆ. ದಿನದಿನವೂ ಅಂಥವರ ಸಂಖ್ಯೆಯು ಹೆಚ್ಚುತ್ತಲೇ ಇದೆ. ಅದರಿಂದಾಗಿ ಇಲ್ಲಿಯ ವಾಚನಾಲಯದಲ್ಲಿ ಕೆಲವೊಮ್ಮೆ ಜಾಗೆ ಸಿಗುವುದು ಕಷ್ಟವಾಗುತ್ತದೆ.

ಅಧ್ಯಯನ ಮತ್ತು ಸಂಶೋಧನೆಗಳಿಗಾಗಿ ಇಲ್ಲಿ 'ಡಾ. ಪಿ.ವಿ. ಕಾಣೆ ಇನ್ಸಿಟ್ಯೂಟ್ ಆಫ್ ಇಂಡಿಯನ್ ಸ್ಟಡೀಸ್' ಎಂಬ ವಿಭಾಗವು ಕಾರ್ಯನಿರತವಿದೆ. ಈ ವಿಭಾಗಕ್ಕೆ ಅಂತರ್ಗತವಾಗಿ ವಿಭಿನ್ನ ಛಾತ್ರವೃತ್ತಿಗಳು, ಸಂಶೋಧನ ವೃತ್ತಿಗಳು ಮತ್ತು ಪುರಸ್ಕಾರಗಳನ್ನು ನೀಡುವ ಉಪಕ್ರಮಗಳಿವೆ. ಈ ಸಂಸ್ಥೆಯ ಮೂಲ ಪ್ರೇರಣೆಯಿಂದ ಮುಂಬಯಿಯ ಅನೇಕ ಸಂಸ್ಥೆಗಳು ವಿಕಾಸಹೊಂದಿವೆ; ಅಭ್ಯುದಯ ಪಥದಲ್ಲಿವೆ. ಈ

ಸಂಸ್ಥೆಯು ಆಗಾಗ ವಿಭಿನ್ನ ಕ್ಷೇತ್ರಗಳಲ್ಲಿಯ ವಿಶೇಷತಜ್ಞರನ್ನು ಕರೆದು ಮಹತ್ವಪೂರ್ಣ ವ್ಯಾಖ್ಯಾನ ಕಾರ್ಯಕ್ರಮಗಳನ್ನು ನಡೆಸುತ್ತಿದೆ.

೧೯೭೭ರಲ್ಲಿ ನಿಹಾರ್ ರಂಜನ್ ರೇ ಎಂಬವರ ಅಧ್ಯಕ್ಷತೆಯಲ್ಲಿಯ ಒಂದು ಸಮಿತಿಯು ಏಶಿಯಾಟಿಕ್ ಸೊಸೈಟಿಯ ವಿಭಜನೆಯ ಶಿಫಾರಸುಮಾಡಿತು. ಆ ಪ್ರಕಾರ 'ಏಶಿಯಾಟಿಕ್ ಲೈಬ್ರರಿ' ಮತ್ತು 'ಸೆಂಟ್ರಲ್ ಲೈಬ್ರರಿ' ಎಂದು ವಿಭಾಗಗಳಾದವು. ಆದರೆ ಈ ವಿಭಾಗಗಳನ್ನು ಪೂರ್ಣತಃ ಬೇರ್ಪಡಿಸಲು ಸಾಧ್ಯವಾಗಲಿಲ್ಲ. ಸೆಂಟ್ರಲ್ ಲೈಬ್ರರಿಗಾಗಿ ಬೃಹತ್ ಕಟ್ಟಡವೊಂದನ್ನು ಸಾಂತಾಕ್ರುಝ್‌ನ ಕಲಿನಾದಲ್ಲಿ ಕಟ್ಟಲಾಗುತ್ತಿದೆ.

ಗ್ರಂಥ ಪ್ರಕಾಶನ ಕಾಯ್ದೆ, ಮತ್ತು ಮುದ್ರಣಾಲಯ ಹಾಗೂ ವೃತ್ತ ಪತ್ರಿಕೆ ನೋಂದಾವಣೆ ಕಾಯ್ದೆಗಳ ಅಧಿನಿಯಮಗಳ ಪ್ರಕಾರ ಸರಕಾರವು ಈ ಕೇಂದ್ರ ಗ್ರಂಥಾಲಯವನ್ನು ಡಿಪಾಜಿಟರಿ ಲೈಬ್ರರಿಯನ್ನಾಗಿ ನೇಮಕಮಾಡಿತು. ಯಾವುದೇ ಭಾಷೆಯ, ಎಲ್ಲಿಯೇ ಮುದ್ರಿಸಲ್ಪಟ್ಟ ಎಲ್ಲ ಪುಸ್ತಕಗಳು ಇಲ್ಲಿಗೆ ದಿನದಿನವೂ ಬಹುಸಂಖ್ಯೆಯಲ್ಲಿ ಬರುತ್ತಲೇ ಇರುತ್ತವೆ. ಗ್ರಂಥಾಲಯದಲ್ಲಿ ಒಂದೊಮ್ಮೆ ಸ್ಥಳಾವಕಾಶ ಕಡಿಮೆಯಾಗತೊಡಗಿತು. ಹದಿನಾಲ್ಕು ಭಾಷೆಗಳ ಆರು ಲಕ್ಷದಷ್ಟು ಗ್ರಂಥ ರಾಶಿಯನ್ನು ಇಟ್ಟುಕೊಳ್ಳಲು ಯೋಗ್ಯ ಜಾಗೆಯ ಅಭಾವ ತೋರಿತು. ಅಲ್ಲಿಯ ನೆಲ ಮಾಳಿಗೆಯಲ್ಲಿ ಧೂಳು ಹಿಡಿಯುತ್ತಿದ್ದ ಆ ಪುಸ್ತಕಗಳಲ್ಲಿ ಕೆಲವನ್ನು ಈಗ ಚರ್ನಿರೋಡಿನ 'ಜವಾಹರ ಬಾಲ ಕ್ರೀಡಾಕೇಂದ್ರ'ದಲ್ಲಿ ಮತ್ತು ಬಾಂದ್ರಾದ 'ಕಾಲೇಜ್ ಆಫ್ ಆರ್ಕಿಟೆಕ್ಚರ್'ನ ಹಾಸ್ಟೆಲುಗಳಲ್ಲಿ ಒಯ್ದು ಇಡಲಾಗಿದೆ.

ಮುಂಬಯಿಯ ಈ ಪ್ರಾಚೀನ ಮತ್ತು ವೈಭವಶಾಲೀ ಆಸ್ತಿಯನ್ನು ಸುಸ್ಥಿಯಲ್ಲಿಟ್ಟುಕೊಳ್ಳಲು ಧನದ ಅವಶ್ಯಕತೆ ತುಂಬಾ ಇದೆ. ಸೊಸೈಟಿಯ ವ್ಯವಸ್ಥಾಪಕ ಸಮಿತಿಯು ಕಾಲಕಾಲಕ್ಕೆ ಸೊಸೈಟಿಯ ಖರ್ಚುಗಳನ್ನು ತೂಗಿಸಿಕೊಳ್ಳಲು ವಿಧ-ವಿಧ ಯತ್ನಗಳನ್ನು ಮಾಡಬೇಕಾಗಿದೆ. ೧೯೮೯ರಲ್ಲಿ ಟೌನ್‌ಹಾಲ್‌ನಲ್ಲಿ ವಿಶೇಷವಾದ ಒಂದು ಸಾಮೂಹಿಕ ಭೋಜನ ಕೂಟವನ್ನು ಏರ್ಪಡಿಸಲಾಗಿತ್ತು. ಅಂದು ಅಲ್ಲಿಗೆ ಬಂದ ೩೬೦ ಜನ ಅತಿಥಿಗಳು, ಪ್ರತಿಯೊಬ್ಬರೂ ಒಂದು ಸಾವಿರ ರೂಪಾಯಿಗಳನ್ನು ಕೊಟ್ಟವರಾಗಿದ್ದರು. ಭೋಜನದ ವ್ಯವಸ್ಥೆಯನ್ನು ಮುಂಬಯಿಯ ಮಹಾದಾನಿಗಳೇ ವಹಿಸಿಕೊಂಡಿದ್ದರು. ಅದರಿಂದ ಸೊಸೈಟಿಗೆ ಮೂರು ಲಕ್ಷ ಅರ್ವತ್ತು ಸಾವಿರ ರೂಪಾಯಿಗಳು ದೊರೆತವು.

ಕಂಪ್ಯೂಟರ್ ಯುಗದ, ವಿದ್ಯುನ್ಮಾನ ಮಾಧ್ಯಮಗಳ ಭರಭರಾಟೆಯ ಈ ದಿನಗಳಲ್ಲೂ ಜ್ಞಾನದಾಹವುಳ್ಳ ಓದುಗರು ಕಡಿಮೆಯಾಗಿಲ್ಲ. ಅದಕ್ಕೆ ಸರಿಸಮಾನವಾಗಿ ವೃತ್ತ ಪತ್ರಿಕೆಗಳು, ನಿಯತಕಾಲಿಕೆಗಳು ಹೆಚ್ಚು ಹೆಚ್ಚಿನ ವಿವಿಧ ರೂಪಗಳಲ್ಲಿ ಪ್ರಕಟವಾಗುತ್ತಲೇ ಇವೆ. ಪ್ರತಿಯೊಂದು ಭಾಷೆಯಲ್ಲೂ ವಿಭಿನ್ನ ವಿಷಯಗಳಲ್ಲಿ ಸಾವಿರಾರು ಸಂಖ್ಯೆಯಲ್ಲಿ ಪುಸ್ತಕಗಳು ಪ್ರಕಟವಾಗುತ್ತಿರುವುದೂ ಕಡಿಮೆಯಾಗಿಲ್ಲ.

ಮುಂಬಯಿಯ ಅವಸರದ ಬದುಕಿನ ನಡುವೆಯೂ ಸೆಂಟ್ರಲ್ ಲೈಬ್ರರಿಯ ವಾಚನಾಲಯಗಳು ಓದುಗರಿಂದ ತುಂಬಿತುಳುಕುತ್ತಿವೆ. ವೈವಿಧ್ಯಮಯವಾದ ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯವನ್ನು ಕಾಪಾಡಲು ಇಂತಹ ಜ್ಞಾನದ ಖಜಾನೆಗಳು ಅತ್ಯವಶ್ಯವಾಗಿವೆ. ●

(ಕೃಪೆ: 'ಕರ್ನಾಟಕ ಮಲ್ಲ')

ಆತ: ನೋಡಿದ್ಯಾ... ನೋಡಿದ್ಯಾ....
ಈತ: ಏನ್ನೋಡೋದು....
ಆತ: ಅಕೋ, ಆತ ಬಂದ್ರೆ ಜನ ಹ್ಯಾಗೆ ತಾವೇ ದಾರಿ ಬಿಟ್ಟು ಸರಿತಾರೇಂತ...
ಈತ: ಹೂಂ..... ಮಳೆಗಾಲ್ದಲ್ಲಿ ಮಾತ್ರ ಸ್ನಾನಾ ಮಾಡೀದ್ರೆ ಮೈ ನಾರದೇ ಇರುತ್ಯೇ? ಅದಕ್ಕೇ ಜನ ಆತನಿಗೆ ದಾರಿ ಬಿಡೋದು.

১০

# ಎಕ್ಸ್-ರೇ ಕಣ್ಣಿನ ಮನುಷ್ಯ!



• ಗೋವಾ

೧೯೫೫ರ ಒಂದು ದಿನ.

ಪೀಟರ್ ತನ್ನ ತಾಯಿ ಹಾಗೂ ದಂತವೈದ್ಯ ಸೋದರನನ್ನು ಕಾಣಲೆಂದು ಡಾಡ್ರೆಚ್‌ಗೆ ಹೋಗಿದ್ದ. ನಾಲ್ಕಾರು ದಿನಗಳ ವಾಸ್ತವ್ಯ. ಎಲ್ಲಿದ್ದರೂ ಬಿಡೆವೆಂಬಂತೆ ಒಮ್ಮೆಲೇ ಒಂಬತ್ತು ಪತ್ರಗಳು ಹುಡುಕಿಕೊಂಡು ಬಂದುವು. ಸ್ವೀಡನ್ನಿನ ಒಂದು ಪುಟ್ಟ ಹಳ್ಳಿಯಿಂದ ಅಂಚೆಗೆ ಹಾಕಲ್ಪಟ್ಟ ಆ ಎಲ್ಲಾ ಪತ್ರಗಳ ಸಾರಾಂಶ ಇಷ್ಟೇ- "ನಾಪತ್ತೆಯಾಗಿರುವ ನರ್ಸನ್ನು ಹುಡುಕಿಕೊಡಿ."

ಪತ್ರಗಳೊಂದಿಗೆ ಮೌನ ಸಂಭಾಷಣೆ ಶುರುವಾಯಿತು.

ಏಳು ವರ್ಷಗಳಿಂದ ಆಕೆ ನಾಪತ್ತೆ!

ತಂದೆಯೇ ಮಗಳನ್ನು ಕೊಂದಿರಬೇಕೆಂಬ ಗುಮಾನಿ!

ಆದರೆ ಪುರಾವೆಯೇ ಇಲ್ಲ! ತರುಣಿಯ ಮೃತದೇಹವೂ ಸಿಕ್ಕಿಲ್ಲ!

ಏಳು ವರ್ಷಗಳಾದರೂ ಈ ನಾಪತ್ತೆ ಪ್ರಕರಣವನ್ನು ಹಳ್ಳಿಗರು ಮರೆಯುವ ಹಾಗಿಲ್ಲ!

ನರ್ಸ್ ಆ ಗ್ರಾಮಸ್ಥರ ಅಕ್ಕರೆಯ ಸೋದರಿ, ಮುದ್ದಿನ ಮಗಳು, ಅನೇಕರನ್ನು ತನ್ನ ಆರೈಕೆಯಿಂದ ಆರೋಗ್ಯವಂತರನ್ನಾಗಿ ಮಾಡಿದ್ದ ಕರುಣಾಮಯಿ.

ಇಂಥವಳು ಕಣ್ಮರೆಯಾಗಿದ್ದಾಳೆಂದರೆ?

ಏಳು ವರ್ಷಗಳ ಹಿಂದೆ....

೧೯೪೮ರಲ್ಲೊಂದು ದಿನ. ಚಳಿಗಾಲ. ವಾರಾಂತ್ಯ ರಜೆ ಪಡೆದು ಆಸ್ಪತ್ರೆಯಿಂದ ನೇರವಾಗಿ ತನ್ನ ಹಳ್ಳಿಗೆ ಹೋಗಿದ್ದಳು ಹುಡುಗಿ. ಅಪ್ಪ ಮತ್ತು ಮಲತಾಯಿಯನ್ನು ಕಾಣುವುದು ನೆಪಮಾತ್ರದ ಉದ್ದೇಶ. ಗ್ರಾಮಸ್ಥರ ಸಾಂಗತ್ಯ, ಸ್ವಾಸ್ಥ್ಯ ಪರೀಕ್ಷೆ, ಅವರ ಕೈಯ ಊಟದ ರುಚಿ ಹೀಗೆ ತಾನು ಬೆಳೆದ ಪರಿಸರದೊಂದಿಗಿನ ಬಾಂಧವ್ಯದ ಎಳೆಗಳನ್ನು ಮತ್ತೆ ಮತ್ತೆ ಹುರಿಗೊಳಿಸುವ ಇಚ್ಛೆ ಆಕೆಗೆ.

ಸೋಮವಾರ ಬೆಳಿಗ್ಗೆ ಡ್ಯೂಟಿಗೆ ಹಾಜರಾಗಬೇಕಿದ್ದವಳು ಬಾರದಿದ್ದಾಗ ಇತರರ ಮೇಲೆ ಹರಿಹಾಯ್ದಳಂತೆ ಹೆಡ್ ನರ್ಸ್. ಮರುದಿನವೂ ಈ ಹುಡುಗಿ ಬರಲಿಲ್ಲ ಎಂದರೆ? ನೇರವಾಗಿ ಆ ಹಳ್ಳಿಗೆ ಫೋನ್ ಮಾಡಿ ಹುಡುಗಿಯ ಅಪ್ಪನನ್ನು ಸಂಪರ್ಕಿಸಿದಳು.

ಅಪ್ಪನೋ ಮಹಾ ಒರಟ.

"ನನಗೇನ್ ಕೇಳ್ತೀರಿ? ಅವ್ಳು ನನ್ನ ಮಗಳೇ ಅಲ್ಲಾ ಅಂದ್ಕೊಂಡಿದೀನಿ. ನನ್ ಪಾಲ್ಗೆ ಅವ್ಳು ಹುಟ್ಟೇ ಇಲ್ಲಾಂತ ಭಾವಿಸ್ಕೊಂಡಿದೀನಿ. ಅಪ್ಪಾ-ಅವ್ವಾನ್ನೋ ಗೌರವ ಗೊತ್ತಿಲ್ಲದ ಆ ತಿರುಗಲಾಡಿ ಬಾಯ್ ಬಡಕಿನ್ನ ನನ್ನ ಮನೆ ಹೊಸಲು ತುಳೀಬ್ಯಾಡಾಂತ್ಹೇಳಿ ಹೊರಗಟ್ಟಿದೀನಿ. ನಿನ್ನೇನೇ ಬಸ್ ಹತ್ತಿ ಸಿಟೀಗೆ ಹೋದ್ಲು. ನೀವು ಬಂದಿಲ್ಲಾಂತೀರಿ. ಅದೆಲ್ ಸತ್ಲೋ ನನ್ಗೇನ್ ಗೊತ್ತು?" ಎಂದು ಫೋನು ಕುಕ್ಕಿ ಬಿಟ್ಟ.

ಹಳ್ಳಿಯಿಂದ ಸೋಮವಾರ ಸಿಟಿಗೆ ಬಂದ ಬಸ್ಸಿನ ಡ್ರೈವರು-ಕಂಡಕ್ಟರರನ್ನು ಕಂಡು ಕೇಳಿದರೆ, "ಪ್ರತಿ ವಾರಾನೂ ಆ ಹುಡುಗಿ ನಂ ಬಸ್ಸಲ್ಲೇ ಬರೋದು. ಆದ್ರೆ ನಿನ್ನೆ ಮಾತ್ರ ವಾಪಸ್ ಬರ್ಲೇ ಇಲ್ಲ ಬಿಡಿ. ಅವ್ಳ ಹಳ್ಳಿಗೆ ಶನಿವಾರ ರಾತ್ರಿ ಟ್ರಿಪ್ಪಿಗೆ ನಮ್ಮ ಜತೇಗೇ ಬಂದದ್ದು ಮಾತ್ರ ನಮಗ್ಗೊತ್ತು," ಎಂಬ ಉತ್ತರ.

ಎಲ್ಲಿ ಹೋದಳು ಹುಡುಗಿ?

ಏನೋ ನಡೆದಿರುವುದಂತೂ ಗ್ಯಾರಂಟಿ.

ಪೊಲೀಸ್ ತನಿಖೆಯಿಂದ ತಿಳಿದು ಬಂದದ್ದೂ ಇಷ್ಟೆ. ಹುಡುಗಿ ಅಪ್ಪನೊಂದಿಗೆ ಆಕಾಶಕ್ಕೆ ಕೇಳುವ ಹಾಗೆ ಜಗಳವಾಡಿದ್ದಳು. ಮನೆ

# ದುಮ್ಮಜಲಿನ ಬಂಗಲೆಯ ನೆಲಮನೆಯಲ್ಲಿ ಹೆಣ!

ಯಿಂದ ಬ್ಯಾಗು ಸಮೇತ ಹೊರಟಳು.... ಆದರೆ ಎಲ್ಲಿ ಹೋದಳು? ಯಾರಿಗೂ ಗೊತ್ತಿಲ್ಲ. ಇಪ್ಪತ್ತ ರೊಳಗಿನ ನರ್ಸ್. ಅಂಥ ಚಳಿಯಲ್ಲಿ (ಮೈನಸ್ ೩೦ ಡಿಗ್ರಿ) ಹೆಪ್ಪುಗಟ್ಟಿ ಕಲ್ಲಾದಳೆ?

ಅವರ ಹುಡುಕಾಟ ಅಲ್ಲಿಗೆ ಮುಗಿಯಿತಾದರೂ ಆಡಿಕೆ ವಾಡಿಕೆಗಳು ಅಂತ್ಯಗೊಳ್ಳಲಿಲ್ಲ. ಅಪ್ಪನ ಅಕ್ಕಸತನ-ರಕ್ಕಸತನದ ಅರಿವಿದ್ದ ಅವರಿಗೆ 'ಇಷ್ಟೇ ಆದದ್ದು' ಎಂಬ ಭಾವನೆ ಬಲವಾಯಿತಾದರೂ ಆದದ್ದನ್ನು ಸಿದ್ಧ ಮಾಡಿ ತೋರಿಸುವ ಆಧಾರಗಳೇ ಇರಲಿಲ್ಲ. ತಮ್ಮ ಮಕ್ಕಳೊಂದಿಗೆಯೇ ಆಡಿ ಬೆಳೆದ ಮುದ್ದು ಮೊಗದವಳು. ಎಷ್ಟೋ ಜನರ ಮನೆಯ ಆಲ್ಬಮ್ಮುಗಳಲ್ಲಿ ಅವರವರ ಮಕ್ಕಳೊಂದಿಗೆ, ಹಿರಿಯರೊಂದಿಗೆ ತೆಗೆಸಿಕೊಂಡ ಫೋಟೋದಲ್ಲಿನ ಆಕೆಯ ಚಿರಂತನವಾದ ಹಸನ್ಮುಖಿ ಮತ್ತೆ ಮತ್ತೆ ಆಕೆ ಎಲ್ಲಿ ಹೋದಳು, ಏನಾದಳು ಎಂಬ ಚಿಂತೆಗೆ ತೊಡಗಿಸುತ್ತಿತ್ತು.

"ಈಗಿದ್ದರೆ ಇಪ್ಪತ್ತೇಳು ವರ್ಷದವಳಾಗಿರುತ್ತಿದ್ದಳು ನೋಡಿ. ನಮ್ಮ ಹುಡುಗಿಗಿಂತ ನಾಲ್ಕೈದು ದಿನ ದೊಡ್ಡವಳು ಅಷ್ಟೆ"- ಜನ ಏಳು ವರ್ಷಗಳಾದರೂ ಮಾತಾಡಿಕೊಳ್ಳುತ್ತಲೇ ಇದ್ದರು.

ಹುಡುಗಿಯ ಅಪ್ಪನಿಗೆ ಅಂಥ 'ಖ್ಯಾತಿ'ಯೇ ಇತ್ತು. ಆತ ಈ ಹುಡುಗಿಯಿನ್ನೂ ಹತ್ತು ವರ್ಷದವಳೂ ಆಗಿರದಿದ್ದ ಹೊತ್ತಿನಲ್ಲೇ ತನ್ನ ಮೊದಲ ಹೆಂಡತಿಯನ್ನು ಹೊಡೆದು ಕೊಂದಿದ್ದ. ಇಂಥ ಅಪ್ಪನ ಜತೆಗೆ ಇರಲು ಬಯಸದ ಹುಡುಗಿ ಸಹಜವಾಗಿಯೇ ಹಳ್ಳಿಯ ಇತರ ಕುಟುಂಬಗಳವರನ್ನೇ ಅಪ್ಪ-ಅಮ್ಮ-ಅಕ್ಕ-ಅಣ್ಣನೆಂದು ಹಚ್ಚಿಕೊಂಡು ಬೆಳೆದಿತ್ತು. ಹೈಸ್ಕೂಲು ಮುಗಿಸಿ ಸಿಟಿಯ ನರ್ಸಿಂಗ್ ಸ್ಕೂಲ್ ಸೇರಿ ತರಬೇತಿ ಮುಗಿಸಿ ದಾದಿಯಾಗಿದ್ದ ಹುಡುಗಿ ವಾರಕ್ಕೊಮ್ಮೆ ಊರಿಗೆ ಓಡಿ ಬರುತ್ತಿತ್ತು. ಭಾನುವಾರವಿಡಿ ಊರವರೊಂದಿಗೆ ಮಜವಾಗಿ ಇರುತ್ತಿತ್ತು. ಸೋಮವಾರ ಮುಂಜಾನೆಯ ಮೊದಲು ಬಸ್ಸಿನಲ್ಲಿ ಆಕೆಯ ಅರಳಿದ ನಗೆ ಇದ್ದೇ ಇರುತ್ತಿತ್ತು.

ಆ ಒಂಬತ್ತು ಪತ್ರಗಳಲ್ಲೂ ಆ 'ಅರಳಿದ ನಗೆಯ ಒಡತಿ'ಯ ಕಣ್ಮರೆಯ ಒಗಟಿಗೆ ಉತ್ತರ ಹೇಳಿ ಎಂಬ ವಿನಂತಿ. ಪೀಟರ್ ಈ ಪ್ರಕರಣವ ನ್ನೆತ್ತಿಕೊಳ್ಳಲು ಮನಸ್ಸು ಮಾಡಿದ.

ಸ್ವೀಡನ್ನಿನ ಪತ್ರಿಕಾಲಯಗಳವರು ಕೆಲವು ಫೋಟೋಗಳನ್ನಿತ್ತರು. ಅವೆಲ್ಲ ಆ ಹುಡುಗಿ ತನ್ನ ಸಹೋದ್ಯೋಗಿಗಳೊಂದಿಗೆ, ಆತ್ಮೀಯ ಗೆಳತಿಯರೊಂದಿಗೆ ತೆಗೆಸಿಕೊಂಡಿದ್ದಂಥವುಗಳು. ಒಂದು ಫೋಟೋದಲ್ಲಿ ಮಾತ್ರ ಅವಳೊಬ್ಬಳೇ ಇದ್ದಳು. ಪೀಟರ್ ಅದನ್ನಿಟ್ಟುಕೊಂಡು ಉಳಿದವೆಲ್ಲ ಮರಳಿಸಿದ.

ಸಂಪಾದಕರ ಚೇಂಬರಿನಲ್ಲಿ ಕೂತು ಫೋಟೋವನ್ನೇ ದಿಟ್ಟಿಸುತ್ತಿದ್ದ ಪೀಟರ್, "ತ್ಚ್" ಎಂದ.

"ಏನಾಯಿತು?" ಸಂಪಾದಕರ ಪ್ರಶ್ನೆ.

"ಎಲ್ಲಾ ಮುಗಿದು ಹೋಗಿದೆ."

"ಅಂದರೆ?"

"ಈ ಹುಡುಗಿ ಕೊಲೆಗೈಯಲ್ಪಟ್ಟದ್ದೇ ನಿಜ."

"ಯಾರು ಕೊಂದವರು?"

"ಕೋತಿ ಮುಖದವನೊಬ್ಬ. ಆತ ಆಕೆಯ ಅಪ್ಪ."

"ಹೌದಾ! ಹ್ಯಾಗೆ?"

ಹಾಳೆಯೊಂದರ ಮೇಲೆ ಏನೇನೋ ಗೀಚಿದ ಪೀಟರ್. ಒಂದು ದುಮ್ಮಜಲಿನ ಮನೆ. ನಾಲ್ಕು ರಸ್ತೆಗಳು. ಆ ಮನೆಯಲ್ಲೊಂದು ನೆಲಮನೆ. ಅದರಲ್ಲಿ ಒಂದು ಅಸ್ಥಿಪಂಜರ.

ಹಾಳೆಯನ್ನಾತ ಸಂಪಾದಕರೆದುರು ಚಾಚಿದ.

"ಈ ಮನೆ ಯಾರದು?"

"ಅವಳ ಅಪ್ಪನದೇ. ವ್ಯಾಜ್ಯದಲ್ಲಿದೆ. ಹೀಗಾಗಿ ಖಾಲಿಯಾಗಿಯೇ ಇದೆ."

"ಏಳು ವರ್ಷಗಳ ಹಿಂದಿನ ಈ ಘಟನೆ ಜನಕ್ಕೆ ನಿಜಕ್ಕೂ ರೋಮಾಂಚವುಂಟುಮಾಡುತ್ತದೆ. ಅಂದ ಹಾಗೆ ಈ ಘಟನೆಯ ಆದ್ಯಂತವನ್ನೆಲ್ಲ ನಮಗೆ ಹೇಳಿ. ಬೇಕಾದರೆ ಇಂದು ರಾತ್ರಿಯೇ ಆ ಹಳ್ಳಿಗೆ ನಮ್ಮ ವರದಿಗಾರನೊಂದಿಗೆ ಹೋಗಿಬಿಡಿ...."

ಉತ್ತರಕ್ಕೆ ಐದುನೂರು ಮೈಲು ದೂರದಲ್ಲಿರುವ ಆ ಹಳ್ಳಿಯನ್ನು ಕಾರು ತಲುಪಿದಾಗ ಬೆಳ್ಳಂಬೆಳಗು.

ಪೀಟರ್ ಗೀಚಿದ್ದಂಥ ದುಮ್ಮಜಲಿನ ಮನೆಯ ಬಳಿ ಒಂದು ನಿಮಿಷ ಕಾರು ನಿಂತಿತು.

ಪೊಲೀಸರ ಪರವಾನಗಿಯಿಲ್ಲದೆ ಏನೂ ಮಾಡುವಂತಿಲ್ಲ. ಠಾಣೆಯಿರುವುದು ಪಕ್ಕದ ಟೌನಿನಲ್ಲಿ. ಮತ್ತೆ ಮೂವತ್ತು ಮೈಲುಗಳ ಪ್ರಯಾಣ.

ಪೊಲೀಸ್ ಇನ್ಸ್‌ಪೆಕ್ಟರ್, "ಮುಗಿದು ಹೋದ ಕೇಸು. ಮತ್ತ್ಯಾಕೆ ಕೆದಕುತ್ತೀರಿ?" ಎಂದ.

"ಮುಗಿದಿಲ್ಲ. ಪ್ರಕರಣ ಈಗಷ್ಟೇ ಪ್ರಾರಂಭ," ಪೀಟರ್ ಆತನನ್ನೇ ದಿಟ್ಟಿಸಿದ.

"ಇವರು ಸುಪ್ರಸಿದ್ಧ ಎಕ್ಸ್-ರೇ ಕಣ್ಣಿನ ಮನುಷ್ಯ ಪೀಟರ್ ಹುರ್‌ಕೋಸ್ ಅನ್ನೋದನ್ನ ಮರೀಬೇಡಿ," ವರದಿಗಾರ ಒಗ್ಗರಣೆ ಹಾಕಿದ.

"ಹೌದ್ದೌದು. ಅವರು ನನ್ನನ್ನೇ ಎಕ್ಸ್-ರೇ ಗೊಳಪಡಿಸ್ತಿದ್ದಾರೆ ಅನಿಸ್ತಿದೆ," ಇನ್ಸ್‌ಪೆಕ್ಟರ್ ನಕ್ಕ.

"ಊಹುಂ. ಈಗ ಅದಕ್ಕೆಲ್ಲಿದೆ ಪುರಸೊತ್ತು? ಬಂದ ಕೆಲಸ ಮುಗಿದ್ಮೇಲೆ ಬೇಕಾದ್ರೆ ನಿಮ್ಮ ಎಕ್ಸ್-ರೇ ಮಾಡೋಣ," ಪೀಟರ್ ಇನ್ನಷ್ಟು ನಗೆ ಸೇರಿಸಿದ.

ಮುಂದೆ ಮುಂದೆ ಪೊಲೀಸು ಜೀಪು. ಹಿಂದಿನಿಂದ ಇವರ ಕಾರು.

ಹಳ್ಳಿಯ ಹೊರ ಭಾಗದಲ್ಲಿ ಕಾರು ನಿಲ್ಲಿಸುವಂತೆ ಹೇಳಿದ ಪೀಟರ್, "ಇನ್ನು ಈ ಗಾಡಿಗಳನ್ನ ಇಲ್ಲೇ ಪಾರ್ಕ್ ಮಾಡಿ. ನಾನು ಹಾಗೇ ನಡೀತಾ ರಸ್ತೆಗಳ್ನ ಅಳೀತೇನೆ. ಹಾಂ, ನನ್ ಜತೇಗೆ ಯಾರೂ ಬರ್ಬೇಡಿ," ಎಂದು ಒಂಟಿಯಾಗಿ ಊರ ಹಾದಿ ತುಳಿಯತೊಡಗಿದ.

ಆ ಮನೆಯ ಬಳಿ ಬಂದಾಗ ಒಬ್ಬ ಐವತ್ತರ ವ್ಯಕ್ತಿ ಬಾಗಿಲು ತೆರೆದು ಒಳಹೊಕ್ಕು ಬೆನ್ನ ಹಿಂದೆಯೇ ಬಾಗಿಲು ಧೊಪ್ಪೆಂದು ಮುಚ್ಚಿಕೊಂಡ.

ಪೀಟರ್ ಕುತೂಹಲಿಯಾದ.

ಹೋಗಿ ಬಾಗಿಲು ಬಡಿದ.

"ಯಾರೂ?" ಒಳಗಿಂದ ಧ್ವನಿ ಬಂತು.

"ಬಾಗಿಲ್ತೆಗೀರೀ..."

"ಥತ್, ಇದ್ಯಾವ ಪೀಡೇನೋ?" ಎನ್ನುತ್ತ ಬಂದು ಬಾಗಿಲು ತೆರೆದ ಕೋತಿ ಮುಖದವ, ಪೀಟರ್‌ನನ್ನು ಕಂಡು ಹಿಮ್ಮೆಟ್ಟಿದ.

"ನೀವೇ ತಾನೇ ಆ ಕಣ್ಮರೆಯಾದ ನರ್ಸ್ ತಂದೆ?"

ಆತ ಉಗುಳು ನುಂಗಿಕೊಳ್ಳುತ್ತಲೇ ಹೌದೆಂಬಂತೆ ತಲೆಯಾಡಿಸಿದ.

"ನಾನು ಪೀಟರ್ ಹುರ್‌ಕೋಸ್. ಹುಡುಗಿ ಹ್ಯಾಗೆ ಕೊಲೆಯಾದ್ಲು ಅನ್ನೋದನ್ನ ತಿಳಕೊಂಡು, ಪೊಲೀಸರಿಗೆ ತಿಳಿಸಬೇಕೂಂತ್ಲೇ ಬಂದವನು."

"ಕೊಲೆ? ಏನ್ ಹೇಳ್ತಿದೀರ್ನೀವು?"

"ಸಾಕು, ಇನ್ನು ಜನರ ಕಣ್ಣಿಗೆ ಮಣ್ಣೆರಚೋದು. ಏಳು ವರ್ಷ ಅದನ್ನೇ ಮಾಡಿದಿರಿ.

ನಂಗೆಲ್ಲಾ ಗೊತ್ತಿದೆ. ಸುಮ್ಮೆ ಒಳಗ್ಬನ್ದೀರಿ. ನಾನ್ ಕೇಳೋದಕ್ಕೆಲ್ಲ ಇದ್ದದ್ದನ್ನ ಇದ್ಹಾಗೆ ಹೇಳ್ಬಿಡಿ..."

ಆತ ಮರುಮಾತನಾಡುವ ಸ್ಥಿತಿಯಲ್ಲೇ ಇರಲಿಲ್ಲ. ಸುಮ್ಮನೇ ಒಳಗೆ ನಡೆದ. ಪೀಟರ್‌ನನ್ನು ಕೂತುಕೊಳ್ಳುವಂತೆ ಹೇಳಿ ಎದುರಿನ ಕುರ್ಚಿಯಲ್ಲಿ ಕುಸಿದ. ತನ್ನನ್ನೇ ದಿಟ್ಟಿಸುತ್ತಿರುವ ಆ ಕಣ್ಣುಗಳು! ಅವುಗಳನ್ನು ತಪ್ಪಿಸುತ್ತ ತಟ್ಟನೆ ಹೇಳಿದ,

"ನನ್ನ ಮಗಳು ಸತ್ಲೂಂತ ನಿಮಗ್ಯಾರು ಹೇಳೀದ್ರು? ಅವಳು ಸತ್ತಿಲ್ಲ."

ಪೀಟರ್ ನಸು ನಕ್ಕ. ವಾರಾಂತ್ಯ ರಜೆಗೆಂದು ಆ ಶನಿವಾರ ಬಂದಿದ್ದ ಹುಡುಗಿಯೊಂದಿಗೆ ಅಪ್ಪ ಆಡಿದ ಜಗಳದಿಂದ ಆರಂಭಿಸಿ, ಆಕೆಯ ತಲೆಗೆ ಕೊರಡಿನಿಂದ ಹೊಡೆದದ್ದು, ರಕ್ತ ಚಿಮ್ಮಿದ್ದು, ಆಕೆ ಕೂಡಲೇ ಬಿದ್ದು ಒದ್ದಾಡಿದ್ದು, ಆತ ಮತ್ತೊಂದೇಟು ಹಾಕಿದ್ದು, ಎರಡನೆಯ ಪೆಟ್ಟು ಆಕೆಯನ್ನು ಶಾಶ್ವತ ಸುಮ್ಮನಾಗಿಸಿದ್ದು ಎಲ್ಲವನ್ನೂ ಹೇಳಿಬಿಟ್ಟ.

"ಆ ಮನೇಲಿ ಅವಳನ್ನು ಕೊಂದೆ. ಹುಡುಗಿಯ ಹೆಣಾನ ರಾತ್ರೋ ರಾತ್ರಿ ಈ ಮನೆ ಅಂಗಳದಲ್ಲಿ ಹೂತು ಹಾಕೋಕ್ ನೋಡ್ದೆ. ಆದ್ರೆ ಧೈರ್ಯ ಸಾಲ್ಲಿಲ್ಲಾ. ಈ ಮನೇಲಿ, ಈಗ ನಾವು ಕೂತ್ಕೊಂಡಿರೋ ಜಾಗದಲ್ಲಿ ಕೆಳಗಿದೆಯಲ್ಲ ನೆಲಮನೆ ಅಲ್ಲಿ ಹುಗಿದಿ. ವ್ಯಾಜ್ಯದಲ್ಲಿರೋ ಈ ಮನೆ ಹತ್ರ ಜನಾ ಸುಳಿಯೋದೂ ಇಲ್ಲ. ಹೀಗಾಗಿ ಇದು ಜನಕ್ಕೆ ಗೊತ್ತೂ ಆಗ್ಲಿಲ್ಲಾ. ಅವಳು ಜಗಳಾಡಿ ಮನೆ ಬಿಟ್ಟು ಹೋದ್ಲು ಅಂತ ಸಾಧಿಸ್ತಾನೇ ಬಂದಿ."

"ಒಳ್ಳೆ ಕತೆ ಕಟ್ತೀರಿ ನೀವು. ಸತ್ಯದ ತಲೇ ಮೇಲೆ ಹೊಡದ್ಹಾಗೆ ಸುಳ್ಳು ಹೇಳ್ತೀರಿ...."

"ತಲೇ ಮೇಲ್ಹೊಡೆಯೋ ಕೆಲಸಾ ಮಾಡ್ದೋರು ಯಾರು ಅಂತ ಈಗ್ಗೊತ್ತಾಗತ್ತೆ. ಹೂಂ.... ಎಲ್ಲಿದೆ ನೆಲಮನೆಗೆ ದಾರಿ?"

"ನೆಲಮನೆ ದಾರೀನಾ? ಇಲ್ಲಿರೋದು ಒಂದೇ ದಾರಿ. ಬಂದ ದಾರಿ. ಅದನ್ಹಿಡಕೊಂಡು ಹೋಗಯ್ಯೋ.... ಯಾಕ್ಸುಮ್ನೆ ತಲೆ ಕೆಡಸ್ತಿ? ಮರ್ಯಾದಸ್ತರ ಜೊತೆ ಹ್ಯಾಗ್ನಡ್ಕೋಬೇಕು ಅಂತ್ಲೂ ಗೊತ್ತಿಲ್ವೇನು? ಹೋಗ್ತೀಯೋ ಇಲ್ಲಾ ಕತ್ತು ಹಿಡದು ದಬ್ಲೋ?"

ಪೀಟರ್ ಮಿಸುಗಲಿಲ್ಲ. ಬದಲಾಗಿ ನೆಲಮನೆಯ ದಾರಿಯೆಲ್ಲಿದೆ ಎಂದು ಹುಡುಕಿ ನೋಡತೊಡಗಿದ.

ತನ್ನ ಮಾತನ್ನು ಕಿವಿಗೆ ಹಾಕಿಕೊಳ್ಳದೇ ಕೂತ ಪೀಟರ್‌ನ ಮೇಲೆ ಆತನಿಗೆ ಅದೆಂಥ ಸಿಟ್ಟು ಬಂತೆಂದರೆ ಕೂಡಲೇ ತನ್ನ ಜೇಬಿನಿಂದ ಪಿಸ್ತೂಲು ತೆಗೆದು ಗುರಿಹಿಡಿದ. ಆದರೆ ಪೀಟರ್ ತನ್ನೆಡೆ ನೋಡುತ್ತಲೇ ಇಲ್ಲ! ಅವನ ಕಣ್ಣುಗಳಿನ್ನೂ ನೆಲಮನೆಯ ದಾರಿಯನ್ನರಸುತ್ತಿವೆ! ಥೆ.... ಏನು ಮಾಡುವುದೆಂದು ಯೋಚಿಸುತ್ತಲೇ ಕೈಯಲ್ಲಿನ ಪಿಸ್ತೂಲಿನ ಕುದುರೆಯೊತ್ತಿಬಿಟ್ಟ. ಗುಂಡು ಪೀಟರ್‌ನ ಬಲಗಿವಿಯ ಪಕ್ಕದಲ್ಲೇ ಕೇವಲ ಅರ್ಧ ಅಡಿ ಅಂತರದಲ್ಲೇ ಹಾದು ಹೋಯಿತು.

ಆತ ಗುಂಡು ಹಾರಿಸಿ ತಪ್ಪು ಮಾಡಿದ. ಸದ್ದು ಸುದ್ದಿ ಮಾಡಿತು. ಕೇಳಿಸಿಕೊಂಡ ಜನ ಆ ಮನೆಯ ಬಳಿ ಬಂದು ಅವಿತಿಟ್ಟುಕೊಂಡು ಆಲಿಸತೊಡಗಿದರು. ಸಾಲದ್ದಕ್ಕೆ ಈ ಹೊತ್ತಿಗೆ ಅಲ್ಲಿ ಬಂದು ತಲುಪಿದ್ದ ಆ ಪೊಲೀಸ್ ಇನ್ಸ್‌ಪೆಕ್ಟರ್ ಹಾಗೂ ಪತ್ರಿಕಾ ವರದಿಗಾರ ಬಾಗಿಲಲ್ಲಿ ಪ್ರತ್ಯಕ್ಷರಾದರು.

ಇದಾವುದರ ಪರಿವೆಯಿಲ್ಲದ ಆತ, ಗುರಿ ತಪ್ಪಿದ ಸಿಟ್ಟು, ತನ್ನ ಗುಟ್ಟನ್ನು ಬಯಲು ಮಾಡಬಂದನಲ್ಲಾ ಎಂಬ ಅಸಹನೆಗಳಿಂದ ಕುದಿಯುತ್ತಿದ್ದ. ಸಿಟ್ಟಿನ ಕೈಗೆ ಬುದ್ಧಿ ಕೊಟ್ಟ ಎನ್ನುವುದಕ್ಕಿಂತ ಆ ಬುದ್ಧಿ ಮತ್ತು ಸಿಟ್ಟುಗಳನ್ನೆಲ್ಲ ಪಿಸ್ತೂಲಿನಲ್ಲಿ ತುಂಬಿದ ಎನ್ನುವುದೇ ಸೂಕ್ತ.

"ಏನದು ಗಲಾಟೆ? ಗುಂಡು ಹಾರಿದ ಸದ್ದು ಬಂತಲ್ಲ?" ಪೊಲೀಸ್ ಇನ್ಸ್‌ಪೆಕ್ಟರ್ ಅರಚಿಕೊಂಡ.

ಪಿಸ್ತೂಲುಧಾರಿಗೆ ಇಷ್ಟು ಸಾಕಾಯಿತು.

"ಬನ್ನಿ ಇನ್ಸ್‌ಪೆಕ್ಟರ್ರೇ.... ನೋಡಿ, ಈ ಗೂಂಡಾ ನನ್ನ ಮನೇಗೆ ಅಕ್ರಮ ಪ್ರವೇಶ ಮಾಡಿ ತುಂಬ ತೊಂದ್ರೆ ಕೊಡ್ತಿದಾನೆ. ಇವ್ನಿಂದ ನನ್ನ ಪ್ರಾಣಕ್ಕೆ ಅಪಾಯ ಇದೆ. ಸ್ವ-ರಕ್ಷಣೆಗಾಗಿ ಗುಂಡಿನ ಮೊರೆ ಹೊಕ್ಕೆ" ಆತ ಬಡಬಡಿಸುತ್ತಲೇ ಹೋದ.

"ಪೊಲೀಸರಿಗೆ, ಪತ್ತೇದಾರರಿಗೆ ಈ ಅಕ್ರಮ ಪ್ರವೇಶ ಗಿಕ್ರಮ ಪ್ರವೇಶ ಅನ್ವಯಿಸೋದಿಲ್ಲ.

ಅಷ್ಟಕ್ಕೂ ಇದೇನ್ ನಿನ್ ಸ್ವಂತ ಮನೆ ಅಂತಿ ಳ್ಕೊಂಡ್‌ಬಿಟ್ಯಾ? ಕೋರ್ಟ್‌ನಲ್ಲಿ ವ್ಯಾಜ್ಯ ನಡೀತಿದೆ. ಇಂಥದ್ರಲ್ಲಿ ನೀನೇ ಇಲ್ಲಿ ಅಕ್ರಮ ಪ್ರವೇಶ ಮಾಡಿದ್ದೀಯಾ," ಇನ್ಸ್‌ಪೆಕ್ಟರ್ ಗುಡುಗಿದ.

"ಅಷ್ಟೇ ಅಲ್ಲ ಇನ್ಸ್‌ಪೆಕ್ಟರ್, ತನ್ನ ಮಗಳನ್ನ ಕೊಂದು ಅವಳ ಹೆಣಾನ ಇದೇ ಮನೇಲಿ, ನೆಲಮನೇಲಿ, ಹೂತುಬಿಟ್ಟಿದಾನೆ. ಇಕೋ ನಾನೀಗ ನಿಂತಿರೋ ಜಾಗದಲ್ಲೇ ಹದಿನೈದು ಅಡಿ ಆಳದಲ್ಲಿ ಅವಳ ಅಸ್ಥಿಪಂಜರ ಕಾಣ್ತಿದೆ ನನಗೆ," ಪೀಟರ್ ದನಿಗೂಡಿಸಿದ.

ಪಿಸ್ತೂಲುಧಾರಿಗೆ ಪಕ್ಕದಲ್ಲಿ ಬಿದ್ದಿದ್ದ ಕಟ್ಟಿಗೆ ತುಂಡು ಅದಾವ ಪ್ರೇರಣೆ ನೀಡಿತೋ. ಎತ್ತಿ ಪೀಟರ್‌ನೆಡೆ ಬೀಸಿದ. ಅದು ಮೂಗಿಗೆ ಬಡಿದು ಪೀಟರ್‌ಗೆ ರಕ್ತಸ್ರಾವ ಶುರುವಾಯಿತು. ನೋಡ ನೋಡುತ್ತಿದ್ದಂತೆ ಮುಖ ಬಾತುಕೊಂಡಿತು.

"ಹಲ್ಲೆ, ಅಕ್ರಮಪ್ರವೇಶ, ಕೊಲೆ ಅಪಾದ್ನೆ ಮೇಲೆ ನಿನ್ನನ್ನು ಅರೆಸ್ಟ್ ಮಾಡ್ತಿದೀನಿ.... ಈ ರಿಪೋರ್ಟರ್ರೇ ಇದಕ್ಕೆ ಮುಖ್ಯ ಸಾಕ್ಷಿ. ಸುತ್ತ ಸೇರಿರೋರ ಕಣ್ಣೆದುರಲ್ಲೇ ನೀನು ಹಲ್ಲೆ ನಡಿಸಿದ್ದೀಯಾ," ಇನ್ಸ್‌ಪೆಕ್ಟರ್ ಆತನ ಕೈಗೆ ಕೋಳ ತೊಡಿಸಿದ.

ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ, ವ್ಯಾಜ್ಯದಲ್ಲಿರುವ ಆ ಮನೆಯ ನೆಲಮಾಳಿಗೆಯಲ್ಲಿ ಹೂತಿಡಲ್ಪಟ್ಟಿದೆ ಎನ್ನಲಾದ ಅಸ್ಥಿಪಂಜರವನ್ನು ಹೊರಗೆ ತೆಗೆಯಲು, ಮತ್ತು ಏಳು ವರ್ಷಗಳ ಹಿಂದೆ ನಡೆದ ಕೊಲೆಯ ಪ್ರಕರಣವನ್ನು ಪುನರಾರಂಭಿಸಲು ಅನುಮತಿ ನೀಡಬೇಕು' ಎಂದು ಕೋರಲಾಯಿತು.

ಅದರ ಒಪ್ಪಿಗೆಯನ್ವಯ ಮುಂದಿನ ಕಾರ್ಯಾಚರಣೆ ನಡೆಯಿತು.

ಏಳು ವರ್ಷಗಳ ಹಿಂದೆ ನಾಪತ್ತೆಯಾದ ನರ್ಸ್ ಪ್ರಕರಣ, ಪೀಟರ್ ಹರ್‌ಕೋಸ್‌ನ ಮೇಲಿನ ಹಲ್ಲೆಯ ಪ್ರಕರಣಗಳು ಪತ್ರಿಕೆಗಳಿಗೆ ರಂಗು ನೀಡಿದವು.

ಮಗಳ ಕೊಲೆ, ಶವವನ್ನು ಬಚ್ಚಿಟ್ಟದ್ದು ಮತ್ತು ಪೀಟರ್‌ನನ್ನು ಕೊಲ್ಲಲು ಯತ್ನಿಸಿದ ಆಪಾದನೆಗಳು ಸಿದ್ಧವಾಗಿ ಆತ ಆಜೀವ ಕಾರಾವಾಸ ಅನುಭವಿಸಬೇಕಾಯಿತು. ●

(ಮುಂದಿನ ಸಂಚಿಕೆ ನೋಡಿ)

ಜೈಲಿನ ಆರಕ್ಷಕ ಸಿಬ್ಬಂದಿಯ ಜಾಗೆಗೆ ಸಂದರ್ಶನ ನಡೆದಿತ್ತು.

"ಇಲ್ಲಿ ಇರುವ ಕೈದಿಗಳೆಲ್ಲ ಪುಂಡು ಪೋಕರಿಗಳು. ನೀನು ಅವರನ್ನೆಲ್ಲ ಹೇಗೆ ಸಂಬಾಳಿಸುತ್ತೀರಿ?" ವಾರ್ಡನ್ ಕೇಳಿದರು.

"ಒಂದು ವೇಳೆ ಅವರ ನಡತೆ ಸರಿಯಾಗಿರದಿದ್ದರೆ ಒದ್ದು ಹೊರಹಾಕುತ್ತೇನೆ"- ಅಭ್ಯರ್ಥಿಯೊಬ್ಬ ತಟ್ಟನೆ ಉತ್ತರಿಸಿದ.

***

ಅವಳು: ನಿನ್ನನ್ನು ಮದುವೆಯಾದ ಮೇಲೆ ನಾನು ನಿನ್ನ ಕಷ್ಟ-ಸುಖಗಳಲ್ಲೆಲ್ಲ ಪಾಲುದಾರಳಾಗುತ್ತೇನೆ.

ಅವನು: ಯಾಕೆ? ನನಗೆ ಇಷ್ಟೆಲ್ಲ ಸಂಪತ್ತಿದೆ. ಕಷ್ಟದ ಮಾತೆಲ್ಲಿ ಬಂತು?

ಅವಳು: ಊಹೂಂ. ನಾನು ಹೇಳುತ್ತಿರುವುದು ಮದುವೆ ಆದ ನಂತರದ ವಿಚಾರ.

***

ಹೆಂಡತಿ: ನನ್ನ ಆಯುಷ್ಯವನ್ನೂ ದೇವರು ನಿಮಗೇ ಕೊಡಲಿ ಎಂದು ಆತನಲ್ಲಿ ದಿನವೂ ಪ್ರಾರ್ಥಿಸುತ್ತೇನೆ.

ಗಂಡ: ಅಂದರೆ? ನಾನು ಬೇಗ ಮುದುಕನಾಗಿ ನೀನು ಮಾತ್ರ ಯುವತಿಯಾಗೇ ಇರಬೇಕೆಂದಿದೆಯೇನು?

ಸಂಗ್ರಹ: 'ರಮಾ'

# ಹೀಗೊಂದು ಉಪಯುಕ್ತ ಪುಸ್ತಕ

• ಪ್ರತಿಭಾ

'ದಿ ಎನ್‌ಸೈಕ್ಲೋಪೀಡಿಯಾ ಆಫ್ ಸ್ಟ್ರೇಂಜ್ ಆ್ಯಂಡ್ ಸರ್‌ಪ್ರೈಸಿಂಗ್ ಟೂಲ್ಸ್' (ವಿಚಿತ್ರ ಹಾಗೂ ಅಚ್ಚರಿ ತರಿಸುವ ಉಪಕರಣಗಳ ವಿಶ್ವಕೋಶ) ಎಂಬುದು ಈ ಪುಸ್ತಕದ ಹೆಸರು. ಲೇಖಕ ಕಂಜಿ ಕವಾಕಾಮಿ. ಜಪಾನ್ ದೇಶಿಗ. ಈಗಾಗಲೇ ಈ ಪುಸ್ತಕದ ಹತ್ತು ಲಕ್ಷ ಪ್ರತಿಗಳು ಮಾರಾಟವಾಗಿವೆ. ಮತ್ತೆ ಮತ್ತೆ ಹೊಸ ಆವೃತ್ತಿಗಳು ಸಿದ್ಧಗೊಳ್ಳುತ್ತಲೇ ಇವೆ. ಜಪಾನಿನವರಷ್ಟೇ ಅಲ್ಲ, ಹೊರಗಿನವರೂ ಮುಗಿಬಿದ್ದು ಖರೀದಿಸುತ್ತಿದ್ದಾರೆ. ಕೆಲವರು ಇದರಲ್ಲಿಯ ಉಪಕರಣಗಳ ಪ್ರಯೋಜನ ಪಡೆದರೆ, ಇನ್ನು ಕೆಲವರು ಅವುಗಳನ್ನು ಕೇವಲ 'ಮಜ'ಕ್ಕಾಗಿ ಬಳಸುತ್ತಿದ್ದಾರೆ. ಪ್ರತ್ಯುತ್ಪನ್ನಮತಿಗಳು ಇದರಲ್ಲಿಯ ಉಪಕರಣಗಳ ಪ್ರೇರಣೆಯಿಂದ ಬೇರೆ ವಸ್ತುಗಳನ್ನು ವಿನ್ಯಾಸಗೊಳಿಸಿ ತಯಾರಿಸಿ ಲಾಭಮಾಡಿಕೊಳ್ಳುತ್ತಲೂ ಇದ್ದಾರೆ.

ನಗರವಾಸಿಗಳಿಗೆ ಇದು ತುಂಬ ಉಪಯುಕ್ತವೆನಿಸಬಲ್ಲ ಪುಸ್ತಕವಂತೆ. ಎರಡು ಭಾಗಗಳಲ್ಲಿ ಪ್ರಕಟವಾಗಿರುವ ಇದರಲ್ಲಿ ಇರುವುದಾದರೂ ಏನು? ಇಡೀ ಪುಸ್ತಕವನ್ನು ವಿವರಿಸುವುದಂತೂ ಕಷ್ಟದ ಮಾತು. ಆದರೆ ಇಲ್ಲಿ ನಿಮ್ಮ ಮಾಹಿತಿಗಾಗಿ ನಾಲ್ಕು ಚಿತ್ರಗಳನ್ನೂ ಅವುಗಳಿಗೆ ಅಡಿಟಿಪ್ಪಣಿ'ಯನ್ನೂ ಕೊಟ್ಟಿದ್ದೇವೆ. ಪುಸ್ತಕದ ತುಂಬ ಚಿತ್ರಗಳು ಮತ್ತು ಹೀಗೆ ಅಡಿಟಿಪ್ಪಣಿಗಳೇ ಇವೆ.



**೧) ಕೊಡೆ ಹಿಡಿಯುವುದೆ ಬೇಡ:**

ಮಳೆಗಾಲ, ಬೇಸಿಗೆಗಳಲ್ಲಿ ಕೊಡೆಯೇರಿಸಿ ಅದನ್ನು ಕೈ ಬದಲಾಯಿಸುತ್ತ ಹಿಡಿದು ಅಡ್ಡಾಡುವಂಥ ತೊಂದರೆ ಇನ್ನೊಂದಿಲ್ಲ. ಆಗ ಮತ್ತೊಂದು ಕೈಯಲ್ಲಿ ಸ್ವಲ್ಪ ಭಾರದ ವಸ್ತುವಿದ್ದರಂತೂ ತೀರಿಯೇ ಹೋಯಿತು. ಆ ತೊಂದರೆ ತಪ್ಪಿಸಲೆಂದೇ ವಿನ್ಯಾಸಗೊಳಿಸಲ್ಪಟ್ಟ ಕೊಡೆ ಇದು. ಶಿರಸ್ತ್ರಾಣದೊಂದಿಗೆ ಅಂಟಿಕೊಂಡೇ ಇರುವ ಇದನ್ನು ಯಾವ ಕೋನಕ್ಕಾದರೂ ತಿರುಗಿಸಬಹುದು. ಇನ್ನು ನೀವು ಕೊಡೆಯನ್ನು ತಲೆಗೇರಿಸಿ ಹಾಯಾಗಿ ಎರಡೂ ಕೈಗಳನ್ನು ಬೀಸುತ್ತಲೋ ಇಲ್ಲ, ಏನಾದರೂ ವಸ್ತುವನ್ನು ಹಿಡಿದುಕೊಂಡೋ ಸಂಚರಿಸಲು ಅಡ್ಡಿಯಿಲ್ಲ.





೨) ಇತರ ಕೆಲಸ ಮಾಡುತ್ತಲೇ ಬಟ್ಟೆ ಒಗೆಯಿರಿ:

ಧಾವಂತದ ಈ ದಿನಗಳಲ್ಲಿ ಮನೆಯಲ್ಲಿ ಮುಂಜಾನೆಯ ಸಮಯದಷ್ಟು ತಲೆಚಿಟ್ಟು ಹಿಡಿಸುವ ಅವಧಿ ಮತ್ತೊಂದಿಲ್ಲ. ಅಡಿಗೆಗೆ ನಿಂತರೆ ಬಟ್ಟೆ ಒಗೆಯುವುದು ಯಾವಾಗ? ಬಟ್ಟೆ ಒಗೆಯಲು ಕೂತರೆ ಗಂಡ-ಮಕ್ಕಳಿಗೆ ಊಟ ಬಡಿಸುವುದು ತಡವಾಗುತ್ತದಲ್ಲ? ಹೀಗೆ ಇನ್ನೊಂದು ಕೆಲಸದಲ್ಲಿದ್ದಾಗಲೂ ಸಣ್ಣ ಪುಟ್ಟ ಬಟ್ಟೆಗಳನ್ನು ಒಗೆಯಲೆಂದೇ ಈ ಉಪಕರಣ ಸಿದ್ಧಗೊಂಡಿದೆ. ಕಾಲಿಗೆ ಕಟ್ಟಿ ಕೊಂಡು, ನೀರು-ಡಿಟರ್ಜೆಂಟ್ ಪೌಡರು ಹಾಗೂ ಬಟ್ಟೆಗಳನ್ನು ಇದರಲ್ಲಿ ಹಾಕಿ ಬಂದ್ ಮಾಡಿ ನಿಮ್ಮಷ್ಟಕ್ಕೆ ನೀವು ಬೇರೆ ಕೆಲಸ ಮಾಡುತ್ತ ತಿರುಗಾಡಿ. ಬಟ್ಟೆ ನಿಮ್ಮ ಓಡಾಟ ದಿಂದ ಘಲ್ಲಿಸಲ್ಪಟ್ಟು ಸ್ವಚ್ಛವಾಗಿರುತ್ತದೆ.



೩) ಬಹೂಪಯೋಗಿ ಟೈ:

ಎಲ್ಲಿಟ್ಟೆ, ತಂದೆನೋ ಇಲ್ಲವೋ ಎಂದು ಅಂಗಿ, ಕೋಟು, ಪ್ಯಾಂಟುಗಳ ಜೇಬುಗಳ ನ್ನಾಗಲಿ; ಕೈಯಲ್ಲಿರುವ ಬ್ರೀಫ್‌ಕೇಸನ್ನಾಗಲಿ ತಡಕಾಡುವ ಪ್ರಮೇಯವೇ ಇಲ್ಲ. ಈ ನೆಕ್‌ಟೈ ಅಂದಂದಿನ ಎಲ್ಲ ಅವಶ್ಯಕ ಕಾಗದ ಪತ್ರ, ಚೆಕ್ ಬುಕ್ಕು, ವಿಸಿಟಿಂಗ್ ಕಾರ್ಡುಗಳನ್ನು ಇಟ್ಟುಕೊಳ್ಳಲು ಅನುವಾಗುವಂತೆಯೇ ರೂಪಿ ಸಲ್ಪಟ್ಟಿದೆ.

೪) ಹೋಗುತ್ತಲೇ ಬಟ್ಟೆ ಒಣಗಿಸಿಕೊಳ್ಳಿ:

ಸೈಕಲ್ ಮೇಲೋ ಇತರ ದ್ವಿಚಕ್ರವಾಹ ನಗಳ ಮೇಲೋ ತಿರುಗುವವರಿಗೆ ಇದೊಂದು ವರವಿದ್ದಂತೆ. ಈ ಸ್ಟ್ಯಾಂಡಿಗೆ ಒಗೆದ ಒದ್ದೆ ಬಟ್ಟೆಗಳನ್ನು ತೂಗುಹಾಕಿ ನಿಮ್ಮ ಪಾಡಿಗೆ ನೀವು ಸೈಕಲ್ ಬಿಡುತ್ತಲೇ ಇರಿ. ಬಟ್ಟೆ ತನ್ನ ಪಾಡಿಗೆ ತಾನು ಒಣಗುತ್ತಲೇ ಇರುತ್ತದೆ. ಅದೂ ಅಗತ್ಯಕ್ಕಿಂತ ಕಡಿಮೆ ಸಮಯದಲ್ಲಿ!



# ಕ್ರಿಕೆಟ್ ಪುಟ

• ಆದಿಕೇಶವ

## ಅಂದಿನ ಆಟ ! ಇಂದಿನ ನೋಟ !

ಕ್ರಿಕೆಟ್‌ನಲ್ಲಿ ಕುತೂಹಲಕಾರಿಯಾಗಿ, ನಾಟಕೀಯ ತಿರುವು ಕಂಡು ರೋಮಾಂಚನಕಾರಿ ಹಂತದಲ್ಲಿ ಮುಗಿದ ಪಂದ್ಯಗಳು ಸಾಕಷ್ಟಿರಬಹುದು. ಆದರೆ ದಕ್ಷಿಣ ಆಫ್ರಿಕಾದ ಮಣ್ಣಿನಲ್ಲಿ ಹತ್ತು ವರ್ಷಗಳ ನಂತರ ದ. ಆಫ್ರಿಕಾ ಹಾಗೂ ಇಂಗ್ಲೆಂಡ್ ನಡುವಣದ ಪ್ರಪ್ರಥಮ ಟೆಸ್ಟ್ ನೀಡಿದ ಮೈ ಜುಮ್ಮೆನ್ನುವ ಫಲಿತಾಂಶವನ್ನು ಯಾರೂ ಮರೆತಿಲ್ಲ, ಮರೆಯಲಾರರು.

ಪಂದ್ಯದ ಅಂತಿಮ ದಿನ ಜಿನುಗು ಮಳೆಯಲ್ಲಿಯೂ ಗೆಲ್ಲಲೇಬೇಕೆಂಬ ಛಲದಿಂದ ಹಣಾಹಣಿಯ ಹೋರಾಟಕ್ಕೆ ಇಬ್ಬರೂ ನಾಯಕರು ಸಿದ್ಧರಾಗಿ ಉಳಿದವರಲ್ಲಿ ಈ ಬಗ್ಗೆ ಎಚ್ಚರಿಕೆ ನೀಡಿದ್ದರು.

ಆಟ ಮುಗಿಯಲು ಕೇವಲ ಮೂರು ಎಸೆತಗಳು ಬಾಕಿಯಿದ್ದವು. ಇಂಗ್ಲೆಂಡಿನ ಒಂಬತ್ತನೆ ಹುದ್ದರಿ ಜೋಡಿ ಮೈದಾನದಲ್ಲಿ ಎದುರಾಳಿಯ ಎಸೆತಕ್ಕೆ ಯಾವ ಉತ್ತರ ನೀಡಬೇಕೆಂಬ ವಿಚಾರದಲ್ಲಿ ಮಗ್ನವಾಗಿದ್ದರೆ, ಉಸಿರು ಬಿಗಿ ಹಿಡಿದು ಕುಳಿತ ಪ್ರೇಕ್ಷಕ ಗಣ ಜಯ ಯಾರಿಗೆ ಎಂಬುದನ್ನು ಕಾದು ನೋಡುತ್ತಿತ್ತು.

ಈ ಟೆಸ್ಟಿನಲ್ಲಿ ನಾಲ್ಕರ ಪೈಕಿ ಒಂದು ಪರಿಣಾಮ ಖಚಿತವಾಗಿತ್ತು. ಒಂದು 'ಡ್ರಾ' ಆಗಬೇಕು ಇಲ್ಲವೇ 'ಟೈ'ದಲ್ಲಿ ಮುಗಿಯಬೇಕು ಅಥವಾ ಇಬ್ಬರಲ್ಲಿ ಒಬ್ಬರಿಗೆ ಜಯ ದಕ್ಕಬೇಕು. ಕಡೆಯ ಎಸೆತ ಬಿದ್ದಾಗ ನಾಲ್ಕನೆಯ ತರ್ಕ ನಿಜವಾಗಿ ಮತ್ತೊಂದು ಅಭೂತಪೂರ್ವ ವಿಜಯ ಇತಿಹಾಸದ ದಾಖಲೆ ಪುಟ ಸೇರಿತು.

### ಮೈದಾನದಲ್ಲಿ

ಮೊದಲು ಬ್ಯಾಟ್ ಮಾಡಲೆಂದೇ ಟಾಸ್ ಗೆದ್ದ ದ. ಆಫ್ರಿಕಾದ ನಾಯಕ ಡಡ್ಲೆ ನೌರ್ಸ್‌ಗೆ ಪಂದ್ಯದ ಎರಡನೇ ದಿನ ಹವಾಮಾನ ಬದಲಾಗುವ ಬಗ್ಗೆ ಅರಿವಿತ್ತೆಂದು ಕಾಣುತ್ತದೆ. ಹೀಗಾಗಿ ಆರಂಭದ ದಿನವೇ ಸಾಧ್ಯವಾದಷ್ಟು ಹೆಚ್ಚಿನ ಮೊತ್ತ ಸಂಗ್ರಹಿಸುವ ಲೆಕ್ಕ ಡಡ್ಲೆ ಅವರದು. ಆದರೆ ಇಂಗ್ಲೆಂಡಿನ ಅಲೆಕ್ ಬೆಡ್ಸರ್ (೪-೩೯) ಮತ್ತು ಕ್ಲಿಫ್ ಗ್ಲಾಡ್‌ವಿನ್ (೩-೨೧) ಅವರ ಲೆಕ್ಕಾಚಾರ ಬುಡಮೇಲು ಮಾಡಿದರು. 'ಒಣಗಿದ ಎಲೆಗಳು' ಉದುರುವಂತೆ ದ. ಆಫ್ರಿಕಾ ತನ್ನ ಸರದಿಯನ್ನು ಬರೀ ೧೬೧ ಓಟಗಳಿಗೆ ಮುಗಿಸಿತು.

ವಿಕೆಟ್‌ಕೀಪರ್ ಗಾಡ್‌ಫ್ರೆ ಇವಾನ್ಸ್ ಮತ್ತು ಶಾರ್ಟ್‌ಲೆಗ್‌ನಲ್ಲಿ ಬಕಪಕ್ಷಿಯಂತೆ ಕ್ಯಾಚ್‌ಗಾಗಿ ಕಾದು ನಿಂತಿದ್ದ ಡೆನಿಸ್ ಕಾಂಪ್ಟನ್ ತಮ್ಮಿಬ್ಬರ ನಡುವೆ ಐದು ಕ್ಯಾಚ್ ತೆಗೆದುಕೊಂಡರು. ಆದರೆ ಪಂದ್ಯಕ್ಕೆ ತಿರುವು ಬಂದಿದ್ದು ಅಲನ್ ವಾಟ್‌ಕಿನ್ಸ್ ಹಿಡಿದ 'ಅಮೋಘ ಕ್ಯಾಚ್'ನಿಂದ ದ. ಆಫ್ರಿಕಾದ ಪರ ಬಂದ ಒಂದೇ ಒಂದು ಅತ್ಯುತ್ತಮ

# ಕೊನೆಯ ಎಸೆತ ತಂದ ಮೈ ಜುಮ್ಮೆನ್ನುವ ಗೆಲುವು

ಪಂದ್ಯ: ದಕ್ಷಿಣ ಆಫ್ರಿಕಾ ಇಂಗ್ಲೆಂಡ್ ಪ್ರಥಮ ಟೆಸ್ಟ್ ೧೯೪೮-೪೯
ಸ್ಥಳ: ಕಿಂಗ್ಸ್ ಮೆಡ್, ಡರ್ಬನ್
ದಿನಾಂಕ: ಡಿಸೆಂಬರ್ ೧೬, ೧೭, ೧೮, ೨೦

ಜೊತೆಯಾಟವನ್ನು ಈ ಕ್ಯಾಚ್ ಮುರಿಯಿತು. ನೌರ್ಸ್ (೩೭) ರೈಟ್ ಅವರ ಬೌಲಿಂಗ್‌ನಲ್ಲಿ ಶಕ್ತಿಹಾಕಿ ಹೊಡೆದ ಶಾಟ್‌ನ್ನು ಆಟ್‌ಕಿನ್ಸ್ ಒಂದೇ ಕೈಯಲ್ಲಿ ಅದ್ಭುತವಾಗಿ ಹಿಡಿದರು. ನೌರ್ಸ್ ನಿರ್ಗಮಿಸುವ ಮುನ್ನ ಮೂರನೇ ಹುದ್ದರಿ ಪಾಲುಗಾರಿಕೆಯಲ್ಲಿ ಬ್ರೂಸ್ ಮಿಚೆಲ್ (೨೭) ಜೊತೆ ಅಮೂಲ್ಯ ೫೧ ಓಟ ಸೇರಿಸಿದ್ದರು.

ಆತಿಥೇಯರ ೧೬೧ ಮೊತ್ತ ಇಂಗ್ಲೆಂಡಿಗೆ ದೊಡ್ಡ ಸವಾಲಾಗಿರಲಿಲ್ಲ. ಎರಡನೇ ದಿನ ಆಗಾಗ ಬೀಳುತ್ತಿದ್ದ ಮಳೆಯಲ್ಲಿಯೂ ನಾಯಕ ಅಂದುಕೊಂಡಂತೆ ಆರಂಭದ ಜೋಡಿ ಲೆನ್ ಹಟನ್ (೮೩) ಹಾಗೂ ಸೈರಿಲ್ ವಾಷ್‌ಬ್ರೂಕ್ (೩೫) ೮೪ ಓಟ ಸಂಗ್ರಹಿಸಿ ಉತ್ತಮ ಅಡಿಪಾಯ ಹಾಕಿತು. ನಿಧಾನವಾಗಿ ಶತಕದತ್ತ ಹೆಜ್ಜೆ ಇಡುತ್ತಿದ್ದ ಹಟನ್‌ಗೆ ರೋವನ್ (೪-೧೦೮) ಬಿಡಲಿಲ್ಲ. ಈ ವಿಕೆಟ್ ಮ್ಯಾಕ್‌ಕಾರ್ಲ್ ಹಿಡಿದ ಕ್ಯಾಚ್ ಮೂಲಕ ರೋವನ್‌ಗೆ ದಕ್ಕಿತು. ಆಮೇಲೆ ಬಂದ ಕಾಂಪ್ಟನ್ (೭೨) ಆಫ್ರಿಕಾ ಬೌಲರ್‌ಗಳನ್ನು ಕೆಣಕಿದರು. ಆದರೆ ಬೃಹತ್ ಸ್ಕೋರು ಮಾಡುವ ಇಂಗ್ಲೆಂಡಿನ ಆಸೆ ಈಡೇರಲಿಲ್ಲ. ಮೂವರನ್ನು ಬಿಟ್ಟರೆ ಉಳಿದವರು 'ಪಿಚ್'ನಲ್ಲಿ ಹೆಚ್ಚು ಹೊತ್ತು ನಿಲ್ಲದೆ ೨೫೩ಕ್ಕೆ ತಮ್ಮ ಸರದಿ ಮುಗಿಯುವಂತೆ ಮಾಡಿದರು.

ಆಗಾಗ ಬಿದ್ದ ಮಳೆ ಇಂಗ್ಲೆಂಡಿನ ಬ್ಯಾಟಿಂಗ್ ಕ್ಷಿಪ್ರವಾಗಿ ಕುಸಿಯುವಂತೆ ನೋಡಿಕೊಂಡಿತು. ಸ್ಪಿನ್ ಜೋಡಿ ತುಫ್ಟಿಮನ್ (೬-೫೯) ಮತ್ತು ರೋವನ್ ಇಂಗ್ಲೆಂಡಿನ ಬ್ಯಾಟಿಂಗ್ ಬುಡ ಕತ್ತರಿಸಿದರು.

ಇಷ್ಟಾದರೂ ದ್ವಿತೀಯ ಸರದಿಯಲ್ಲಿ ಆಫ್ರಿಕಾದ ಬ್ಯಾಟಿಂಗ್ ಹೇಳಿಕೊಳ್ಳುವಂತಾಗಲಿಲ್ಲ. ಆರಂಭದ ಜೋಡಿ ಬೇಗನೇ ನಿರ್ಗಮಿಸಿತು. ಮೊತ್ತ ೧೦೦ ದಾಟಿರಲಿಲ್ಲ ಆಗಲೇ ನಾಲ್ಕು ವಿಕೆಟ್‌ಗಳು ಬಿದ್ದಿದ್ದವು. ಐದನೇ ಹುದ್ದರಿ ಜೊತೆಯಾಟದಲ್ಲಿ ವಾಡೆ (೬೩) ಮತ್ತು ಬೆಗ್ಬಿ (೪೮) ಸೇರಿಸಿದ ೮೫ ಓಟಗಳು ಮೆಲುಗೈ ಸಾಧಿಸಿದೆವೆಂಬ ಹುರುಪಿನಲ್ಲಿದ್ದ ಇಂಗ್ಲೆಂಡಿಗೆ ಬೆವರಿಳಿಸಿದವು. ಪ್ರವಾಸಿಗರ ಪರ ಈ ಸಲ ಜೆನ್‌ಕಿನ್ಸ್ (೩-೬೪) ಮತ್ತು ರೈಟ್ (೪-೭೨) ಬೌಲಿಂಗ್‌ನಲ್ಲಿ ಮಿಂಚಿದರು.

ಪಂದ್ಯದ ಐದನೇ ಹಾಗೂ ಕಡೆಯ ದಿನ ಸಂಪೂರ್ಣ ಕುತೂಹಲಕಾರಿ ಘಟ್ಟ ಮುಟ್ಟಿತ್ತು. ಒಂದೆಡೆ ನಿಚ್ಚಳ ಜಯ ಗೆಲುವು ಪಡೆಯುವದಕ್ಕೆ ೧೩೫ ನಿಮಿಷಗಳಲ್ಲಿ ೧೨೮ ಓಟ ಗಳಿಸಬೇಕಾದ ಕಠಿಣ ಸವಾಲು ಇಂಗ್ಲೆಂಡ್ ಮುಂದೆ. ಮತ್ತೊಂದು ತುದಿಯಲ್ಲಿ ವೇಗದ ಬೌಲಿಂಗಿಗೆ ನೆರವು ನೀಡತೊಡಗಿದ್ದ ಈ ಪಿಚ್‌ನಲ್ಲಿ ಜಯ ಬಿಟ್ಟು ಕೊಡಬಾರದೆನ್ನುವ ಹಟ ದ. ಆಫ್ರಿಕಾದವರದು.

ಗೆಲ್ಲಲೇಬೇಕೆಂಬ ಹಟ ಹಿಡಿದು ಹೋರಾಡಿದ ಆಫ್ರಿಕನ್ನರು ಎಂಟನೇ ವಿಕೆಟ್ ಬೀಳುವವರೆಗೆ ಪಂದ್ಯವನ್ನು ತಮ್ಮ ಕಡೆಗೇ ವಾಲಿಸಿಕೊಂಡಿದ್ದರು. ಇಂಗ್ಲೆಂಡಿನವರು ಕೈತಪ್ಪಿ ಹೋಗುತ್ತಿರುವ ಜಯದಿಂದ ಸಪ್ಪೆಯಾಗಿದ್ದರು. ಇಂತಹುದರಲ್ಲಿ

ಅಮೋಘ ಬೌಲಿಂಗ್ ಪ್ರದರ್ಶನ ನೀಡಿದ ೧೯ ವರ್ಷದ ಕ್ಯುನ್ ಮ್ಯಾಕ್‌ಕಾರ್ಥಿ (೬-೩೩) ಇಂಗ್ಲೆಂಡಿನವರಿಗೆ ಆಘಾತದ ಮೇಲೆ ಆಘಾತ ನೀಡಿದರು.

ಇಂಗ್ಲೆಂಡಿನ ಒಂಭತ್ತನೇ ಹುದ್ದರಿ ಜೋಡಿ ಮೈದಾನದಲ್ಲಿದೆ. ಎಲ್ಲರ ಕಣ್ಣು ಇವರ ಮೇಲೆಯೇ. ವೇಗದ ಬೌಲಿಂಗ್‌ನ್ನು ಇವರೇನು ತಡೆದುಕೊಂಡಾರು ಎಂಬುದೇ ಎಲ್ಲರ ತರ್ಕ. ಹೃದಯ ಬಡಿತ ನಿಲ್ಲುವ ವಾತಾವರಣದಲ್ಲಿ ಬೆಡ್ಸರ್ (೧) ಮತ್ತು ಗ್ಲಾಡ್‌ವಿನ್ (೭) ಎಂಟು ಎಸೆತಗಳ ಕಡೆಯ ಓವರ್ ಎದುರಿಸಲು ಸಜ್ಜಾಯಿತು. ಇಂತಹ ಸಮಯದಲ್ಲಿ ಜಿಟಿ ಜಿಟಿ ಮಳೆ ಆರಂಭ. ಆದರೆ ಆಟ ನಿಲ್ಲಿಸುವಂತೆ ಯಾರಿಂದಲೂ ಒತ್ತಾಯ ಇಲ್ಲ. ಆರನೇ ಎಸೆತದಲ್ಲಿ ಬೆಡ್ಸರ್ ಒಂದು ಓಟ ಕದ್ದು ಸ್ಕೋರನ್ನು ಸಮ ಮಾಡಿದರು. ಏಳನೇ ಎಸೆತವನ್ನು ಹೊಡೆಯಲು ಹೋದ ಗ್ಲಾಡ್‌ವಿನ್‌ಗೆ ಚೆಂಡು ಸಿಗಲೇ ಇಲ್ಲ.

ಪಂದ್ಯದ ಕಡೆಯ ಚೆಂಡು ಎಸೆಯಬೇಕು. ಲೆನ್ ಟುಕೆಟ್ (೧-೩೮) ಎಸೆಯಲು ಸಿದ್ಧರಾಗಿದ್ದಾರೆ. ಇಬ್ಬರೂ ಬ್ಯಾಟ್ಸ್‌ಮನ್‌ಗಳಲ್ಲಿ ಏನಾದರೂ ಮಾಡಿ ವಿಜಯದ ಓಟ ಗಳಿಸಲೇ ಬೇಕೆಂಬ ಬಗ್ಗೆ ವಿಚಾರ ವಿನಿಮಯ ನಡೆಯಿತು. ಟುಕೆಟ್ ವೇಗವಾಗಿ ಬಂದು ಬಾಲ್ ಮಾಡಿದರು. ಈ ಬಾರಿಯೂ ಚೆಂಡು ಗ್ಲಾಡ್‌ವಿನ್ ಬ್ಯಾಟಿಗೆ ಬಡಿಯಲಿಲ್ಲ ಬೌಂಡರಿ ಲೈನ್ ಬಳಿ ನಿಂತಿದ್ದ ಆಫ್ರಿಕಾ ಫೀಲ್ಡರ್‌ಗಳು ಗೆದ್ದೆವೆಂದು ಸಿಳ್ಳೆ ಹಾಕಿದರು. ಆದರೆ ಬ್ಯಾಟಿಗೆ ಬದಲಾಗಿ ಗ್ಲಾಡ್‌ವಿನ್ ತೊಡೆಗೆ ಬಡಿದ ಚೆಂಡು 'ಶಾರ್ಟ್‌ಲೆಗ್' ಕಡೆ ಹೋಯಿತು. ಇದೇ ಸಮಯ ಕಾಯುತ್ತಿದ್ದ ಬೆಡ್ಸರ್ ಮತ್ತೊಂದು ತುದಿಯಿಂದ ಬಿರುಗಾಳಿಯಂತೆ ಓಡಿ ಬಂದರು. "ಓಡು, ಬೇಗ ಓಡು" ಎಂಬ ಇವರು ಕೂಗು ಕೇಳಿಸಿಕೊಂಡ ಗ್ಲಾಡ್‌ವಿನ್ ಸಾಧ್ಯವಿದ್ದಷ್ಟು ಜೋರಾಗಿ ಓಡಿ ಸುರಕ್ಷಿತವಾಗಿ ಬೌಲಿಂಗ್ ತುದಿ ಮುಟ್ಟಿದರು. ಒಂದು ಕ್ಷಣ ಏನಾಯಿತೆಂಬುದು ಯಾರಿಗೂ ಗೊತ್ತಾಗಲೇ ಇಲ್ಲ.

ಇಂಗ್ಲೆಂಡ್ ಗೆದ್ದಿತು ಎಂದಾಗ ವೇಗವಾಗಿ ಓಡಿ ಪಿಚ್‌ನಲ್ಲಿ ಇನ್ನೂ ಸುಧಾರಿಸಿಕೊಳ್ಳುತ್ತಿದ್ದ ಬೆಡ್ಸರ್ ಹಾಗೂ ಗ್ಲಾಡ್‌ವಿನ್ ಅವರ ಹೃದಯ ಒಂದು ಸೆಕೆಂಡ್ ನಿಂತೇಬಿಟ್ಟಿತ್ತು. ಇಂಗ್ಲೆಂಡ್ ಶಿಬಿರದಲ್ಲಿ ಹರ್ಷವೋ ಹರ್ಷ. ಕೈಗೆ ಬಂದಿದ್ದ ತುತ್ತು ಬಾಯಿಗೆ ಬರಲಿಲ್ಲವಲ್ಲ ಎಂಬ ಅಸಮಾಧಾನ ಹೊತ್ತ ಆಫ್ರಿಕನ್ನರಿಗೆ ಎಂತಹ ರೋಮಾಂಚಕಾರಿ ಗೆಲುವು ತಪ್ಪಿತಲ್ಲ ಎನ್ನುವ ಕೊರಗು ಹಾಗೆಯೇ ಉಳಿಯಿತು. ಇಂಗ್ಲೆಂಡಿನ ಅಭೂತಪೂರ್ವ ವಿಜಯ ಕ್ರಿಕೆಟ್ ಇತಿಹಾಸಪುಟದಲ್ಲಿ ದಾಖಲಾಯಿತು. ಆತಿಥೇಯ ನಾಯಕನಿಗೆ ಕಣ್ಣೀರು ಬರುವದೊಂದೇ ಬಾಕಿ.

ಕಡೆಯ ದಿನದ ಆಟವನ್ನು ವೀಕ್ಷಿಸಿದವರು ಎಂದಿಗೂ ಆ ಕ್ಷಣ ಮರೆಯುವಂತಿಲ್ಲ. ಅಂತಹ ಅವಿಸ್ಮರಣೀಯ ನೆನಪು ಉಳಿಯುವಂತೆ ಮಾಡಿದ ಟೆಸ್ಟ್ ಪಂದ್ಯ ಇದು.

"ನನ್ನ ಜೀವಮಾನದಲ್ಲಿಯೇ ಇಷ್ಟೊಂದು ವೇಗವಾಗಿ ನಾನು ಎಂದೂ ಓಡಿರಲಿಲ್ಲ. ಕಡೆಯ ಎಸೆತದ ಮುನ್ನ ಅನುಭವಿಸಿದ ಆ ಉನ್ಮಾದದ ಕ್ಷಣವನ್ನೂ ಯಾವತ್ತೂ ಮರೆಯುವಂತಿಲ್ಲ" ಎಂದು ಬೆಡ್ಸರ್ ಉದ್ಗರಿಸಿದರು.

"ಇಂತಹ ಒತ್ತಡದಲ್ಲಿ ಈ ಟೆಸ್ಟ್ ಮುಗಿಯುತ್ತದೆಂದು ನಾನು ಎಣಿಸಿರಲಿಲ್ಲ" ಎಂದು ಕ್ಲಿಫ್ ಗ್ಲಾಡ್‌ವಿನ್ ಹೇಳಿದ್ದು ಅಷ್ಟೇ ನಿಜವಾಯಿತು.

"ಇಂಗ್ಲೆಂಡ್ ತಂಡದ ನಾಯಕನಾಗಿ ಟೆಸ್ಟ್ ಕ್ರಿಕೆಟ್‌ಗೆ ಪದಾರ್ಪಣೆ ಮಾಡಿದ ನನಗೆ ಈ ರೀತಿಯ ವಿಜಯದಿಂದ ಇನ್ನೂ ಚೇತರಿಸಿಕೊಳ್ಳಲಾಗುತ್ತಿಲ್ಲ. ಹೃದಯ ಬಡಿತ ನಿಲ್ಲಿಸುವಂತಹ ಪಂದ್ಯ ಇದು. ಇದನ್ನು ನಾನು ಎಂದಿಗೂ ಮರೆಯಲಾರೆ" ಎಂದು ಜಾರ್ಜ್‌ಮನ್ ಹೇಳಿದ್ದು ಪಂದ್ಯ ಎಷ್ಟೊಂದು ರೋಚಕಮಯವಾಗಿತ್ತು ಎನ್ನುವುದಕ್ಕೆ ಉದಾಹರಣೆ. ●



ಆ ಕಾಲದ ಮಾತು

# ಒಂದಿದ್ದಾಗಲೂ ನೋಟೂ ಇತ್ತು!

• ವೃಷಭೇಂದ್ರಯ್ಯ

ಈಗ ಎಲ್ಲೆಲ್ಲೂ ದುಡ್ಡಿನದೇ ದರ್ಬಾರು. ಪ್ರತಿ ದೇಶಕ್ಕೂ ತನ್ನದೇ ಆದ ನಾಣ್ಯ-ನೋಟುಗಳಿವೆ. ಹೀಗಾಗಿ ನಾಣ್ಯ-ನೋಟುಗಳಿಲ್ಲದ ನಾಡೊಂದನ್ನು ಊಹಿಸುವುದೂ ಕಷ್ಟ.

ಆದರೆ ಅಂಥ ಕಾಲವೂ ಒಂದಿತ್ತು. ಆಗ ವಸ್ತು ವಿನಿಮಯವೇ ವ್ಯವಹಾರವೆನಿಸಿತ್ತು. ತಮ್ಮಲ್ಲಿರುವ ವಸ್ತುವಿಗೆ ಬದಲಾಗಿ ತಮ್ಮಲ್ಲಿಲ್ಲದ ಅಥವಾ ತಮಗೆ ಅವಶ್ಯವಿದ್ದ ವಸ್ತುಗಳನ್ನು ಪಡೆಯುವುದು ಆಗಿನ ರೂಢಿ.

ಕ್ರಮೇಣ ಈ ಪದ್ಧತಿಯೂ ಮಾಯವಾಯಿತು. ನಾಣ್ಯಗಳ ಕಲ್ಪನೆ ಉಂಟಾಯಿತು. ಇದು ಬಹು ಹಳೆಯ ಕಥೆ. ಕಲ್ಲಿನಿಂದ ಮಾಡಿದ ಆಯುಧಗಳು ನಾಣ್ಯ ಸಮಾನವಾಗಿ ಬಳಸಲ್ಪಡತೊಡಗಿದವು. ರೋಮ್, ಸ್ಪಾರ್ಟಾ ಮತ್ತು ಕಾರ್ಥೇಜ್‌ನ ಜನ ಚರ್ಮದ ಚಿಕ್ಕ ದೊಡ್ಡ ತುಂಡುಗಳನ್ನು ನಾಣ್ಯಗಳಂತೆ ಉಪಯೋಗಿಸಲಾರಂಭಿಸಿದರು. ಗ್ರೀಕ್‌ನಲ್ಲಿಯಂತೂ ಹಸು-ಹೋರಿಗಳೇ ದುಡ್ಡಿನ ಕೆಲಸ ಮಾಡುತ್ತಿದ್ದವು. ಪ್ರಾಚೀನ ಚೀನ ಮತ್ತು ಟಿಬೆಟ್‌ಗಳಲ್ಲಿ ಚಹದ ಎಲೆಗಳನ್ನು ಒಟ್ಟುಗೂಡಿಸಿ, ಇಟ್ಟಿಗೆ ಗಾತ್ರಕ್ಕೆ ಕಟ್ಟಿ ಒಣಗಿಸಿ, ಅವನ್ನೇ ಹಣದಂತೆ ಕೊಡುಕೊಳ್ಳುತ್ತಿದ್ದರು. ಸುಮಾರು ಒಂದು ಶತಮಾನದಷ್ಟು ಕಾಲ ಈ ಪದ್ಧತಿ ಅಲ್ಲಿ ಜಾರಿಯಲ್ಲಿತ್ತು. ಅಲ್ಲದೇ ಅವಶ್ಯವೆನಿಸಿದರೆ ಈ ಚಹದಿಟ್ಟಿಗೆಯೇ ಉರುವಲಕ್ಕಾಗಿ ಹಾಗೂ ಚಹ ತಯಾರಿಸಲು ಉಪಯೋಗಕ್ಕೆ ಬರುತ್ತಿತ್ತು.

ನಾಗರಿಕತೆಗಳ ನಡುವೆ, ಸಾಮ್ರಾಜ್ಯಗಳ ನಡುವೆ ಆಯಾತ-ನಿರ್ಯಾತ ಶುರುವಾದಾಗಲೇ ನಾಣ್ಯ ಪದ್ಧತಿಯ ಅವಶ್ಯಕತೆಯೂ ಕಂಡಿರಬೇಕು. ಇತಿಹಾಸಕಾರರ ಪ್ರಕಾರ, ಸುಮಾರು ಮೂರು ಸಾವಿರ ವರ್ಷಗಳ ಹಿಂದೆ ಬೆಬಿಲೋನಿಯದಲ್ಲಿ ಚಿನ್ನದ ಕಡ್ಡಿಗಳು ನಾಣ್ಯದಂತೆ ನೀಡಲ್ಪಡುತ್ತಿದ್ದವು.

ನಾಣ್ಯ ಬಳಕೆಗೆ ಬಂದದ್ದು ಕ್ರಿಸ್ತಪೂರ್ವ ಏಳನೆಯ ಶತಮಾನದ ಸುಮಾರಿನಲ್ಲಿ. ಏಶಿಯಾ ಮಹಾದ್ವೀಪದ ಆಗಿನ 'ಲಿಡಿಯಾ' ರಾಜ್ಯ (ಈಗಿನ ತುರ್ಕಿ)ದಲ್ಲಿ ಮೊಟ್ಟ ಮೊದಲ ಬಾರಿಗೆ ನಾಣ್ಯಗಳ ಪದ್ಧತಿ ಆರಂಭವಾಯಿತೆಂದು ಉತ್ಖನನಗಳಿಂದ ಗೊತ್ತಾಗಿದೆ. ಚಿನ್ನ-ಬೆಳ್ಳಿ ಮಿಶ್ರಿತ ಈ ನಾಣ್ಯಗಳು ಕ್ರಿಸ್ತಪೂರ್ವ ೭೮೫-೭೫೦ರಲ್ಲಿ ಸಮ್ರಾಟ ಗೀಜ್‌ನ ಶಾಸನ ಕಾಲದಲ್ಲಿ ಜಾರಿಗೊಳಿಸಲ್ಪಟ್ಟವು. ಇವು ಒಂದೇ ಮುಖದ ನಾಣ್ಯಗಳು. ಅಲ್ಲಿ ಸಮ್ರಾಟನ ಇಲ್ಲವೆ ಸಾಮ್ರಾಜ್ಯ ಚಿನ್ಹದ ಚಿತ್ರ. ಇನ್ನೊಂದು ಬದಿ ಸಾಫು. ನಾಣ್ಯಕ್ಕೆ ಎರಡು ಮುಖಗಳ ಪ್ರಥೆ ಶುರುವಾದದ್ದು ಗ್ರೀಕ್‌ನಲ್ಲಿ. ಸಮ್ರಾಟ ಅಲೆಕ್ಝಾಂಡರ್‌ನ ಮೃತ್ಯು ಕ್ರಿಸ್ತಪೂರ್ವ ೩೨೩ರಲ್ಲಿ ಸಂಭವಿಸಿತು. ಮುಂದೆ ಆತನ ಪುಣ್ಯತಿಥಿಯ ಸಂದರ್ಭದಲ್ಲಿ ಅಗಲಿದ ದೊರೆಯ ಸ್ಮರಣಾರ್ಥ ಎರಡು ಮುಖಗಳ ನಾಣ್ಯ ಟಂಕಿಸಲ್ಪಟ್ಟಿತು.

ಜಗತ್ತಿನ ಅತಿ ದೊಡ್ಡ ನಾಣ್ಯ ಬಳಕೆಯಲ್ಲಿದ್ದದ್ದು ಪ್ರಶಾಂತ ಮಹಾಸಾಗರದ 'ಯಾಪ್' ಎಂಬ ಚಿಕ್ಕ ದ್ವೀಪದಲ್ಲಿ. ನಾಣ್ಯದ ಬೆಲೆ ಅದರ ಆಕಾರವನ್ನು ಅವಲಂಬಿಸಿರುತ್ತಿತ್ತು. ಅತಿ ಚಿಕ್ಕ ನಾಣ್ಯವೆಂದರೆ ಒಂಬತ್ತು ಅಂಗುಲದ್ದು, ಮತ್ತು




ಜಗತ್ತಿನ ಅತ್ಯಂತ ದೊಡ್ಡ ಮೊತ್ತದ ನೋಟು....
(೧೦ ಸಾವಿರ ಅಮೆರಿಕನ್ ಡಾಲರುಗಳು)

ಅತಿ ದೊಡ್ಡ ನಾಣ್ಯವೆಂದರೆ ೧೨ ಅಡಿ ವ್ಯಾಸವುಳ್ಳದ್ದು! ಮಧ್ಯಮ ಆಕಾರದ ಇಂಥದೊಂದು ನಾಣ್ಯ ಕೊಟ್ಟರೆ ೧೮ ಅಡಿ ಉದ್ದದ ಒಂದು ನಾವೆಯನ್ನು ಖರೀದಿಸಬಹುದಿತ್ತಂತೆ. ಈ ನಾಣ್ಯ ಸುಣ್ಣದ ಕಲ್ಲಿನಿಂದ ಮಾಡಿದ್ದು. 'ಪಾಲಾವೂ' ಎಂಬ ದ್ವೀಪದಲ್ಲಿ ದೊರೆಯುತ್ತಿದ್ದ ವಿಶಿಷ್ಟ ಸುಣ್ಣದ ಕಲ್ಲು ಅದು. ಅವುಗಳನ್ನು ಅಲ್ಲಿಂದ ತರಿಸಿಕೊಂಡು 'ಯಾಪ್' ದ್ವೀಪದ ಆದಿವಾಸಿಗಳ ಕೈಗೆ ಕೊಟ್ಟರೆ ಅವರು ಅವುಗಳನ್ನು ಗೋಲಾಕಾರದಲ್ಲಿ ಕಡೆದು ನಡುವೆ ಒಂದು ತೂತು ಕೊರೆದು ನಾಣ್ಯ ತಯಾರಿಸಿಕೊಡುತ್ತಿದ್ದರು. ಈ ಟಂಕಿಗರಿಗೆ ಒಂದೊಂದು ನಾಣ್ಯದ ತಯಾರಿಕೆಗೂ ದಿನಗಟ್ಟಲೆ ಅವಧಿ ಬೇಕಾಗುತ್ತಿತ್ತು.

ಆಧುನಿಕ ನಾಣ್ಯಗಳು ಜಗತ್ತಿಗೆ ಆಂಗ್ಲರಿತ್ತ ಕೊಡುಗೆ. ಕ್ರಿ.ಶ. ೧೮೩೫ರಲ್ಲಿ ಭಾರತದಲ್ಲಿ ಆಂಗ್ಲರು ತಾಮ್ರದ ನಾಣ್ಯಗಳನ್ನು ಜಾರಿಗೆ ತಂದರು, ಎಂಟಾಣೆ-ನಾಲ್ಕಾಣೆಗಳ ನಾಣ್ಯಗಳನ್ನೂ, ತಾಮ್ರದಿಂದ ತಯಾರಿಸಿದ ಎರಡಾಣೆ, ಆಣೆ, ಅರ್ಧಾಣೆ ಮತ್ತು ಪೈಗಳನ್ನೂ ಹೊರಡಿಸಿದರು. ಆರನೆ ಜಾರ್ಜ್‌ನ ಕಾಲದಲ್ಲಿ ಹಿತ್ತಾಳೆಯ ನಾಣ್ಯಗಳೂ ವ್ಯವಹಾರಕ್ಕೆ ಬಂದವು. ೧೯೩೯ರ ವರೆಗೆ ಶುದ್ಧ ಬೆಳ್ಳಿಯ ರೂಪಾಯಿಯೇ ಇಲ್ಲಿತ್ತು. ತದನಂತರ ತಾಮ್ರ ಹಾಗೂ ನಿಕ್ಕೆಲ್ ನಾಣ್ಯಗಳೇ ಹೆಚ್ಚಾದವು.

ನೋಟುಗಳ ಸ್ವರೂಪ ನಿರ್ಧಾರ ಹಾಗೂ ಕಾಗದದ ಮೇಲೆ ಅವುಗಳನ್ನು ಮುದ್ರಿಸುವ ಕಾರ್ಯ ಆರಂಭವಾದದ್ದು ಚೀನದಲ್ಲಿ. ಏಳನೆಯ ಶತಮಾನದಷ್ಟು ಹಿಂದೆಯೆ. ಯಾಕೆಂದರೆ ಕಾಗದವನ್ನು ಶೋಧಿಸಿದವರೆ ಚೀನಿಯರಲ್ಲವೆ? ಕ್ರಿ.ಶ. ೯೧೦ರಲ್ಲಿ ಮೊಟ್ಟ ಮೊದಲ ಬಾರಿಗೆ ಅಲ್ಲಿ ಕಾಗದದ ಮೇಲೆ ನೋಟು ಮುದ್ರಿಸಲಾಯಿತೆಂದು ದಾಖಲೆಗಳು ತಿಳಿಸುತ್ತವೆ. ಮುಂದೆ ಅರವತ್ತು ವರ್ಷಗಳಲ್ಲಿಯೇ ಅಂದರೆ ಕ್ರಿ.ಶ. ೯೭೦ರ ಹೊತ್ತಿಗೆ ನೋಟು ಮುದ್ರಣದಲ್ಲಿ ಚೀನ ಸಾಕಷ್ಟು ಸುಧಾರಣೆಗೈದಿತು. ಅಷ್ಟೇ ಅಲ್ಲ, ಕಾಗದದ ಕರೆನ್ಸಿ ನೋಟುಗಳನ್ನು ಹೆಚ್ಚೆಚ್ಚು ಜನಪ್ರಿಯಗೊಳಿಸುವುದಕ್ಕಾಗಿ ಚೀನ ಒಂದು ವಿಶೇಷ ಕಾಯಿದೆಯನ್ನೇ ತಂದು ಚಿನ್ನ-ಬೆಳ್ಳಿಗಳನ್ನು ನಾಣ್ಯ ತಯಾರಿಕೆಗೆ ಬಳಸುವುದನ್ನು ನಿರ್ಬಂಧಿಸಿತು.

೧೩೬೮ ರಿಂದ ೧೩೯೯ರ ಮಧ್ಯದ ಅವಧಿಯಲ್ಲಿ ನೋಟುಗಳನ್ನು ಬ್ಯಾಂಕುಗಳ ಮೂಲಕ ವಿತರಿಸುವ ವ್ಯವಸ್ಥೆಯನ್ನು ಚೀನದಲ್ಲಿ ಮಿಂಗ್ ವಂಶದ ದೊರೆಗಳು ಪ್ರಾರಂಭಿಸಿದರು. ಇಂಥ ನೋಟುಗಳ ಅಗಲ ೨೨.೮ ಸೆಂಟಿಮೀಟರ್ ಮತ್ತು ಉದ್ದ ೩೩ ಸೆಂಟಿಮೀಟರ್ ಇರುತ್ತಿತ್ತು! ಇಂದಿಗೂ ಇದು ದಾಖಲೆಯಾಗಿಯೇ ಉಳಿದಿದೆಯಲ್ಲದೆ ಜಗತ್ತಿನ ಪ್ರಪ್ರಥಮ ಪ್ರಮಾಣಿತ ನೋಟೆಂದು ಪರಿಗಣಿಸಲ್ಪಟ್ಟಿದೆ. ೧೯೮೩ರ ಅಕ್ಟೋಬರ್ ೭ ರಂದು ಲಂಡನ್ನಿನಲ್ಲಿ ಇಂಥ ಮೂರು ನೋಟುಗಳನ್ನು ಹರಾಜು ಮಾಡಲಾ

ಯಿತು. ಒಂದೊಂದು ನೋಟಿಗೂ ದೊರೆತ ಬೆಲೆ ಎಷ್ಟು ಗೊತ್ತೆ? ೧೦೦೦೦ ಡಾಲರುಗಳು!

'ಗಿನ್ನಿಸ್ ದಾಖಲೆ ಪುಸ್ತಕ'ದ ಪ್ರಕಾರ ೧೬೬೧ರ ಜುಲೈ ತಿಂಗಳಿನಲ್ಲಿ ಬ್ಯಾಂಕ್ ನೋಟು ಗಳನ್ನು ಮೊದಲ ಬಾರಿಗೆ ಪ್ರಚಲಿತಗೊಳಿಸಿದ್ದು ಸ್ವೀಡನ್. ೧೮ನೇ ಶತಮಾನದ ಮಧ್ಯಭಾಗದಲ್ಲಿ ಅಮೇರಿಕವೂ ನೋಟುಗಳ ಮುದ್ರಣ ಕಾರ್ಯ ಪ್ರಾರಂಭಿಸಿತು. 'ಬ್ಯಾಂಕ್ ಆಫ್ ಇಂಗ್ಲೆಂಡ್'ನ ಮೊದಲ ನೋಟುಗಳ ಮುದ್ರಣ ೧೯೯೯ರ ಡಿಸೆಂಬರ್ ೧೯ ರಂದು ಆಯಿತಂತೆ. ಆದರೆ ಇನ್ನೊಂದು ಹೇಳಿಕೆಯ ಪ್ರಕಾರ ೧೮೫೩ರಲ್ಲಿ ಬ್ರಿಟಿಶ್ ಅಂಚೆ ಚೀಟಿಗಳ ಮುದ್ರಣಾಲಯದ ಮಾಲಿಕ ಥಾಮಸ್ ರೂ ಎಂಬಾತ ಸರಕಾರದ ವಿತ್ತ ವಿಭಾಗಕ್ಕೆ "ಲೋಹದ ನಾಣ್ಯಗಳ ಬದಲು ಕಾಗದದ ನೋಟುಗಳನ್ನು ಜಾರಿಗೆ ತರುವುದು ಹೆಚ್ಚು ಅನುಕೂಲಕರ" ಎಂದು ಸಲಹೆಯನ್ನಿತ್ತ ನಂತೆ. ೧೮೬೪ರಲ್ಲಿ ಬ್ರಿಟಿಶ್ ಸರಕಾರ ರೂನ ಈ ಸಲಹೆಯನ್ನು ಒಪ್ಪಿಕೊಂಡಿತು. ಯಾಕೆಂದರೆ ಲೋಹದ ನಾಣ್ಯಗಳಿಗಿಂತ ಕಾಗದದ ನೋಟು ಗಳು ಅತ್ತಿತ್ತ ಕೊಂಡೊಯ್ಯುವುದಕ್ಕೆ ಜೇಬಿನಲ್ಲಾ ಗಲಿ ಚೀಲದಲ್ಲಾಗಲಿ ಇಟ್ಟುಕೊಳ್ಳಲಿಕ್ಕೆ ಸುಲಭ ಎಂಬುದು ಗಮನಾರ್ಹ ಅಂಶವಾಯಿತು. ಆ ಮೇಲಂತೂ ಜಗತ್ತಿನ ಎಲ್ಲ ದೇಶಗಳಲ್ಲೂ ನೋಟುಗಳು ಕೈ ಬದಲಾಯಿಸತೊಡಗಿದವು.

ಪ್ರಮಾಣಿತವಾದ ಅಧಿಕೃತ ನೋಟುಗಳು ಜನಪ್ರಿಯವಾಗತೊಡಗಿದಂತೆಯೇ ಖೊಟ್ಟಿ ನೋಟುಗಳನ್ನು ಮುದ್ರಿಸಿ ಲಾಭ ಪಡೆದುಕೊಳ್ಳುವ ದುರಾಶೆಯ ಜನ ಹುಟ್ಟಿಕೊಂಡರು. ಅಂಥವರನ್ನು ಹುಡುಕಿ ಶಿಕ್ಷಿಸುವುದಕ್ಕಾಗಿಯೇ ಇಲಾಖೆಯೂ ಪ್ರಾರಂಭವಾಯಿತು. ಪ್ರತಿಯೊಂದು ದೇಶದಲ್ಲೂ ಇಷ್ಟೆಲ್ಲ ಕಟ್ಟುನಿಟ್ಟಿನ ಕಾನೂನುಗಳ ನಡುವೆಯೂ ಖೊಟ್ಟಿ ನೋಟುಗಳ ತಯಾರಕರು ಇದ್ದೇ ಇದ್ದಾರೆ. ಯಾವನಾದರೂ ತನ್ನ ಆದಾಯಕ್ಕಿಂತ ಹೆಚ್ಚು ಆಡಂಬರದ ಜೀವನ ಸಾಗಿಸುತ್ತಿದ್ದಾನೆಂಬುದು ಗಮನಕ್ಕೆ ಬಂದರೆ "ನೋಟು ಮುದ್ರಿಸುವ ಯಂತ್ರವನ್ನಿಟ್ಟುಕೊಂಡಿದ್ದಾನೆಯೆ?" ಎಂದೋ, "ರೊಕ್ಕದ ಗಿಡ ಬೆಳೆಸಿದ್ದಾನೆಯೆ?" ಎಂದೋ ಕೇಳುವುದನ್ನು ನೀವೆಲ್ಲ ಕೇಳಿಯೇ ಇರುತ್ತೀರಿ.

ಭಾರತದಲ್ಲಿ ಮೊದಲು ಸಾವಿರ ರೂಪಾ ಯಿಯ ನೋಟುಗಳು ಜಾರಿಯಲ್ಲಿದ್ದವು. ಅವುಗ ಳನ್ನು ಸರಕಾರ ಹಿಂದೆಗೆದುಕೊಂಡ ಮೇಲೆ ೧೦೦ ರೂಪಾಯಿಗಳ ನೋಟೇ ಹೆಚ್ಚಿನ ಮೌಲ್ಯದ್ದೆಂದು ಪರಿಗಣಿಸಲ್ಪಡುತ್ತಿತ್ತು. ಆದರೆ ಈಗ ೫೦೦ ರೂಪಾಯಿಗಳ ನೋಟು ನಮ್ಮಲ್ಲಿ ಹೆಚ್ಚು ಬೆಲೆ ಯದು. ಅಮೆರಿಕದ ಫೆಡರಲ್ ಬ್ಯಾಂಕು ಹೊರ ಡಿಸಿದ ೧೦,೦೦೦ ಡಾಲರುಗಳ ನೋಟು ಜಗತ್ತಿ ನಲ್ಲೇ ಈ ವರೆಗಿನ ಅತಿ ಹೆಚ್ಚು ರಕಮಿನದೆಂಬ ಕೀರ್ತಿಗೆ ಪಾತ್ರವಾಗಿದೆ. ಈ ನೋಟುಗಳ ಒಂದು ಬದಿಯಲ್ಲಿ ಸೊಲೊಮನ್ ಪೋರ್ಟ್‌ಲ್ಯಾಂಡ್ ಚೇಜ್ (೧೮೦೮-೧೮೭೩)ನ ಚಿತ್ರವಿದೆ. ೧೯೪೪ರ ಜುಲೈ ತಿಂಗಳಿನಲ್ಲಿ ಅಮೆರಿಕದ ಆರ್ಥಿಕ ಇಲಾಖೆ ಈ ಹತ್ತುಸಾವಿರ ಡಾಲರಿನ ನೋಟು ಮುದ್ರಿಸುವುದನ್ನು ನಿಲ್ಲಿಸಿತು. ೧೯೬೯ರಲ್ಲಿ ಅದು ೧೦೦ ಕ್ಕಿಂತ ಹೆಚ್ಚು ಡಾಲರು ಬೆಲೆಯ ನೋಟು ಗಳು ಇರಲೇಬಾರದೆಂಬ ಅಭಿಪ್ರಾಯಕ್ಕೆ ಬಂತು. ಇಷ್ಟೆಲ್ಲ ಆದರೂ ಇಂದಿಗೂ ಅಮೆರಿಕದಲ್ಲಿ ೧೦,೦೦೦ ಡಾಲರಿನ ನಾಲ್ಕು ನೂರು ನೋಟು ಗಳು ವ್ಯವಹಾರದಲ್ಲುಳಿದಿವೆಯಂತೆ.

ಅಚ್ಚರಿಯ ಸಂಗತಿಯೆಂದರೆ ಹದಿನೇಳನೆಯ ಶತಮಾನದವರೆಗೆ ಒಂದೇ ದೇಶದ ಬೇರೆ ಬೇರೆ ಬ್ಯಾಂಕುಗಳು ತಂತಮ್ಮವೇ ನೋಟುಗಳನ್ನು ವ್ಯವ ಹಾರದಲ್ಲಿ ತಂದದ್ದು. ಅಮೇರಿಕದಲ್ಲಂತೂ ೧೮-೧೯ನೆ ಶತಮಾನದಲ್ಲೂ ಇಂಥ ವಿಭಿನ್ನ ನೋಟುಗಳು ಜಾರಿಯಲ್ಲಿದ್ದವು. ೧೮೬೧ರಲ್ಲಿ ಅಲ್ಲಿ ೧೬೦೦ ಬ್ಯಾಂಕುಗಳಿದ್ದವು ಹಾಗೂ ಅವೆಲ್ಲ ಹತ್ತು ಸಾವಿರಕ್ಕೂ ಹೆಚ್ಚು ಸಂಖ್ಯೆಯಲ್ಲಿ ಬೇರೆ ಬೇರೆ ನೋಟುಗಳನ್ನು ಚಲಾಯಿಸುತ್ತಿದ್ದವು. ಇದರಿಂದ ಜನಕ್ಕೆ ಅನೇಕ ರೀತಿಯ ಸಮಸ್ಯೆಗಳನ್ನೆದುರಿಸಬೇ ಕಾಗಿ ಬಂತು. ಆಗಲೇ ನೋಟುಗಳನ್ನು ದೇಶದ ರಿಸರ್ವ್ ಇಲ್ಲವೆ ಸೆಂಟ್ರಲ್ ಬ್ಯಾಂಕ್ ಮಾತ್ರ ಹೊರಡಿಸಬೇಕೆಂಬ ಕಾನೂನು ಬಂದದ್ದು.

(ಆಧಾರಿತ)

ಉರ್ದು ಕಥೆ

# ಬುರ್ಖಾವಾಲಿ

ಮೂಲ: ರಜಾ-ವು-ಜಬ್ಬಾರ
ಅನುವಾದ: ಮಾಧವರಾವ್ ಮುಧೋಳ್

"ನಾನೂ ಸ್ತ್ರೀಯಾದುದರಿಂದ ನಿನ್ನ ಹೃದಯದ ತುಮುಲವನ್ನು ಸರಿಯಾಗೇ ಅರ್ಥಮಾಡಿಕೊಳ್ಳಬಲ್ಲೆ. ಅತ್ತಿಗೆ! ನಮಗೆ, ಭಾರತೀಯ ಮಹಿಳೆಗ, ಗಂಡನೇ ಸರ್ವಸ್ವ. ಅವನೊಡನೆ ಆಜೀವ ಹೊಂದಿ ನಡೆದುಕೊಳ್ಳುವುದೇ ನಮ್ಮ ಮೊದಲ ಕರ್ತವ್ಯ ಜೀವನದ ಗುರಿ, ಮೂಲ ಉದ್ದೇಶ. ಆದರೆ ಯಾರನ್ನು ನಾವು ನಮ್ಮ ಸರ್ವಸ್ವವೆಂದು ತಿಳಿದಿರುತ್ತೇವೆಯೋ ಅವರೇ ಎರಡನೆಯವರ ಸೊತ್ತಾದರೆ? ಅತ್ಯಂತ ದುಃಖವಾಗುತ್ತದಲ್ಲವೆ? ನಾನು ಅಣ್ಣನಿಗೆ ಎಷ್ಟೊಂದು ತಿಳಿಸಿ ಹೇಳಿದೆ. ಅತ್ತಿಗೆ! ಬೇಡಿಕೊಂಡೆ. ಅದೆಷ್ಟೋ ಸಲ ಸಿಡುಕಿನಿಂದಲೂ ಹೇಳಿದೆ. ಆದರೂ ಆತ ಸ್ವಲ್ಪವೂ ಮನಸ್ಸಿನ ಮೇಲೆ ತೆಗೆದುಕೊಳ್ಳಲಿಲ್ಲ. ಪ್ರತಿಯಾಗಿ ನನ್ನನ್ನು ಕಾಡಿಸುವುದಕ್ಕೆಂದೇ ಸದಾ ಆ ಬುರ್ಖಾವಾಲಿಯ ವಿಷಯವನ್ನೇ ಹೇಳುತ್ತಿರುವ. ಮೊನ್ನೆಯಂತೂ ತೀರ ಅಸಹನೀಯವೆನಿಸಿತು. ಊಟಕ್ಕೆ ತಟ್ಟೆ ಇಟ್ಟಿರುವುದಾಗಿ ಅಣ್ಣನಿಗೆ ಹೇಳಲು ನಿಮ್ಮ ರೂಮಿಗೆ ಹೋದೆ. ಅವಳು ನಿಮ್ಮ ಮಂಚದ ಮೇಲೆ ಕುಳಿತು ನಗುತ್ತಿದ್ದಳು. ಅಣ್ಣ ಎದುರಿನ ಚೇರ್ ಮೇಲೆ ಕುಳಿತು ಆ ಆಲ್ಬಮಿನ್ನಲ್ಲಿಯ ತನ್ನ ಬಾಲ್ಯದ ಚಿತ್ರಗಳನ್ನು ಒಂದೊಂದಾಗಿ ತೋರಿಸುತ್ತಿದ್ದ. ಜೊತೆಗೆ ನಗುವೂ ಮಾತೂ ಸಾಗಿತ್ತು. ಅದನ್ನು ಕಂಡು ನನ್ನ ಕಾಲು ಬಾಗಿಲಲ್ಲಿಯೇ ತಡೆದವು. ಒಳಗೆ ಹೋಗಲು ಸ್ವಲ್ಪ ಹಿಂಜರಿದೆ. ನನ್ನನ್ನು ನೋಡಿ ಅಣ್ಣ 'ಇಲ್ಲಿ ನೋಡು ಸುಧಾ! ಇವತ್ತು ಇನ್ನೊಂದು ತಟ್ಟೇನೂ ಇಡು ಊಟಕ್ಕೆ! ಬಾ ಇಲ್ಲಿ! ಇವರ ಪರಿಚಯ ಮಾಡಿಕೋ,' ಅಂದ

"ನಿಜ ಹೇಳ್ತೇನೆ ಅತ್ತಿಗೆ! ನನಗೆ ಮೈಯೆಲ್ಲಾ ಉರಿದು ಹೋಯಿತು. 'ನಿನಗೆ ನಾಚಿಕೆಯಾದರೂ ಹೇಗೆ ಆಗುವುದಿಲ್ಲ ಅಣ್ಣಾ?' ಎಂದು ತಡೆಯಲಾರದೆ ಕೂಗಿಬಿಟ್ಟೆ. ಕೋಪದ ಭರದಲ್ಲಿ ಏನೆಲ್ಲಾ ಹೇಳಿದೆ. ಆದರೆ ಅಣ್ಣ ಸಿಟ್ಟು ತುಂಬಿದ್ದರೂ ನಗೆ ನಟಿಸಿ 'ನನ್ನ ಸಂತೋಷದಿಂದ ನಿನಗೆ ಏನೂ ಆನಂದವಾಗುವುದಿಲ್ಲವೆ? ಸುಧಾ?' ಎಂದ. 'ಛಿ! ಸಂತೋಷವಂತೆ ಸಂತೋಷ!!' ಮತ್ತೇನೇನು ಹೇಳಿದನೊ? ಕೋಪದಿಂದ ಮತ್ತಳಾಗಿ ನನ್ನನ್ನು ನಾನೇ ಮರೆತಿದ್ದೆ. ಅಣ್ಣ ಆಲ್ಬಮಿನ್ನಿಂದ ನನ್ನ ಚಿತ್ರಗಳನ್ನೆಲ್ಲಾ ಕಿತ್ತು ಬಿಸುಟಿದ. ಕೋಪದಿಂದ-ಕಿಡಿಕಿಡಿಯಾಗಿ, 'ತಲೆಹರಟೆ ಸಾಕು ಸುಧಾ! ನನ್ನ ಪಾಡಿಗೆ ನನ್ನನ್ನು ಬಿಟ್ಟು ಬಿಡು. ಅಣ್ಣಾ ಅನ್ನುವಂತಿದ್ದರೆ, ಅಣ್ಣನ ಸಂತೋಷದ ಕಡೆಗೂ ಲಕ್ಷ್ಯವಿಡುವುದನ್ನು ಕಲಿತುಕೊ. ತಟ್ಟೆ ನಾನೇ ಹಾಕಿಕೊಳ್ಳುವೆ. ನಿನಗೇತಕ್ಕೆ ಶ್ರಮ? ಹೊರಟು ಹೋಗು' ಎಂದುಬಿಟ್ಟ. ನೋಡಿದಿಯಾ ಅತ್ತಿಗೆ! ಎಂಥ ಕೆಟ್ಟ ಕಾಲ ಬಂತು. ದೇವರು ಕಣ್ಣು ಮುಚ್ಚಿಕೊಂಡಿರಬಹುದೆ? ನನಗೆ ಎಷ್ಟು ದುಃಖವಾಯಿತು. ಅದರ ಕಲ್ಪನೆ ಕೂಡ ನಿನಗೆ ಆಗಲಿಕ್ಕಿಲ್ಲ. ಮನಸ್ಸು ದಣಿಯುವವರೆಗೆ ಅತ್ತುಬಿಟ್ಟೆ. ಇನ್ನು ಮೇಲೆ ಮರೆತೂ ನಿಮ್ಮ ರೂಮಿನೊಳಗೆ ಕಾಲಿಡಬಾರದೆಂದು ನಿರ್ಧರಿಸಿದ್ದೇನೆ. ಅವತ್ತಿನಿಂದ ನನ್ನ ಪಾಲಿಗೆ ಅಣ್ಣನೇ ಇಲ್ಲವೆಂದು ತಿಳಿದುಕೊಂಡಿದ್ದೇನೆ. ನೀರು ಕತ್ತಿನವರೆಗೆ ಬಂದಿದೆಯಾದರೂ ಸದ್ಯ ಮುಳುಗುವಷ್ಟೇನೂ ಇಲ್ಲ. ಆದರೂ ಅತ್ತಿಗೆ,

ನನ್ನ ಒಂದು ಮಾತು ನೀನು ನಡಿಸಲೇಬೇಕು. ಈ ಕಾಗದ ಕಂಡ ಕೂಡಲೆ ಬರುವ ಏರ್ಪಾಡು ಮಾಡಿಕೊಳ್ಳಬೇಕು. ನೀನು ಬಂದರೇನೇ ದಾರಿ ತಪ್ಪುತ್ತಿರುವ ಸಂಸಾರನೌಕೆ ಸರಿಯಾಗಿ ಸಾಗಬಹುದು.

"ಅವಳ ಮುಖವಾದರೂ ಕಂಡರೆ, ಅವರ ಮನೆಯಲ್ಲಾದರೂ ಹೇಳಬಹುದು. ಸದಾ ಮಾರುದ್ದ ಮುಸುಕು ಹಾಕಿಕೊಂಡಿರುತ್ತಾಳೆ ಮುಖಕ್ಕೆ. ಇವಳನ್ನು ಓಡಿಸುವುದಕ್ಕೆ ನನ್ನೊಬ್ಬಳಿಂದ ಸಾಧ್ಯವಿಲ್ಲ. ಈ ಎಲ್ಲ ವಿಷಯ ನಿನ್ನ ಮನೆಯಲ್ಲಿಯೂ ಗೊತ್ತಾಗುವುದು ಅಷ್ಟು ಸರಿಯಲ್ಲ. ಇದಕ್ಕೋಸ್ಕರವೇ. ಈ ಕಾಗದವನ್ನು ನಿನ್ನ ಕೈಗೇ ಸೇರಲೆಂದು, ಬೇರೆಯವರು ನೋಡಬಾರದೆಂದು ರಜಿಸ್ಟ್ರಿ ಮಾಡಿ ಕಳುಹಿಸಿರುವೆ. ನನ್ನ ಅಣ್ಣನ ಸ್ವಭಾವ ನಿನಗೆ ಚೆನ್ನಾಗಿ ಗೊತ್ತು. ಈ ಹಟವಾದಿಗಳ ಜೊತೆಗೆ ಸ್ವಲ್ಪ ಸೂಕ್ಷ್ಮವಾಗಿಯೇ ನಡೆದುಕೊಳ್ಳಬೇಕು. ದಾರಿ ಪೂರ್ತಿ ತಪ್ಪಿದರೆ ನಾನಾಗಲಿ ನೀನಾಗಲಿ ಮತ್ತೆ ಯಾರಿಂದಾಗಲಿ ಏನು ಮಾಡುವುದಾದೀತು? ಈ ಕಾಗದ ನಿನಗೆ ಶನಿವಾರ ಬೆಳಿಗ್ಗೆ ಅಥವಾ ಮಧ್ಯಾಹ್ನ ಸೇರುವುದು. ಅವತ್ತೇ ಸಂಜೆಗೆ ಒಂದು ರೈಲು ಇದೆ. ಆದರಿಂದ ಹೊರಟರೆ ಮರುದಿವಸವೇ ಇಲ್ಲಿಗೆ ತಲುಪುವಿ. ಇನ್ನೆರಡು ಮೂರು ದಿವಸಗಳಲ್ಲಿ ಅವರಿಬ್ಬರೂ ಯಾವುದೋ ಪ್ರವಾಸಕ್ಕೆ ಹೊರಡುವರೆಂದು ಕೇಳಿರುವೆ...."

ಸುಧಾಳ ಕಾಗದದ ಮೇಲಿನ ವಾಕ್ಯಗಳನ್ನು ಲಲಿತಾ ಮತ್ತೆ ಮತ್ತೆ ಓದಿದಳು. ದುಃಖ ಉಕ್ಕಿ ಬಂದು ಬಿಕ್ಕಿ ಬಿಕ್ಕಿ ಅತ್ತಳು. ಯೋಚಿಸಿ ಬೆಂಡಾದಳು. ಪುರುಷರನ್ನು ನಂಬುವುದೇ ಕಷ್ಟವೆನಿಸಿತು

## ಪತ್ರ ಕಂಡ ಕೂಡಲೇ ಆಕೆ ಓಡಿ ಬಂದದ್ದು ಯಾಕೆ?



ಆವಳಿಗೆ. ಮಡದಿ ಎದುರಿಗಿರುವಾಗ ಪ್ರೇಮದ ನಾಟಕ. ಎಲ್ಲಿಲ್ಲದ ಸರಸಸಲ್ಲಾಪ. ಬೇಕಾದರೆ ಭೂಮಿಗೆ ಸ್ವರ್ಗವನ್ನೂ ಇಳಿಸಿಯಾರು. ಪತ್ನಿಯೇ ಸರ್ವಸ್ವ. ಅವಳೇ ತನ್ನ ಜೀವ, ಕಣ್ಣು ಎಂದಾರು. ಸ್ವಲ್ಪ ಮರೆಯಾದಳೊ, ಕರಗಿತು ಅವರ ಪ್ರೇಮ. ಮುಂಜಾವಿನ ಮಂಜಿನ ಹಾಗೆ. ಕಟ್ಟಿದ ಕನಸು ಬಯಸಿದ ಆಶೋತ್ತರಗಳೆಲ್ಲ ಒಡೆದು ಚೂರಾದವು. ಎಂಥಾ ಸ್ವಾರ್ಥಿಗಳು ಈ ಪುರುಷರು! ಎಷ್ಟು ಕಠೋರ ಹೃದಯಿಗಳು! ಅವಳು ಮತ್ತೊಮ್ಮೆ ಕಾಗದವನ್ನು ಪೂರ್ತಿ ಓದಿದಳು. ದುಃಖದ ಉಮ್ಮಳ ಜ್ವಾಲೆಯಾಗಿ ಬಂದಿತು. ತಾಪವನ್ನು ಹತ್ತಿಕ್ಕುತ್ತ ಲಗುಬಗೆಯಿಂದ ತಾಯಿಯ ಬಳಿಗೆ ಬಂದು, "ಅಮ್ಮಾ! ನಾನು, ಇವತ್ತೇ ಊರಿಗೆ ಹೊರಡಬೇಕು" ಎಂದಳು.

"ಹಾಂ! ಇದೇನೇ ಇವತ್ತೇ ಹೊರಡೋದು? ನಾಲ್ಕಾರು ದಿವಸ ತಾಳು, ನಿನ್ನನ್ನು ಕಳಿಸಲಿಕ್ಕಾದರೂ ಜೊತೆಗೆ ಇವರು ಬರಬಾರದೇನೆ? ಇನ್ನೆರಡು ದಿವಸದಲ್ಲಿ ಅವರು ಬರತಾರೆ, ಸ್ವಲ್ಪ ಏನಾದರೂ ತಿಂಡಿ ಮಾಡಿ ಕಟ್ಟುತ್ತೇನೆ," ಅಂದರು ಅವಳ ತಾಯಿ.

"ನೀನು ಏನೂ ಚಿಂತೆ ಮಾಡಬೇಡಮ್ಮ. ಅವರು ತಕ್ಷಣ ಹೊರಟು ಬರಲು ಬರೆದಿದ್ದಾರೆ. ಒಂದು ಮಹತ್ವದ ಟೂರ್‌ಮೇಲೆ ಬೇರೆ ಹೋಗುತ್ತಾರಂತೆ. ನಾನು ಇದೀಗ, ಇಂದೇ ಹೊರಡುವೆನೆಂದು ತಂತಿ ಕಳಿಸಿರುವೆ. ನಾನು ಒಬ್ಬಳೇ ಹೋಗುವೆ. ಅವರು ಕರೆದುಕೊಂಡು ಹೋಗಲು ಸ್ಟೇಶನ್ನಿಗೆ ಬರುವರು. ನೀನು ಏನೂ ಭಯಪಡಬೇಕಾದದ್ದಿಲ್ಲ."

ಸಂಜೆಯ ರೈಲಿಗೆ ಟಿಕೆಟ್ ತೆಗೆದು ಫಸ್ಟ್‌ಕ್ಲಾಸಿನಲ್ಲಿ ಕುಳಿತಳು. ಒಬ್ಬಳೇ ಪ್ರವಾಸಮಾಡುತ್ತಿರುವುದು ಇದೇ ಮೊದಲ ಸಲ. ಆದರೂ ಅವಳಿಗೆ ಆ ರಾತ್ರಿ ಭಯವೇನೂ ಅನಿಸಲಿಲ್ಲ. ಏಕೆಂದರೆ ಕಾಗದದ ಚಿಂತೆ ಅವಳನ್ನು ಎಡೆಬಿಡದೆ ಕಾಡಿತ್ತು. ವೇಗವಾಗಿ ಚಲಿಸುತ್ತಿರುವ ರೈಲಿನಿಂದ ಇಣಿಕಿ ನೋಡಿದಾಗ ಹೊರಗಿನ ಇರುಳೇ ಆ ಮುಸುಕಿನ ಮಾಯಾವಿನಿಯೆಂಬಂತೆ ಭಯವಾಯಿತು, ಅವಳಿಗೆ. ಅವಳ ಕಪ್ಪು ಸೆರಗಿನ ಅಡಿಯಲ್ಲಿ ಸುಖ ಸೆರೆಸಿಕ್ಕು ನರಳುವಂತೆನಿಸಿತು. ಪೃಥ್ವಿಯ ಬೆಳಕನ್ನೇ ತಿಂದು ತೇಗಿದ ಕರಾಳ ಛಾಯೆ ಅದು ಎಂದು ಅತ್ಯಂತ ಭಯಕಂಪಿತಳಾಗಿ ಕಿಟಕಿಯನ್ನು ಧಡಲ್ಲನೆ ಮುಚ್ಚಿದಳು. ಮುಖ ತಿರುವಿದಾಗ, ಎದುರಿನ ಸೀಟಿನಲ್ಲಿ ಬುರ್ಖಾ ಧರಿಸಿ ಕುಳಿತಿರುವ ಸ್ತ್ರೀಯೊಬ್ಬಳನ್ನು ಕಂಡಳು. ಅವಳು ಹಿಂದಿನ ಸ್ಟೇಶನ್ನಿನಲ್ಲಿ ಹತ್ತಿರಬೇಕು. ಭೂತವನ್ನು ನೋಡಿದವಳಂತೆ ಬೆಚ್ಚಿಬಿದ್ದಳು ಲಲಿತಾ. ಭಯದಿಂದಲೇ ಹೇಳಿದಳು, "ನೋಡಿ ಅಮ್ಮಾ! ಈ ಬುರ್ಖಾ ತೆಗೆದುಬಿಡಿ. ನನಗೇಕೋ ಭಯವಾಗುತ್ತಿದೆ."

ಸ್ತ್ರೀ ನಗುತ್ತ ಮುಸುಕನ್ನು ತೆರೆದಳು. ಲಲಿತಾ ಉಸಿರೆಳೆದು, "ಪೃಥ್ವಿಯಲ್ಲಿರುವ ಮುಸುಕಿನ ಮರೆಯಲ್ಲಿರುವ ಎಲ್ಲ ಸ್ತ್ರೀಯರು ಹೀಗೆಯೇ ಇರಬಾರದೇ? ಆ ನನ್ನ ಮನೆ ಸೇರಿದ ಬುರ್ಖಾವಾಲಿಯೂ ಹೀಗೆಯೇ ಒಳ್ಳೆಯವಳೇ ಆಗಿರಲಿ ದೇವರೆ!" ಎಂದುಕೊಂಡಳು.

ತಾನು ತವರಿಗೆ ಈಗ ಬರಬಾರದಾಗಿತ್ತು. ಆದರೆ ಬಾರದೇ ಬಹಳ ದಿವಸಗಳಾಗಿದ್ದುವಲ್ಲ. ಗಂಡನನ್ನೂ ಬರಲು ಕರೆದಿದ್ದಳಾದರೂ ರಜೆ ಸಿಕ್ಕದಿದ್ದುದಕ್ಕೆ ಬರಲಾಗಲಿಲ್ಲ. ಅದಕ್ಕೆ ತನ್ನೊಬ್ಬಳನ್ನೇ ಕಳಿಸಿದರು. ಎಲ್ಲರನ್ನೂ ಭೆಟ್ಟಿಯಾಗಿ ಬಹಳ ದಿವಸಗಳಾಗಿದ್ದವು. ಜೊತೆಗೆ ಮನೆಯಲ್ಲಿ ತಂಗಿಯ ಲಗ್ನವೂ ಸಮೀಪಿಸಿತ್ತು. ಅಂತೆಯೇ ಅನಿವಾರ್ಯವಾಗಿ ಬರಬೇಕಾಯಿತು. "ಅಲ್ಲ! ಆ ಲಗ್ನದ ಸಮಯದಲ್ಲಿ ಎಲ್ಲರೂ ನಮ್ಮ ಮನೆಯವರನ್ನು ಎಷ್ಟು ಸಲ ಕರೆದರು? ನಾನೂ ಅದೆಷ್ಟು ಕಾಗದ ಬರೆದೆ? ಆದರೂ ಅವರು ಬರಲೇ ಇಲ್ಲ. ಬರಿಯ ಶುಭಾಶಯದ ಕಾಗದ ಮಾತ್ರ ಕಳಿಸಿದರು. ಹಾಂ! ಹೌದು!! ಅದೇ ದಿವಸದಿಂದ ಅವರು ಪತ್ರ ಬರೆಯುವುದನ್ನು ಕಡಿಮೆ ಮಾಡಿದ್ದಾರೆ. ಬರೆದರೂ, ಯಾವಾಗಾದರೊಮ್ಮೆ ಹರಕು ಮುರುಕು ನಾಲ್ಕು ವಾಕ್ಯಗಳು ಅಷ್ಟೆ. ಈಗ ಗೊತ್ತಾಯಿತು. ಇದೆಲ್ಲಾ ಆ ಮುಸುಕಿನ ಮಾಯಾಂಗನೆಯ ಪ್ರಭಾವವೆಂದು. ನನಗೆ ಕಂಟಕವಾಗಿ ಈ ರಾಕ್ಷಸಿ ಎಲ್ಲಿಂದ ಬಂದಳೊ? ಪಾಪ! ಸುಧಾಗೇನು

ಗೊತ್ತು 'ನೀರು ಮುಳುಗುವಷ್ಟು ಇನ್ನೂ ಬಂದಿಲ್ಲ' ಎಂದು ಬರೆದಿದ್ದಾಳೆ. ನನ್ನ ಮಂಚದ ಮೇಲೆ ಕುಳಿತು ಖಿ.... ಖಿ.... ಖಿ..... ಎಂದು ನಗಬೇಕಾದರೆ, ಇನ್ನೇನು ಉಳಿಯಿತು, ಮುಳುಗುವುದಕ್ಕೆ?" ಎಂದೆಲ್ಲಾ ಚಿಂತಿಸಿದಳು.

ಅದೆಷ್ಟು ಹೊತ್ತಿನವರೆಗೆ ಹೀಗೆ ಚಿಂತಿಸುತ್ತಿದ್ದಳೋ ಕಾಣೆ. ಅದರಲ್ಲಿಯೇ ರಾತ್ರಿಯ ಬಹು ಭಾಗ ಕಳೆದಿತ್ತು. ನಿದ್ರೆಯ ಜೊಂಪು ಬಂದಾಗ ವಿಚಾರಗಳೆಲ್ಲ ಕನಸಿನ ರೂಪುತಳೆದವು. ಲಲಿತಾ ತನ್ನ ಮನೆಯಂಗಳದಲ್ಲಿ ನಿಂತಂತಿತ್ತು. ನೋಡುತ್ತಿದ್ದಂತೆಯೇ ಹಿಂಬದಿಯ ಬಾಗಿಲಿನಿಂದ ಯಾವುದೋ ಕಪ್ಪು ಛಾಯೆ ಒಳಗೆ ಬಂದು ಮುಸುಕು ಧರಿಸಿದ ಸ್ತ್ರೀ ರೂಪವಾಗಿ, ತನ್ನ ಭಯಾನಕ ಕರಗಳಿಂದ ಕತ್ತು ಹಿಸುಕಿದಂತಾಯಿತು, ಅವಳಿಗೆ. ಭಯದಿಂದ ಚೀರಿದಳು. ಆ ಕ್ಯಾರೇಜಿನಲ್ಲಿ ಕುಳಿತ ಸ್ತ್ರೀಯರೆಲ್ಲ ಚಕಿತರಾದರು. ಎದುರಿಗೆ ಕುಳಿತ ವಯಸ್ಸಾದ ಹೆಂಗಸು "ಏಕಮ್ಮಾ ಮೈಯಲ್ಲಿ ಹುಷಾರಿಲ್ಲವೆ?" ಎಂದು ಕೇಳಿದಳು.

"ಹಾಗೇನಿಲ್ಲ ಅಮ್ಮಾ! ಒಂದು ಭಯಂಕರ ಕನಸು ಕಂಡೆ. ಈಗಲೂ ಹೃದಯ ಬಡಕೊಳ್ಳುತ್ತಿದೆ," ಎಂದು ನಾಚುತ್ತಲೇ ಹೇಳಿದಳು ಲಲಿತಾ.

ಆವಳು ಲಲಿತೆಯ ಪಕ್ಕಕ್ಕೆ ಸರಿದು, ತನ್ನ ಸೆರಗಿನಲ್ಲಿ ಕಟ್ಟಿದ್ದ ಯಂತ್ರ ಒಂದನ್ನು ತೆಗೆದು, "ನೀನು ಬಹಳ ಭಯಪಟ್ಟುಕೊಂಡವಳಂತೆ ಕಾಣುತ್ತೀಯೆ. ಇಕೋ, ಇದನ್ನು ತೆಗೆದುಕೋ. ದೊಡ್ಡವರು ಕೊಟ್ಟದ್ದು. ಬಲಗೈ ತೋಳಿಗೆ ಕಟ್ಟಿಕೋ. ದೇವರನ್ನು ಧ್ಯಾನ ಮಾಡು. ಭಯ ದೂರವಾಗುತ್ತದೆ. ಏನೂ ಚಿಂತಿಸಬೇಡ," ಎಂದಳು. ಯಂತ್ರವನ್ನು ಕೈಯಲ್ಲಿ ತೆಗೆದುಕೊಂಡಿದ್ದರೂ ಭಯಭರಿತ ಲಲಿತೆ ದೇವರ ನಾಮವನ್ನು ಬಿಟ್ಟು, "ಹಾ! ಮುಸುಕಿನ ಮರೆಯ ರಾಕ್ಷಸಿ! ಮುಸುಕಿನ ಮರೆಯ ರಾಕ್ಷಸಿ!! ನನ್ನನ್ನು ಹಾಳು ಮಾಡಿದೆ. ನಿನ್ನ ಮನೆ ಹಾಳಾಗ! ಪಿಶಾಚಿ!!" ಎಂದು ಒಟಗುಟ್ಟಿದಳು.

ಲಲಿತಾ ಇಳಿಯುವ ಸ್ಟೇಶನ್ ಬಂತು. ರೈಲು ಇಳಿಯುವ ಮುನ್ನ ತನಗೆ ಸಹಾನುಭೂತಿಯನ್ನು

ಎರಡು ರೀತಿಯಿಂದ ಬೆಳಕು ಬೀರಬಹುದು.
ಒಂದು- ಮೋಂಬತ್ತಿಯಾಗಿ; ಇನ್ನೊಂದು-
ಅದನ್ನು ಪ್ರತಿಫಲಿಸುವ ಕನ್ನಡಿಯಾಗಿ.
ಈ ಎರಡರ ಪೈಕಿ ಯಾವುದಾಗಬೇಕು ಎಂಬುದು
ನಿಮನಿಮಗೆ ಬಿಟ್ಟ ವಿಚಾರ.
-ಎಡಿತ್ ವಾರ್ಟನ್

ತೋರಿದ ಸಂಗಾತಿಯನ್ನು ಇನ್ನೆಂದೂ ಕಾಣುವುದೇ ಇಲ್ಲವೇನೋ ಎಂಬಂತೆ ನೋಡಿದಳು. ಲಲಿತೆಯನ್ನು ಕಂಡು ಅನುಕಂಪಿತಳಾದ ಅವಳ ಜೊತೆಗಾರ್ತಿ ಆಗಲೂ ಇನ್ನಷ್ಟು ಧೈರ್ಯದ ಮಾತುಗಳನ್ನು ಹೇಳಿದಳು. ಲಲಿತೆಗೆ ಅದರಿಂದಾಗಿ ಸ್ವಲ್ಪ ಧೈರ್ಯಬಂದಂತಾಯಿತು.

ನಿಂತಲ್ಲಿಯೇ ಅವಳು ಮನೆಯಲ್ಲಿ ಕಾಲಿಡುತ್ತಲೂ ಯಾವ ಮಂತ್ರವನ್ನು ಜಪಿಸಬೇಕು, ಯಾವ ದೇವರನ್ನು ನೆನೆಯಬೇಕು ಎಂಬುದನ್ನು ಯೋಚಿಸಿಕೊಂಡಳು. ಗೇಟು ಕಾಣುತ್ತಲೂ ಮೊದಲು ದೇವರ ಹೆಸರು ಜಪಿಸುವುದು. ಒಳಗೆ ಕಾಲಿಡುತ್ತಲೂ ಎರಡನೆಯ ಸಲ, ಮನೆಯ ಜಗುಲಿ ಹತ್ತುತ್ತಲೂ ನಾಲ್ಕನೇ ಸಲ, ಹೀಗೇ ದೇವರ ಸ್ಮರಣೆ ಮಾಡುವುದರಿಂದಲೂ, ತನ್ನ ಕೈಯಲ್ಲಿರುವ ತಾಯತ-ಯಂತ್ರ ಬಲದಿಂದಲೂ, ಆ ಮುಸುಕಿನ ಮರೆಯ ರಾಕ್ಷಸಿಯನ್ನು ತನ್ನ ಹಿಡಿತಕ್ಕೆ ತೆಗೆದುಕೊಂಡು, ಚೆನ್ನಾಗಿ ಜಡೆಹಿಡಿದು ಥಳಿಸಿ, ಕತ್ತು ಹಿಡಿದು ಹೊರಗೆ ನೂಕಬಹುದೆಂದು ಎಣಿಸಿದಳು.

ಲಲಿತಾ ವಿಚಾರಮಗ್ನಳಾಗಿರುವುದನ್ನು ಕಂಡು, ಎದುರಿನವಳು, "ನಿಮ್ಮೂರಲ್ಲಿ ನನ್ನ ಮಗಳೂ ಇದ್ದಾಳೆ. ಮೊನ್ನೆ ಮೊನ್ನೆ ಅವಳ ಮದುವೆಯಾಗಿದೆ. ನಾನು ತಿರುಗಿ ಊರಿಗೆ ಹೋಗುವಾಗ ಅವಳನ್ನು ಕಾಣಲು ಬರುವೆ. ಆಗ ನಿನ್ನನ್ನೂ ನೋಡುವೆ," ಎಂದಳು.

ಲಲಿತಾಳ ಮೈ ಒಮ್ಮೆಲೆ ಜುಮ್ಮೆಂದಿತು. ಒಂದು ಕ್ಷಣ ಇಳಿಯುವುದನ್ನು ಮರೆತು ತನ್ನ ಪೆಟ್ಟಿಗೆಯ ಬಳಿ ಕುಳಿತು, "ಆ ನಿಮ್ಮ ಮಗಳು

ಶ್ರೀರಾಮಪುರದಲ್ಲಿ ಇರುವುದಿಲ್ಲ ತಾನೆ?" ಎಂದು ಕೇಳಿದಳು.

"ಮೊದಲು ಕೃಷ್ಣಮೂರ್ತಿಪುರಂದಲ್ಲಿ ಇರುತ್ತಿದ್ದರು. ಈಗ ಮನೆ ಬದಲಾಯಿಸಿದ್ದಾರೆ. ಯಾವ ಓಣಿಯಲ್ಲಿರುತ್ತಾರೋ? ಅದು ನನ್ನ ಮಗನಿಗೆ ಗೊತ್ತು."

"ನಿಮ್ಮ ಅಳಿಯ ಯಾವ ಆಫೀಸಿನಲ್ಲಿ ಕೆಲಸ ಮಾಡುತ್ತಾರೆ ಅಮ್ಮಾ?"

"ಅದು ಯಾವುದೋ ಪರಂಗಿ ಹೆಸರಿದೆ, ಅವರ ಆಫೀಸಿಗೆ. ಅದನ್ನು ಅನ್ನೋದಕ್ಕೆ ನಾಲಿಗೆ ಕೂಡ ಹೊರಳುವುದಿಲ್ಲ. ಇನ್ನೇನು ನನಗೂ ವಯಸ್ಸಾಯಿತು. ಇನ್ನೆಲ್ಲಿ ಈ ಟಿಸ್ ಪಿಸ್ ಹೆಸರು ಘಟ್ಟ ಮಾಡುತ್ತ ಕೂಡಲಿ? ಒಳ್ಳೇದು ಮಗು! ನೀನು ಇನ್ನು ಇಳಿದು ಬಿಡು. ರೈಲು ಹೊರಟರೆ ಅದೊಂದು ಬೇರೆ ಕಷ್ಟ.... ಅದ್ಯಾಕೆ ನಿನ್ನನ್ನು ಕರೆದುಕೊಂಡು ಹೋಗಲು ಯಾರೂ ಬಂದಿಲ್ವಾ ಇನ್ನೂ?"

ಲಲಿತಾ ತನ್ನ ವಿಳಾಸ ಅವಳಿಗೆ ಹೇಳಿ ರೈಲಿನಿಂದ ಇಳಿದಳು. ಪ್ಲಾಟ್‌ಫಾರ್ಮಿನ ಮೇಲೆ ಎಲ್ಲರೂ ಅಪರಿಚಿತರೇ. ಅತ್ತಿತ್ತ ಒಂದು ಕ್ಷಣ ನೋಡಿದಳು. ಸಾಮಾನುಗಳನ್ನು ಕೂಲಿಯವನ ಕೈಗಿತ್ತು ಹಿಂಬಾಲಿಸಿದಳು.

ಮನೆಯ ಬಾಗಿಲಿಗೆ ತಲುಪುತ್ತಲೇ ಮತ್ತೊಮ್ಮೆ ಅವಳ ಹೃದಯ ಕಂಪಿಸಿತು. ಭಯ ಆವರಿಸಿದ್ದರ ಪರಿಣಾಮವಾಗಿ ಮಾಡಿದ್ದ ಯೋಜನೆ ಹಿಂದೆಯೇ ಉಳಿಯಿತು. ಬಾಯಲ್ಲಿ ದೇವರ ನಾಮದ ಉಚ್ಚಾರಣೆಯೂ ಬರಲಿಲ್ಲ. ಬಾಗಿಲು ತೆರೆಯುತ್ತಲೂ ಗಹಗಹಿಸಿ ನಗುವ ನಗೆ ಕೇಳಿ ಬಂತು. "ಇದು ಖಂಡಿತಕ್ಕೂ ಆ ಪಿಶಾಚಿಯ ನಗುವೇ" ಎಂದುಕೊಂಡಳು ಲಲಿತಾ ಒಳಗೆ ಕಾಲಿಡುತ್ತಲೂ ಅವಳ ಗಂಡ ಆಶ್ಚರ್ಯಭರಿತನಾಗಿ "ಓಹೋ! ಏನು ಲಲಿತಾ, ಬರುವ ವಿಷಯವನ್ನಾದರೂ ತಿಳಿಸಬಾರದೆ? ಒಂದು ತಂತಿಯನ್ನಾದರೂ ಕಳಿಸಿದ್ದರೆ ಆಗುತ್ತಿತ್ತು..... ಏನು ಒಬ್ಬಳೇ ಬಂದೆಯಾ!" ಎಂದು ಪಟಪಟನೆ ಕೇಳಿದ.

ಲಲಿತಾ ಉತ್ತರವನ್ನೇ ಕೊಡಲಿಲ್ಲ. ಅವಳ ದೃಷ್ಟಿ ಮಂಚವೇರಿ ಕುಳಿತಿರುವವಳ ಮೇಲೆಯೆ ಇತ್ತು. ಅವಳು ಲಲಿತೆಯನ್ನು ಕಂಡೊಡನೆ ಮುಸುಕನ್ನು ಇನ್ನೂ ಹೆಚ್ಚು ಎಳೆದುಕೊಂಡು ಸೀರೆಯನ್ನು ಇನ್ನೂ ಮುದುಡಿಕೊಂಡು ಮಂಚದ ತುದಿಯಲ್ಲಿ ಕುಳಿತಳು. ಆದರೂ ಅವಳುಟ್ಟಿದ್ದ ಸೀರೆ ಸ್ಪಷ್ಟವಾಗಿ ಲಲಿತೆಗೆ ಕಾಣುತ್ತಿತ್ತು. ತನ್ನ ಸೀರೆಯೇ ಅದು ಎಂದು ಅವಳಿಗೆ ತಿಳಿದುಕೊಳ್ಳಲು ಹೆಚ್ಚು ಸಮಯ ಹಿಡಿಯಲಿಲ್ಲ. ಅದನ್ನು ಹಬ್ಬದ ಉಡುಗೊರೆಯೆಂದು ತನಗೆ ತಾಯಿ ಪ್ರೀತಿಯಿಂದ ಕೊಡಿಸಿದ್ದರು. ಅದಕ್ಕೇ ಲಲಿತಾ ಕಿಡಿಕಿಡಿಯಾದದ್ದು. ಅವಳ ಗಂಡ ಮುಗುಳು ನಗುತ್ತ, "ಲಲಿತಾ? ನಿನ್ನ ಮೈಯಲ್ಲಿ ಹುಷಾರಿಲ್ಲವೆ? ಏಕೆ, ಡಾಕ್ಟರರನ್ನು ಕರೆಸಲಾ?" ಎಂದ ತುಂಟತನದಿಂದ.

"ಬೇಡಿ, ಸದ್ಯ ವಿಷ ತಂದುಕೊಡಿ ಕುಡಿದು ಪ್ರಾಣ ಬಿಡುತ್ತೇನೆ," ಆಕ್ರಸದಿಂದ ನುಡಿದಳು ಲಲಿತಾ, "ನಾಲ್ಕು ದಿವಸ ಊರಿಗೆ ಹೋದರೆ ಇಷ್ಟು ಅನಾಹುತ ಮಾಡಿಬಿಡುವದೆ? ನನಗೆ ಸುಧಾ ಎಲ್ಲಾ ತಿಳಿಸಿದ್ದಾಳೆ."

"ಏನು? ಏನು? ಏನು ಅನ್ನುತ್ತಿರುವಿ ಲಲಿತಾ?" ಗಂಭೀರವಾಗುತ್ತ ಎದ್ದು ಅವಳ ಗಂಡ ತಿರುಗಿ ಮಂಚದ ಮೇಲೆ ಕುಳಿತವಳ ಕಡೆ ತೋರಿಸುತ್ತ, "ಓಹೋ! ನಿನ್ನ ಲಕ್ಷ್ಯ ಇವಳ ಕಡೆಗೆ ಇದ್ದಂತಿದೆ. ತಾಳು ಪರಿಚಯ ಮಾಡಿಸುತ್ತೇನೆ,' ಎಂದವನು, ಮುಸುಕು ಎಳೆದು ಕುಳಿತವಳಿಗೆ, "ಅರೇ! ನೀನೇನೆ ಇಷ್ಟು ದೊಡ್ಡದು ಮುಸುಕು ಎಳೆದುಕೊಂಡಿರುವಿ ಮುಖದ ಮೇಲೆ? ಲಲಿತಯನ್ನು ಬೇರೆ ಗಂಡಸರೆಂದು ತಿಳಿದುಕೊಂಡಿರುವಿಯೋ ಹೇಗೆ? ಹಾಂ! ನೋಡು ಈಗ. ನಾನು ಹೇಳಿರಲಿಲ್ಲವೆ ನಿನಗೆ? ಜೀವನ ನನ್ನ ಪಾಲಿಗೆ ನಗುವ ನಂದನವನ, ಲಲಿತೆ ಅದರಲ್ಲಿ ವಿಹರಿಸುವ ಜೊತೆಗಾರ್ತಿ. ಈಗ ನೀನೇ ಹೇಳು, ಯಾರಿಗೆ ಇಂಥ ಸಂಗಾತಿ ಸಿಗುವಳೋ ಅವನ ಜೀವನ ಭವ್ಯವಾಗದೇ ಇನ್ನೇನು?" ಎಂದನು. ಲಲಿತೆಯ ಕಡೆಗೆ ತಿರುಗಿ, "ಇಕೋ ಲಲಿತಾ! ಇವಳು ನನ್ನನ್ನು ಮೊದಲಿನಿಂದ ಬಲ್ಲವಳು. ಚಿಕ್ಕಂದಿನಿಂದಲೂ ಕೂಡಿ ಆಡಿದವಳು. ಇವಳಲ್ಲಿ ಮುಖ್ಯ ಗುಣವೆಂ

ದರ ಹೊತ್ತು ಗೊತ್ತುಗಳಿಲ್ಲದೆ ನಗುತ್ತ ಒಳಗೇ ಬಂದು ಬಿಡುವುದು."

"ಹೌದು ಈ ರಾಕ್ಷಸಿಯ ನಗುವೇ ನಿಮ್ಮನ್ನು ಅಡ್ಡದಾರಿಗೆ ಕೆಡವಿದ್ದು," ಎಂದು ಆಕ್ಕಸದಿಂದ ಮುಸುಕಿನವಳನ್ನು ದುರುಗುಟ್ಟಿದಳು ಲಲಿತಾ.

ಮಂಚದ ಮೇಲೆ ಕುಳಿತವಳ ಮುಖ ಕಾಣ ದಿದ್ದರೂ ಅವಳ ದೇಹದಾದ್ಯಂತ ನಗೆಯ ಅಲೆ ಗಳು ಏಳುತ್ತಿರುವುದನ್ನು ಯಾರೂ ಗುರುತಿಸಬಹು ದಿತ್ತು. ಮತ್ತು ನಗೆಯನ್ನು ಒತ್ತಾಯದಿಂದ ತಡೆ ಯುತ್ತಿರುವಳೆಂಬುದೂ ಚೆನ್ನಾಗಿ ಗೊತ್ತಾಗುತ್ತಿತ್ತು. ಮುಸುಕಿನ ಮರೆಯಲ್ಲಿರುವವಳ ದೇಹದ ಮಾಟ ವನ್ನು ಕಂಡು ಲಲಿತೆಗೆ ಅವಳು ತನ್ನ ಸಮವಯ ಸ್ಕಿನವಳೆಂಬುದು ದೃಢವಾಯಿತು.

ಅವಳ ಗಂಡ ಉತ್ತರವನ್ನೇ ಕೊಡಲಿಲ್ಲ. ಇದರಿಂದಾಗಿ ಲಲಿತಾ ಇನ್ನೂ ರೊಚ್ಚಿಗೆದ್ದಳು. ಮುಖವೆಲ್ಲ ಕೋಪದಿಂದ ಉರಿಯುವಂತಾ ಯಿತು. ಅವಳು, "ಪಿಶಾಚಿ! ರಾಕ್ಷಸಿ!! ನೀನು ಎಲ್ಲಿಂದ ಬಂದೆ?" ಎಂದವಳೇ ಆ ಮಂಚದೆ ಡೆಗೆ ಧಾವಿಸಿದಳು.

"ಅರೆ! ಅರೆ!! ಏನು ಮಾಡುತ್ತೀ ಲಲಿತಾ?" ಗಂಡ ಅವಳನ್ನು ತಡೆಯುತ್ತಾ ಹೇಳಿದ, "ಇದೀಗ ನೀನು ಎಷ್ಟು ಒಳ್ಳೆಯವಳೆಂದು ಬಾಯಿತುಂಬ ನಿನ್ನನ್ನು ಇವಳೆದುರು ಹೊಗಳಿರುವೆ. ಆದರೆ ನೀನು ನೋಡಿದರೆ, ಹೀಗೆ ಒರಟಾಗಿ ವರ್ತಿಸುತ್ತಿ ದ್ದೀಯೆ?"

"ಆಹಾ! ಹೊಗಳುತ್ತಾರಂತೆ ಹೊಗಳುತ್ತಾರೆ! ಇದನ್ನೆಲ್ಲ ನನ್ನ ಕಣ್ಣು ನೋಡುವುದಕ್ಕೆ ಮೊದಲೇ ನನ್ನನ್ನು ಕೆರೆಗೋ ಬಾವಿಗೋ ತಳ್ಳಿದರೆ ಆಗು ತ್ತಿತ್ತು," ಎನ್ನುತ್ತ ಗಂಡನ ಹಿಡಿತದಿಂದ ಬಿಡಿಸಿ ಕೊಂಡು ಮಂಚದ ಮೇಲೆ ಕುಳಿತವಳೆಡೆಗೆ ಧಾವಿಸಿದಳು. ಈ ಸಲ ಲಲಿತೆಯ ಕೈ ಅವಳ ಮುಸುಕನ್ನು ಬಿಗಿಯಾಗಿ ಹಿಡಿದಿತ್ತು. ಶಕ್ತಿಯನ್ನೆಲ್ಲ ಹಾಕಿ ಮುಸುಕನ್ನು ಕಿತ್ತಿದಳು. ಚರ್ ಎಂದು ಹರಿದು ಹೋಯಿತು ಬುರ್ಖಾ.

ನಗೆಯ ಹೊನಲೇ ಹರಿಯಿತು ಅಲ್ಲಿ. ಮುಸು ಕಿನಿಂದ ಹೊರಬಿದ್ದ ಸುಧಾ ಬಿದ್ದು ಬಿದ್ದು ನಗುತ್ತಾ "ಎಪ್ರಿಲ್ ಫೂಲ್! ಅತ್ತಿಗೆ.... ಎಪ್ರಿಲ್ ಫೂಲ್!" ಎಂದು ಕಿರುಚಿಕೊಂಡಳು.

ಸುಸ್ತು ಹೊಡೆದ ಲಲಿತಾ ಬಳಲಿದವಳಂತೆ ಮಂಚದ ಮೇಲೆ ಕೂಡುತ್ತ ಎದುರಿಗಿರುವ ಕ್ಯಾಲೆಂಡರ್ ಕಡೆಗೆ ನೋಡಿದಳು. ಎಪ್ರಿಲ್ ತಿಂಗ ಳಿನ ಮೊದಲ ದಿನ ಅಣಕಿಸುತ್ತಿತ್ತು. ●



## ಸ್ವಲ್ಪ ಸ್ವಲ್ಪ....

ಆತ ಬಾರ್ ಒಳಹೊಕ್ಕ. ಸ್ವಲ್ಪವೆ ಕುಡಿದರಾಯಿತು ಎಂಬ ಸಂಕಲ್ಪದಿಂದಲೇ ಕುಳಿತುಕೊಂಡ. ಹೌದು, ಆತ ಬೇರರ್‌ಗೆ ಹೇಳಿದ್ದು ಸ್ವಲ್ಪವೆ ವಿಸ್ಕಿ.

ಅದನ್ನು ಗುಟುಕರಿಸಿದ ನಂತರ ತಾನು ಕುಡಿದದ್ದಕ್ಕಿಂತ ಸ್ವಲ್ಪ ಜಾಸ್ತಿ ಆರ್ಡರ್ ಮಾಡಿದ.

ಹೀಗೆ ಪ್ರತಿ ಬಾರಿಯೂ ತಾನು ಹೊಟ್ಟೆಗಿಳಿಸಿಕೊಂಡದ್ದರ ದುಪ್ಪಟ್ಟು ದ್ರವ ಬಯಸುತ್ತಲೇ ಹೋದ.

ಕೊನೆಗೆ ಪೂರ್ತಿ ಬಾಟಲಿಗೇ ಆರ್ಡರ್ ಮಾಡುತ್ತಾನೆಂದುಕೊಂಡ ಬೇರರ್, "ಇಲ್ಲ, ಈ ಕಂಪನಿಯ ವಿಸ್ಕಿ ಮುಗಿದು ಹೋಯಿತು," ಎಂದ.

"ಆಂ ಏನು? ನಾನಿನ್ನೂ ಕುಡಿಯೋಕೇ ಶುರು ಮಾಡಿಲ್ಲ. ಅಂಥದ್ರಲ್ಲಿ ಮುಗಿದುಹೋಯಿತು ಅಂತ ಹೇಳೋಕೆ ನಿನಗೆಷ್ಟೋ ಧೈರ್ಯ?" ಎಂದು ಆತ ಬೇರರ್‌ನ ಕಾಲರ್ ಹಿಡಿದು ಹೊಡೆದಾಟಕ್ಕೆ ನಿಂತ.

# ನೆನಪು ನೆರಳಿನಲ್ಲಿ

ನಾನು ಧಾರವಾಡದ ಮುಖ್ಯ ಅಂಚೆ ಕಚೇರಿಯಲ್ಲಿ ನೌಕರಿಗೆ ಸೇರಿ ಒಂದು ವರ್ಷವಾಗಿತ್ತು ಹಾಗೊಂದು ದಿನ ಶನಿವಾರ ಕೆಲಸದಲ್ಲಿದ್ದೆ. ಕೌಂಟರ್‌ನಲ್ಲಿ ಗ್ರಾಹಕರಾರೂ ಇರಲಿಲ್ಲ. ಸಹೋದ್ಯೋಗಿಗಳಿಗೆ ಹೇಳಿ, ಎದುರಿನ ಹೊಟೇಲಿಗೆ ಹೊರಟೆ.

ನಾನು ಮುಖ್ಯ ಬಾಗಿಲು ದಾಟಿ ಹೊರಬರುವುದಕ್ಕೂ ಅಲ್ಲಿಬಿದ್ದ ಐದುರೂಪಾಯಿಯ ನೋಟನ್ನು ನೋಡುವುದಕ್ಕೂ ಸರಿ ಹೋಯಿತು. ಅತ್ತ ಇತ್ತ ನೋಡಿದೆ. ಯಾರೂ ಇರಲಿಲ್ಲ. ಏನು ಮಾಡುವದು ಎನ್ನುವುದು ತಿಳಿಯದೇ ಹೋಯಿತು. ಆದರೂ ಅನುಮಾನಿಸುತ್ತಾ ಬಾಗಿ ಆ ನೋಟನ್ನು ಹೂವಿನಂತೆ ಎತ್ತಿ ನನ್ನ ಪಾಕೀಟಿನ ಹಿಂದಿನ ಭಾಗದಲ್ಲಿ ಇಟ್ಟು ಮುಂದೆ ಹೊರಟೆ. ಏನೋ ಒಂದು ರೀತಿಯ ಆನಂದ, ಮತ್ತೊಂದು ರೀತಿಯಲ್ಲಿ ಆತುರ. ಹಾಗೇ ಮುಂದೆ ಸಾಗಿ ರೆಸ್ಟೋರೆಂಟಿಗೆ ಹೋದೆ.

ಏನೇನೋ ಚಪಲ ಇರಿಸಿಕೊಂಡು ಹೊರಟವನು ಅಲ್ಲಿಗೆ ಹೋಗುವಷ್ಟರಲ್ಲೇ ತಣ್ಣಗಾಗಿದ್ದೆ. "ಏನು ಕೊಡಲಿ?" ಎಂದು ಮಾಣಿ ಕೇಳಿದಾಗ "ಒಂದು ಚಹಾ" ಎಂದು ಹೇಳಿದೆ. ಅವನು ಚಹ ತಂದು ಇತ್ತಾಗ ಕುಡಿಯುವಾಗಲೂ ಒಂದು ರೀತಿ ಥರ, ಥರ. ಹಾಗೂ ಹೀಗೂ ಚಹ ಕುಡಿದು ವಾಪಸು ಬಂದೆ. ಮತ್ತೆ ಕೌಂಟರಿನಲ್ಲಿ ಯಾರಿಲ್ಲ. ನಮ್ಮ ಸ್ನೇಹಿತರಿಗೆ ಸೂಕ್ಷ್ಮವಾಗಿ ಈ ವಿಷಯ ತಿಳಿಸಿದೆ. "ಸುಮ್ಮನೆ, ಇಟ್ಟುಕೊಂಡು ಬಿಡು" ಎಂದು ಒಬ್ಬರು ಹೇಳಿದರೆ, "ಸಿನೇಮಾ, ಟಫಿನ್ ಕೂಡಿಯೇ ಆಗುತ್ತದೆ. ಸಾಯಂಕಾಲ ಹೋಗೋಣ," ಎಂದು ಇನ್ನೊಬ್ಬರೆಂದರು. ಅದೇಕೋ ಹಾಗೆ ಮಾಡಲು ನನ್ನ ಮನಸ್ಸು ಒಪ್ಪಲಿಲ್ಲ.

ಅಂತೂ ಅಂದಿನ ಕೆಲಸ ಮುಗಿಸಿ ರೂಮಿಗೆ ಬಂದೆ. ಮರುದಿವಸ ರವಿವಾರ. ನನಗೆ ದುಗುಡ ಉಳಿದೇ ಇತ್ತು. ಸೋಮವಾರವೂ ಹಾಗೇ ಕಳೆಯಿತು. ನನ್ನ ಚಿಲ್ಲರೆ ಖರ್ಚಿಗಾಗಿ ಆ ನೋಟಿದ್ದ ಕಡೆ ನೋಡುವ ಮನಸ್ಸೇ ಆಗಲಿಲ್ಲ. ಮಂಗಳವಾರ ಬೆಳಿಗ್ಗೆ ನಲ್ಲಿಯ ನೀರಿಗಾಗಿ ಬಕೀಟು ತೆಗೆದುಕೊಂಡು ಹೋದೆ. ವಯಸ್ಸಾದ ಸುಶಿಕ್ಷಿತ ಮಹಿಳೆಯೊಬ್ಬರು ಅಲ್ಲೇ ನೀರಿಗೆ ಬಂದಿದ್ದರು. ಅವರನ್ನು ನೋಡಿದಾಕ್ಷಣ ಅವರನ್ನು ಶನಿವಾರ ನಮ್ಮ ಆಫೀಸಿನಲ್ಲೇ ನೋಡಿದ್ದ ಜ್ಞಾಪಕ ಬಂತು.

"ನೀವು ಮೊನ್ನೆ ಶನಿವಾರ ನಮ್ಮ ಪೋಸ್ಟ್ ಆಫೀಸಿಗೆ ಬಂದಿದ್ದಿರಾ?" ಎಂದು ಕೇಳಿದೆ.

"ಹೌದು, ಬಂದಿದ್ದೆ," ಎಂದಷ್ಟೇ ಹೇಳಿದರು.

"ಯಾಕೆ ಬಂದಿದ್ದಿರಿ?"

"ಮನಿಆರ್ಡರ್ ಮಾಡುವದಕ್ಕೆ."

"ಮನಿಆರ್ಡರ್ ಮಾಡಿದಿರಾ?" ನನ್ನದು ಇನ್ನೊಂದು ಪ್ರಶ್ನೆ.

"ಇಲ್ಲ."

"ಯಾಕೆ?"

"ಮನಿಆರ್ಡರ್ ಮಾಡಬೇಕೆಂದು ಫಾರ್ಮ್, ಹಣ ತಂದಿದ್ದೆ. ಎಲ್ಲೋ ಹಣ ಬಿದ್ದು ಹೋಯಿತು. ಹಾಗೇ ಬಂದೆ."

"ಹಣ ಎಷ್ಟಿತ್ತು?"

"ಆರು ರೂಪಾಯಿ."

"ಅವು ನೋಟುಗಳೇ ಅಥವಾ ಎಲ್ಲ ನಾಣ್ಯಗಳೇ?"

"ಒಂದು ಐದು ರೂಪಾಯಿ ನೋಟು, ಇನ್ನೊಂದು ಒಂದು ರೂಪಾಯಿ ನೋಟು," ಎಂದು ಹೇಳಿದರು.

ಆಗ ನೇರವಾಗಿ ಹೇಳಿದೆ- "ನೀವು ಬಂದದ್ದನ್ನು ಸುಮ್ಮನೆ ನಿಂತು ಹೋದದ್ದನ್ನು ನಾನು ನೋಡಿದ್ದೆ. ಹೊಟೇಲಿಗೆ ಹೋಗಲೆಂದು ಬಾಗಿಲಿಗೆ ಬರುವಷ್ಟರಲ್ಲೇ ಐದು ರೂಪಾಯಿಯ ನೋಟು ಸಿಕ್ಕಿತು. ಹೊರಗೆ ಯಾರೂ ಇರಲಿಲ್ಲ. ಒಂದು ರೂಪಾಯಿ ನೋಟು ಎಲ್ಲೋ ಬಿದ್ದು ಹೋಗಿರಬೇಕು. ಐದರ ನೋಟನ್ನು ನನ್ನ ಪಾಕೀಟಿನಲ್ಲಿ ಇಟ್ಟಿದ್ದೇನೆ. ಈಗ ತಂದು ಕೊಡುತ್ತೇನೆ. ಸ್ವಲ್ಪ

ತಡೆಯಿರಿ," ಎಂದು ಹೇಳಿ ಬಕೀಟಿನೊಂದಿಗೆ ರೂಮಿಗೆ ಬಂದೆ.

ಪಾಕೀಟನ್ನೇ ಹಿಡಿದು ಅವರಿದ್ದಲ್ಲಿಗೆ ಹೋದೆ. ಪಾಕೀಟು ತೆಗೆದು ನಾಲ್ಕು ದಿನಗಳಿಂದಲೂ 'ಗೃಹ ಬಂಧನದಲ್ಲಿದ್ದ ಮಡಿಚಿದ್ದ ಐದು ರೂಪಾಯಿ ನೋಟನ್ನು ಹಾಗೆಯೇ ಅವರ ಕೈಗಿತ್ತೆ.

"ತುಂಬ ಉಪಕಾರವಾಯ್ತು. ತುಂಬ ಕಾಡಾಟವಾಗಿತ್ತು. ಧರ್ಮಸ್ಥಳಕ್ಕೆ ಕಳಿಸಬೇಕಾಗಿತ್ತು. ಹಣ ಕಳೆದದ್ದರಿಂದ ಬೇಜಾರಾಗಿತ್ತು. ದೇವರು ನಿಮಗೆ ಒಳ್ಳೆಯದು ಮಾಡಲಿ," ಎನ್ನುತ್ತ ಐದು ರೂಪಾಯಿ ನೋಟನ್ನು ಬಿಡಿಸಿ ನೋಡಿದರು. ಒಂದು ರೂಪಾಯಿ ನೋಟು ಕೂಡ ಅಲ್ಲೇ ಅಡಗಿ ಕುಳಿತಿತ್ತು!

• ಬಿ.ಎಲ್. ದೇಶಪಾಂಡೆ

ಇಪ್ಪತ್ತು ವರುಷಗಳ ಹಿಂದಿನ ಕೆಲವು ಘಟನೆಗಳು ಈಗಲೂ ಮೊನ್ನೆ ತಾನೆ ನಡೆದಂತೆ ನೆನಪಿಗೆ ಬರುತ್ತಿರುತ್ತವೆ. ಆಗ ನಾವು ಬೆಂಗಳೂರಿನ "ಆಡುಗೋಡಿ" ಪ್ರದೇಶದಲ್ಲಿ ಒಂದು ಸಣ್ಣ ಬಾಡಿಗೆ ಮನೆಯಲ್ಲಿ ವಾಸವಾಗಿದ್ದೆವು. ಭಾರತ-ಪಾಕಿಸ್ತಾನಗಳ ನಡುವಿನ ಯುದ್ಧದ ಬಿಸಿ ಜೋರಾಗಿಯೇ ತಟ್ಟಿತ್ತು. ಅಕ್ಕಿ ಸಕ್ಕರೆಗಳು ನಮ್ಮ ಕೈಗೆಟುಕುತ್ತಿರಲಿಲ್ಲ, ರಾಗಿ, ಜೋಳಗಳನ್ನು ತಿನ್ನುವ ಅಭ್ಯಾಸ ಆ ಸಂದರ್ಭದಲ್ಲೇ ನಮಗಾಯಿತು.

ನನ್ನ ತಂದೆಯವರು ಸರ್ಕಾರೀ ನೌಕರಿಯಲ್ಲಿದ್ದರೂ ದೊಡ್ಡ ಸಂಸಾರವನ್ನು ನಿರ್ವಹಿಸಲು ಅವರ ಸಂಬಳ ಸಾಕಾಗದೇ ನಾವು ಊಟ, ಬಟ್ಟೆಗೆ ಕೊರತೆ ಅನುಭವಿಸುತ್ತಾ ಇದ್ದೆವು.

ನಾನು ಐದನೇ-ಆರನೇ ತರಗತಿ ಸರ್ಕಾರೀ ಶಾಲೆಯಲ್ಲಿ ಕಲಿಯುತ್ತಿದ್ದೆ. ತುಂಬಾ ತುಂಟತನ ಹಟಮಾರಿತನ ಮಾಡುತ್ತಿದ್ದೆ. ಚೆನ್ನಾಗಿ ತಿನ್ನುತ್ತಿದ್ದೆ. ಹಸಿವು ತಡೆಯುತ್ತಿರಲಿಲ್ಲ, ಒಂದು ದಿನ ರಾತ್ರಿ ನನಗೆ ತಿನ್ನಲು ಆಹಾರ ಸಾಕಾಗಲಿಲ್ಲ, ಹಟಮಾಡಿ ಅಮ್ಮನಿಂದ ಪೆಟ್ಟು ತಿಂದು, ಅಳುತ್ತಾ ನಿದ್ದೆ ಮಾಡಿದ್ದೆ. ತಿಂಗಳಿಗೊಮ್ಮೆ ಪರಸ್ಥಳದಿಂದ ಬಂದು ಹೋಗುತ್ತಿದ್ದ ನನ್ನ ತಂದೆಯವರು ಅದೇ ದಿನ ರಾತ್ರಿ ಆಗಮಿಸಿ, ನನ್ನ ಬಗ್ಗೆ ಕೇಳಿ ತಿಳಿದು ಬೇಸರಪಟ್ಟು, ಆಗಲೆ ಅಂಗಡಿಯಿಂದ ಬ್ರೆಡ್ಡು, ನಿಂಬೆ ಉಪ್ಪಿನಕಾಯಿಯ ಪ್ಯಾಕೆಟ್ ತಂದು ನನ್ನನ್ನು ನಿದ್ದೆಯಿಂದ ಎಬ್ಬಿಸಿದರು. ನಾನು ಅಂದು ತುಂಬಾ ಹಸಿದಿದ್ದು ತಿಂದ ಆ ಬ್ರೆಡ್ಡು- ಉಪ್ಪಿನ ಕಾಯಿಯ ರುಚಿ ಮರೆಯಲಾಗದ್ದು.

ಆ ಸಮಯದಲ್ಲೇ ಮಡಿವಾಳ ರಸ್ತೆಯಲ್ಲಿನ ಶ್ರೀಮುನೇಶ್ವರ ದೇವಸ್ಥಾನದ ಸಮೀಪ ಬಡವರಿಗೆ ಪ್ರತಿದಿನ ಅರ್ಧ ಪೌಂಡ್ ಬ್ರೆಡ್ಡು, ಅರ್ಧಲೀಟರ್ ಹಾಲು ಕೊಡುತ್ತಾರೆಂದು ತಿಳಿದು ನಾನು ನನ್ನಕ್ಕ-ಪುಟ್ಟತಂಗಿ ಮೂವರೂ ಅಲ್ಲಿಂದ ಬ್ರೆಡ್ಡು, ಹಾಲು ತರುತ್ತಿದ್ದೆವು. ಯಾರೋ ಕ್ರೈಸ್ತರ ಸಂಸ್ಥೆಯವರು ಈ ಸೇವಾಕಾರ್ಯ ನಡೆಸುತ್ತಿದ್ದರೆಂದು ಒಲ್ಲೆವಾದರೂ, ಅವರು ನಮ್ಮ ಅಸಹಾಯಕತೆಯ ದುರುಪಯೋಗ ಮಾಡಿಕೊಳ್ಳಲಿಲ್ಲವೆಂಬುದನ್ನು ಈಗಲೂ ಅವರನ್ನು ಕೃತಜ್ಞತೆಯಿಂದ ನೆನೆಯುತ್ತೇನೆ.

ಇಂದು ಸಾವಿರಾರು ರೂಪಾಯಿ ಸಂಬಳದ ನೌಕರಿಯಲ್ಲಿರುವ ನಾನು ಇಂದಿನ ಸ್ಥಿತಿಗೆ ಬರಲು ಕಾರಣರಾದವರಲ್ಲಿ- ಗಣಿತದಲ್ಲಿ ಚೆನ್ನಾಗಿ ಆಸಕ್ತಿ ಮೂಡಿಸಿದ ಒಬ್ಬ ಮುಸ್ಲಿಂ ಮೇಷ್ಟ್ರು, ಹಿಂದಿಯನ್ನು ಚೆನ್ನಾಗಿ ಕಲಿಸಿದ ಬಣಜಿಗ ಮೇಷ್ಟ್ರು, ಇಂಗ್ಲೀಷನ್ನು ಅರ್ಥವತ್ತಾಗಿ ಕಲಿಸಿದ ಕೇರಳದ ನಾಯರ್, ತಮ್ಮ ಖಾಸಗೀ ಕಾಲೇಜಿಗೆ ಡೊನೇಷನ್ ಪಡೆಯದೇ ನನ್ನನ್ನು ಸೇರಿಸಿಕೊಂಡ ಒಕ್ಕಲಿಗ ಪಂಗಡದ ಹೆಣ್ಣು ಮಗಳು, ನನ್ನ ಫೀಸಿಗೆ ಹಣ ನೀಡಿದ ಶ್ರೇಷ್ಠಿ ಜನಾಂಗದ ಒಬ್ಬರು, ಹೀಗೆ ಎಷ್ಟೆಷ್ಟೋ ಚೇತನಗಳು ಸ್ಮರಣೆಗೆ ಬರುತ್ತಿರುತ್ತಾರೆ. ಹುಟ್ಟಿನಿಂದ ಹೆಮ್ಮೆಪಡುವಂತಹ ಕುಲದವರ ನಡುವೆ ಇದ್ದೂ, ನಾನು ಗಾಂಧೀಜಿ ಅವರ ಬರಹಗಳನ್ನು ಓದಲು, ಸರ್ವೋದಯ, ಸಮಾನತೆ, ಸರ್ವಧರ್ಮ-ಸಮಭಾವ ಮುಂತಾದ ವಿಚಾರಗಳ ಬಗೆಗೆ ಚಿಂತಿಸಲು ನನ್ನ ಬಾಲ್ಯದ ಇಂತಹ ನೆನಪುಗಳೇ ಪರೋಕ್ಷವಾಗಿ ನೆರವಾಗಿರಬಹುದೆಂದು ನನಗನಿಸುತ್ತದೆ.

• 'ನಿಮಿತ್ತ'

# ಭಿಕ್ಷೆ ಬೇಡಿದ 'ರಾಷ್ಟ್ರ ಸುಂದರಿ' ಜೇಲು ಸೇರಿದ 'ವಿಶ್ವ ಸುಂದರಿ'



• ಈಶ್ವರ ಪ್ರಸಾದ್

ರಾಷ್ಟ್ರಸುಂದರಿ, ಲೋಕಸುಂದರಿ, ವಿಶ್ವ ಸುಂದರಿ, ಇವರಿಗೆಲ್ಲ ದೊರೆಯುವ ಮಾನ-ಸಮ್ಮಾನ, ದುಡ್ಡು-ದೌಲತ್ತುಗಳ ಕುರಿತು ಓದಿಯೇ ಇರುತ್ತೀರಿ. ನಮ್ಮ ಸುಶ್ಮಿತಾ ಸೇನ್ ಆಗಲಿ, ಐಶ್ವರ್ಯಾ ರೈ ಆಗಲಿ ಈಗ ದೇಶದ ಹೆಮ್ಮೆ ಎನಿಸಿದ್ದಾರೆ. ಅವರಿಗೆ ದೊರೆತಿರುವ ಬಹು ಮಾನದ ಮೊತ್ತ ಯಾರಿಗಾದರೂ ಅಸೂಯೆ ಹುಟ್ಟಿಸುವಷ್ಟಿದೆ. ಜೀವನವಿಡೀ ಸುಖದ ಸುಪ್ಪತ್ತಿಗೆ ಅವರ ಪಾಲಿಗೆ.

## ಬೀದಿಗೆ ಬಿದ್ದಳು....

ಆದರೆ ರಾಷ್ಟ್ರಸುಂದರಿಯೊಬ್ಬಳು ಬೀದಿ ಬೀದಿ ಅಲೆದು ಭಿಕ್ಷೆ ಬೇಡಿ ಹೊಟ್ಟೆ ತುಂಬಿಕೊಳ್ಳಬೇಕಾದ ದಾರುಣ ಪ್ರಸಂಗ ಲಂಡನ್ನಿನಲ್ಲಿ ನಡೆದದ್ದು ಈಗ ಮರೆತುಹೋದ ಕಥೆ.

'ಮಿಸ್ ಲಂಡನ್' ಎಂದು ಆಯ್ಕೆಗೊಂಡವಳು ಮಿಸ್ ಯೂ.ಬಿ. ಸಾಂತ್ರೆ. ೧೯೩೭ರಲ್ಲಿ ಆಕೆಗೆ "ಇನ್ನು ಮುಂದೆಲ್ಲ ನನಗೆ ಸುಖವೋ ಸುಖ, ಹಣವೋ ಹಣ" ಎಂಬ ಭ್ರಮೆಯುಂಟು ಮಾಡುವಷ್ಟು ಪ್ರಶಂಸೆ-ಪ್ರೀತಿಗಳ ಸುರಿಮಳೆ. ಹೋಟಲೊಂದರಲ್ಲಿ ರಿಸೆಪ್ಷನಿಸ್ಟ್ ಆಗಿದ್ದ ಸಾಂತ್ರೆ 'ಮಿಸ್ ಲಂಡನ್' ಎಂದು ಆಯ್ಕೆಯಾದ ಮೇಲೆ ದೇಶ-ವಿದೇಶಗಳ ಜಾಹೀರಾತು ಕಂಪನಿಗಳು ಮಾಡೆಲ್ ಆಗುವಂತೆ ಕೋರಿ ಆಕೆಗೆ ಭಾರೀ ಮೊತ್ತದ ಗೌರವಧನ ಕೊಡಲು ಮುಂದಾದವು. ಶ್ರೇಷ್ಠ ನಾಟಕ ಕಂಪನಿ ಆಕೆಯನ್ನು ತನ್ನ ಹೊಸ ನಾಟಕಕ್ಕೆ ನಾಯಕಿ ಎಂದು ಆಯ್ಕೆ ಮಾಡಿಕೊಂಡು ಹತ್ತು ವರ್ಷಗಳ ಕಾಂಟ್ರಾಕ್ಟ್ ಮಾಡಿಕೊಳ್ಳಲು ಪ್ರಸ್ತಾಪವಿತ್ತಿತು. ಸಾಂತ್ರೆ ಸಂತಸದ ಶಿಖರವನ್ನೇರಿ ನಿಂತಳು.

ಆದರೆ ವಯಸ್ಸೆಂಬುದೊಂದು ಇದೆಯಲ್ಲ! ಅದು ಸಾಂತ್ರೆಯ ಸಂತಸವನ್ನು ಸಹಿಸಲಿಲ್ಲ. ಕಾಲಕ್ರಮೇಣ ಗಲ್ಲಗಳು ಇಳಿಬಿದ್ದವು. ಕಣ್ಣುಗಳು ಗುಳಿಬಿದ್ದವು. ಅವುಗಳ ಅಡಿಗೆ ಕಪ್ಪು ಆಡರಿತು. ಮುಖ ಹಿಂಡಿದ ಮಾವಿನ ಹಣ್ಣಿನಂತೆ ಗೋಚರಿಸತೊಡಗಿತು. ಜತೆಗೆ ಮೈಕಟ್ಟೂ ಬಿಗಿ ಕಳೆದುಕೊಂಡಿತು. ಇಷ್ಟೇ ಅಲ್ಲ, ಹಣಗಳಿಸುವ ಹುಮ್ಮಸ್ಸಿನಲ್ಲಿ ಅನೇಕ ಪುರುಷರ 'ಸಂಜೆ ಸಂಗಾತಿ'ಯೂ

ಆಗಬೇಕಾಗಿದ್ದರಿಂದ ಸಾಂತ್ರೆಯ ಸ್ವಾಸ್ಥವೂ ಕೆಟ್ಟಿತು. 'ಸೌಂದರ್ಯ ಖನಿ' ಎನಿಸಿದ್ದ ಆಕೆ 'ರೋಗಗಳ ಗಣಿ'ಯಾಗಿಬಿಟ್ಟಳು. ಸಂಚಿತ ಸಂಪತ್ತೆಲ್ಲ ಚಿಕಿತ್ಸೆಗೆಂದು ಸೋರಿ ಹೋಯಿತು.

ಸಾಂತ್ರೆ ತನ್ನ ಕೊನೆಯ ದಿನಗಳಲ್ಲಿ ಲಂಡನ್ನಿನ ಬೀದಿ ಬೀದಿಗಳಲ್ಲಿ ಅಗಳು ಅನ್ನಕ್ಕಾಗಿ ಖಿನ್ನಳಾಗಿ ಕೈಯೊಡ್ಡ ಬೇಕಾಯಿತೆಂಬುದೂ, ಅದೇ ಸ್ಥಿತಿಯಲ್ಲಿ ಬೀದಿ ಹೆಣವಾಗಿ ಹೋಗಬೇಕಾಯಿತೆಂಬುದೂ ದುರಂತ ಸತ್ಯ. ಒಂದು ಸಂದರ್ಭದಲ್ಲಿ ಅವಳ ಮುಖದರ್ಶನಕ್ಕಾಗಿ ಹಾತೊರೆದವರು ಬೀದಿಯಲ್ಲಿ ಆಕೆ ಎದುರಿಗೆ ಬಂದರೂ ಮುಖ ಹೊರಳಿಸಿ ಕೊಂಡು ಹೋಗುತ್ತಿದ್ದರೆಂಬುದು ಇನ್ನೂ ದುಃಖದ ವಿಷಯ.

## ಎಷ್ಟೊಂದು ಗಂಡಂದಿರು!

'ಮಿಸ್ ಆಫ್ರಿಕಾ' ಆಗಿದ್ದವಳದೂ ಅದೇ ಪಾಡು. ಟೆಲಿಫೋನ್ ಆಪರೇಟರ್ ಆಗಿದ್ದ ಆ ಯುವತಿ ಆಫ್ರಿಕಾ ಸುಂದರಿಯಾದ ಮೇಲೆ ದೇಶದ ಕಣ್ಣುಗಳೆಲ್ಲ ಆಕೆಯತ್ತಲೇ ಕೀಲಿದುವು. ಬಹು ಮಾನ-ಬಿಗುಮಾನಗಳಲ್ಲಿ ಓಲಾಡಿದ ಆಕೆಯನ್ನು ಇಂಜಿನಿಯರನೊಬ್ಬ ಮದುವೆಯಾದ. ಆದರೆ ಆತನ ದುರಾದೃಷ್ಟವೋ ಆಕೆಯ ಹಣೆಬರಹವೋ, ಮರುದಿನವೇ ಇಂಜಿನಿಯರ್ ಕೊಲ್ಲಲ್ಪಟ್ಟ. ಈ ಮೊದಲೇ 'ಆಕೆಗಾಗಿ' ಪೈಪೋಟಿ ನಡೆಸಿದ್ದವರಲ್ಲಿ ಒಬ್ಬ ಸಿನಿಮಾ ನಟನೂ ಇದ್ದ. ಇಂಜಿನಿಯರ್‌ನನ್ನು ಮದುವೆಯಾಗುವ ಮೊದಲು ಆಕೆಯನ್ನು ಒಮ್ಮೆ ಆತ ಅಪಹರಿಸಿಯೂ ಬಿಟ್ಟಿದ್ದ. ವೈಧವ್ಯಪ್ರಾಪ್ತವಾದ ಆ ಸಂದರ್ಭದಲ್ಲಿ ಆ ಸಿನಿಮಾ ನಟನೇ ಮುಂದೆ ಬಂದು ಆಕೆಯ ಕೈಹಿಡಿದ. ಆದರೆ ಹೆಂಡತಿಯ ಹಣವೆಲ್ಲವನ್ನೂ ಲಪಟಾಯಿಸುವವರೆಗೆ ಪ್ರೀತಿಯ ನಾಟಕವಾಡಿದ ಆತ ಆಮೇಲೆ ಕೈಕೊಟ್ಟ. ಡಾಕ್ಟರನೊಬ್ಬ ಇದನ್ನೇ ಕಾಯುತ್ತಿದ್ದನೇನೋ ಎಂಬಂತೆ ಕೂಡಲೇ ಸಹಾನುಭೂತಿ ವ್ಯಕ್ತಪಡಿಸಿ ಆಕೆಯನ್ನು ತನ್ನ ಮನೆತುಂಬಿಸಿ ಕೊಂಡ. ಆತನ ಸಂಶಯ ಸ್ವಭಾವದಿಂದ ಬೇಸತ್ತ ಆಫ್ರಿಕಾ ಸುಂದರಿ ಅವನಿಂದ ದೂರವಾಗಿ ಒಬ್ಬ ಬಸ್‌ಕಂಡಕ್ಟರ್‌ನನ್ನೂ ಮುಂದೆ ಕೆಲದಿನಗಳಲ್ಲೇ



## ಲಕ್ಷ್ಮೀ ಕಟಾಕ್ಷ!

'ಮಿಸ್ ಯೂನಿವರ್ಸ್' ಎಂದು ಆಯ್ಕೆಯಾದ ಮೇಲೆ ಭಾರತದ ಸುಷ್ಮಿತಾ ಸೇನ್‌ಗೆ ಪ್ರಶಸ್ತಿಯ ಮೊತ್ತ ೫೦,೦೦೦ ಡಾಲರ್‌ಗಳಲ್ಲದೆ, ಈ ಕೆಳಗೆ ಉಲ್ಲೇಖಿಸಿರುವಂತೆ ಉಡುಗರೆಯ ಮಹಾಪೂರವೇ ಅವಳೆಡೆಗೆ ಹರಿಯಿತು.

೧) ರತ್ನ ಕಿರೀಟ, ಹೆಗಲ ಪಟ್ಟಿ, ಚಿನ್ನದ ಟ್ರೋಫಿ

೨) ಹದಿನೆಂಟು ಕ್ಯಾರೆಟ್ ಚಿನ್ನ ಮತ್ತು ಪ್ಲಾಟಿನಂನಿಂದ ಮಾಡಿದ ಹಸ್ತಾಕ್ಷರವುಳ್ಳ ಬ್ರೋಚ್. ಆರು ಲಕ್ಷ ಬೆಲೆ ಬಾಳುವ ಇದನ್ನು ೧೦೦ ವಜ್ರಗಳಿಂದ ತಯಾರಿಸಿದ್ದಾರೆ.

೩) ಕ್ಯಾಲಿಫೋರ್ನಿಯದ ಲಾಸ್ ಏಂಜಲೀಸ್‌ನಲ್ಲಿ ಉಚಿತವಾದ ಬಂಗಲೆ.

೪) ಅಂತಾರಾಷ್ಟ್ರೀಯ ಮಟ್ಟದ ಅತ್ಯಾಧುನಿಕ ಸ್ಪೋರ್ಟ್ಸ್ ಕಾರು.

೫) ವಿಶ್ವ ಸುಂದರಿಗಾಗಿಯೇ ತಯಾರಿಸಿದ ೧೮ ಕ್ಯಾರೆಟ್ ಚಿನ್ನದ ಕಿರೀಟ ಮತ್ತು ಉಂಗುರ.

೬) ಮಿಸ್ ಯೂನಿವರ್ಸ್ ಇಂಟರ್‌ನ್ಯಾಷನಲ್ ಕಂಪೆನಿಯಲ್ಲಿ ತಿಂಗಳಿಗೆ ೧೬,೫೦,೦೦೦ ರೂ. ಸಂಬಳದ ಮೇಲೆ ಉದ್ಯೋಗ.

ಇವಿಷ್ಟು ಸಾಲದೆಂಬಂತೆ, ಆಟೋ ಫೋಕಸ್ ದುರ್ಬೀನ್ (ದೂರದರ್ಶಕ), ಸೌಂದರ್ಯ ವರ್ಧಕಗಳು, ಆಧುನಿಕ ವಿನ್ಯಾಸದ ಆಭರಣಗಳು, ಬ್ಲಾಕ್ ಗಾಮಾ ಪಿಂಕ್ ಕೋಟ್ ಮತ್ತು ಪಿಂಕ್ ಜಾಕೆಟ್, ವಿಮಾನಯಾನದ ಟಿಕೆಟ್ಟು ಮತ್ತು ೩.೨ ಕ್ಯಾರೆಟ್ ವಜ್ರದ ಆಭರಣಗಳು ಇತ್ಯಾದಿ ಇತ್ಯಾದಿ.

ಸಂಗ್ರಹ: **ಡಿ. ಗುಂಡೂರಾವ್**

ಒಬ್ಬ ಪತ್ರಿಕಾ ಸಂಪಾದಕನನ್ನೂ ಮದುವೆಯಾದಳು. ಈ 'ಅದಲು ಬದಲು ಆಟ'ದಲ್ಲಿ ಆಕೆ ಮಾನಸಿಕ ಸ್ವಾಸ್ಥ್ಯವನ್ನು ಕೆಡಿಸಿಕೊಂಡಳಷ್ಟೇ ಅಲ್ಲ, ಕ್ಷಯದ ಪೀಡೆಯನ್ನೂ ಅನುಭವಿಸಬೇಕಾಯಿತು. ಅದೇ ರೋಗದಿಂದ ಸಾಯುವ ಹೊತ್ತಿನಲ್ಲಿ ಆಕೆಯ ಗಂಡನಾಗಿದ್ದವ ಒಬ್ಬ ಮಾಂಸದ ವ್ಯಾಪಾರಿ. ಕೊನೆಯುಸಿರು ಬಿಡುವ ಮುನ್ನ ಆಕೆ ಹೇಳಿದಳಂತೆ- "ನಾನು 'ಆಫ್ರಿಕಾ ಸುಂದರಿ' ಎಂದು ಆಯ್ಕೆಯಾಗಿರದಿದ್ದರೇ ಚೆನ್ನಾಗಿತ್ತು."

ಓರ್ತೋ ಎಂಬ ಯುವತಿ 'ಮಿಸ್ ಫ್ರಾನ್ಸ್' ಎಂಬ ಗೌರವಕ್ಕೆ ಪಾತ್ರಳಾದಳು. ಸ್ಪರ್ಧೆಯಲ್ಲಿ ಆಕೆಯನ್ನು ನೋಡಿದ ನಿರ್ಣಾಯಕನೊಬ್ಬ ಬೆರಗಾಗಿ ಹಾಗೆಯೇ ಎಚ್ಚರದಪ್ಪಿ ಆಸ್ಪತ್ರೆ ಸೇರಬೇಕಾಯಿತಂತೆ. ಅಂಥ ಅನುಪಮ ಸುಂದರಿ ಆಕೆ. ಗುಣಮುಖನಾದ ಮೇಲೆ ಆತ ಓರ್ತೋಳನ್ನು ನಿತ್ಯವೂ ಕಾಣತೊಡಗಿದ. 'ಇದೆಲ್ಲಿಯ ಕಾಟ'ವೆಂದುಕೊಂಡ ಓರ್ತೋ ಆತನಿಂದ ತನ್ನನ್ನು ರಕ್ಷಿಸಿಕೊಳ್ಳುವ ಹೊಸ ಹೊಸ ಉಪಾಯಗಳನ್ನು ಹುಡುಕತೊಡಗಿದಳು. ಆಕೆಯನ್ನು ಕಾಣದೆ ಹುಚ್ಚನಾದ ಆತ ಕೊನೆಗೊಮ್ಮೆ ಓರ್ತೋಳ ಅಡಿಗೆಯಾಳನ್ನು ತನ್ನ ಬುಟ್ಟಿಗೆ ಹಾಕಿಕೊಂಡ.

ವಿಷ ಬೆರೆತ ಭೋಜನ ಉಂಡು ಓರ್ತೋ ಸತ್ತಳು. ಆಕೆಯ ಕೊಲೆಗೈದ ಅಪರಾಧ ಸಾಬೀತಾಗಿ ಆ ಅಡಿಗೆಯಾಳೂ, ಆ ನಿರ್ಣಾಯಕನೂ ಗಲ್ಲಿಗೇರಿಸಲ್ಪಟ್ಟರು.

## ಗಂಡನನ್ನೇ ಕೊಂದಳು

ಇನ್ನು ೨೫ ವರ್ಷಗಳವರೆಗೆ ಸೆರೆವಾಸ ಅನುಭವಿಸಿದ 'ವಿಶ್ವಸುಂದರಿ'ಯ ಕಥೆ ಕೇಳಿ.

ಆಕೆಯ ಹೆಸರು ಡೊರೊಥಿ. ಆಕೆ ಡಬ್ಲಿನ್, ಪ್ಯಾರಿಸ್ ಮತ್ತು ಬರ್ಲಿನ್‌ಗಳಲ್ಲಿ ಶಿಕ್ಷಣ ಪಡೆದವಳು. ಸ್ನಾತಕ ಪದವಿ ಪಡೆದ ಮೇಲೆ ೧೯೩೭ರಲ್ಲಿ ನಡೆದ ಮೊಟ್ಟ ಮೊದಲ 'ವಿಶ್ವಸುಂದರಿ' ಸ್ಪರ್ಧೆಯಲ್ಲಿ ಡೊರೊಥಿಗೇ ಕಿರೀಟ ಲಭಿಸಿತು. ಮಿಸ್ಟರ್ ಲಕ್ ಎಂಬಾತ ಆಕೆಯನ್ನು ಮದುವೆಯಾದ.

ಸೌಂದರ್ಯದ ಜತೆ ಶುದ್ಧ ಚಾರಿತ್ರ್ಯವುಳ್ಳವಳೂ ಹೌದೆಂಬ ಇಮೇಜು ಪಡೆದಿದ್ದವಳು ಡೊರೊಥಿ. ಒಂದು ದಿನ ಸಮಾಚಾರ ಪತ್ರಿಕೆಯಲ್ಲೊಂದು ಸುದ್ದಿ ಪ್ರಕಟವಾಯಿತು- "ಡೊರೊಥಿಯ ಮಗಳು ಬಂದೂಕನ್ನು ನೋಡುತ್ತಿದ್ದವಳು ಆಕಸ್ಮಿಕವಾಗಿ ಅದರ ಕುದುರೆಗೆ ಕೈ ಬಡಿಸಿದ್ದರಿಂದ ಗುಂಡು ಹಾರಿ ಎದುರಿಗೆ ಕುಳಿತಿದ್ದ ಮಿಸ್ಟರ್ ಲಕ್ ಜೀವಕಳೆದುಕೊಂಡ."

ವಾರವೊಂದರ ನಂತರ ಆ ಹುಡುಗಿ ಮ್ಯಾಜಿಸ್ಟ್ರೇಟರ ಎದುರು, ತನ್ನ ಅಪ್ಪನ ಮೃತ್ಯು ಸಂಭವಿಸಿದ್ದು ಒಂದು ಷಡ್ಯಂತ್ರದಿಂದಾಗಿ ಎಂದು ಹೇಳಿಕೆ ಇತ್ತುಬಿಟ್ಟಳು. "ನನ್ನ ತಾಯಿ ಒಬ್ಬ ದನಗಾಹಿ ಯುವಕನ ಮೋಹಬಂಧದಲ್ಲಿ ಸಿಲುಕಿದ್ದಾಳೆ. ಮಿಸ್ಟರ್ ಲಕ್‌ನಿಂದ ವಿಚ್ಛೇದನ ಬಯಸಿದ್ದ ನನ್ನವ್ವ ಅದಕ್ಕೆ ಅಪ್ಪ ಒಪ್ಪದಾದಾಗ ಕ್ರುದ್ಧಳಾದಳು. ಆಕೆಗೆ ಆತ್ಮಗಳೊಂದಿಗೆ ಮಾತನಾಡುವ ಹವ್ಯಾಸವೂ ಇದೆ. ಕೆಲವು ದಿನಗಳ ಹಿಂದೆ ಆತ್ಮಾವಾಹನೆ ಮಾಡಿ, 'ನಾನು ಪತಿಯ ಹತ್ಯೆಗೈದು ಬಿಡಲೆ?' ಎಂದು ಕೇಳಿದಳು. 'ಹೂಂ' ಎಂದಿತು ಆತ್ಮ. 'ಆದರೆ ಹತ್ಯೆಗೈಯುವುದು ಹೇಗೆ?' ಮತ್ತೆ ಕೇಳಿದಳು. 'ಬಂದೂಕಿನಿಂದ. ಆದರೆ ಆಕಸ್ಮಿಕವಾಗಿ ಅದು ಆತನೆಡೆ ಹಾರಿತು ಎಂದೆನಿಸಿರಬೇಕು.' ನಾನಾಗ ಅಲ್ಲಿಯೇ ಇದ್ದೆ. 'ಇದರಿಂದ ನನ್ನವ್ವ ಸಿಕ್ಕಿಬೀಳುವುದಿಲ್ಲವೆ?' ಎಂದು ಕೇಳಿದೆ. 'ಇಲ್ಲ' ಎಂದಿತು ಆತ್ಮ. 'ಹಾಗಾದರೆ ನನ್ನ ತಾಯಿ ಆ ಯುವಕನೊಂದಿಗೆ ಮದುವೆ ಮಾಡಿಕೊಳ್ಳುವಳೆ?' ಎಂದೂ ಕೇಳಿದೆ. ಅದಕ್ಕೂ 'ಹೌದು' ಎಂಬುದೇ ಆತ್ಮ ಹೇಳಿದ ಉತ್ತರ.

"ನಾನೇ ಆ ಬಂದೂಕನ್ನು ಅಪ್ಪನೆಡೆಗೆ ಗುರಿಯಿಟ್ಟು ಆಟವಾಡುವಂತೆ ನಟಿಸಲು ಹೇಳಿದಳು ಅವ್ವ. ಮತ್ತು ಹಾಗೆ ಮಾಡುತ್ತಿರುವಾಗ ನನ್ನ ಕೈ ಕುದುರೆಯೊತ್ತಬಹುದಾದಂತೆ ನನ್ನನ್ನು ಎಡವಿದಳು. ಗುಂಡು ಹಾರಿ ಅಪ್ಪನನ್ನು ಹೆಣವಾಗಿಸಿತು," ಎಂದಳು ಹುಡುಗಿ.

ಆಕೆಯನ್ನು ಬಾಲಾಪರಾಧಿಗಳ ಶಾಲೆಗೆ ಸೇರಿಸಲು ಆಜ್ಞೆಮಾಡಿದ ಮ್ಯಾಜಿಸ್ಟ್ರೇಟರು ಮೊಟ್ಟಮೊದಲ ವಿಶ್ವಸುಂದರಿ ಡೊರೊಥಿಗೆ ೨೫ ವರ್ಷಗಳ ಕಠಿಣ ಕಾರಾಗೃಹವಾಸದ ಶಿಕ್ಷೆ ವಿಧಿಸಿದರು. ●

# ಇಂಥವರೂ ಇದ್ದರು!

• ಸೋನಿ

ಹೆಂಡತಿಗೆ ಜರೂರಾಗಿ ಶಸ್ತ್ರಕ್ರಿಯೆ ನಡೆಯಬೇಕಾದದ್ದು ಅನಿವಾರ್ಯವಾಗಿತ್ತು. ಆದರೆ ಡಾಕ್ಟರರೆದುರು ನಿಂತ ಆತನ ಮುಖ ಒಮ್ಮಿಂದೊಮ್ಮೆಲೇ ಬಾಡಿ ಹೋಯಿತು. ಆತನ ಕಣ್ಣುಗಳಲ್ಲಿ ನೀರು ಜಿನುಗಿದ್ದನ್ನು ಕಂಡ ಡಾಕ್ಟರು ಕೇಳಿದರು: "ಯಾಕೆ, ಏನಾಯಿತು?"

"ಶಸ್ತ್ರಕ್ರಿಯೆಗೆ ಐದುನೂರು ರೂಪಾಯಿ ಅನ್ನುತ್ತಿದ್ದೀರಿ. ಆದರೆ ನನ್ನಲ್ಲಿ ಅಷ್ಟು ಹಣವಿಲ್ಲ."

"ಎಷ್ಟಿದೆ?"

"ಹೆಚ್ಚೆಂದರೆ ಮುನ್ನೂರು ರೂಪಾಯಿ ಕೂಡಿಸಿಯೇನು."

"ಆಯಿತು. ಹಾಗೇ ಮಾಡು. ಮೊದಲು ಶಸ್ತ್ರಕ್ರಿಯೆಯನ್ನಂತೂ ಮಾಡುತ್ತೇನೆ. ಹೆಂಡತಿಯನ್ನು ಮನೆಗೆ ಕರೆದೊಯ್ಯುವಾಗ ದುಡ್ಡು ಕೊಡು, ಸಾಕು."

ಆದರೂ ಆತನ ಮುಖದಲ್ಲಿ ಗೆಲುವು ಮೂಡದದ್ದನ್ನು ಡಾಕ್ಟರರು ಗಮನಿಸದೆ ಇರಲಿಲ್ಲ.

ಶಸ್ತ್ರಕ್ರಿಯೆ ಮುಗಿಯಿತು. ಎರಡು ದಿನ ಆಕೆ ಆಸ್ಪತ್ರೆಯಲ್ಲೇ ಇದ್ದಳು. ಡಿಸ್‌ಚಾರ್ಜ್ ಮಾಡಿದ ದಿನ ಆತ ಡಾಕ್ಟರರ ಕೈಗೆ ಮುನ್ನೂರು ರೂಪಾಯಿ ಕೊಟ್ಟ.

"ನಿನ್ನನ್ನು ನೋಡಿದರೇ ತುಂಬ ಬಡವನೆಂಬುದು ಗೊತ್ತಾಗುತ್ತದೆ. ಆದರೆ ಈ ಮುನ್ನೂರು ರೂಪಾಯಿಗಳನ್ನು ಅದು ಹೇಗೆ ಹೊಂದಿಸಿಕೊಂಡೆಯಪ್ಪಾ?" ಅನುಕಂಪದಿಂದ ಕೇಳಿದರು ಡಾಕ್ಟರರು.

"ಹೇಗೋ, ಒಟ್ಟು ವ್ಯವಸ್ಥೆ ಮಾಡಲೇಬೇಕಾಗಿತ್ತಲ್ಲ ಸರ್.... ಎರಡು ತಿಂಗಳ ಸಂಬಳ ಮುಂಗಡ ಪಡೆದೆ."

"ಅಂದರೆ.... ನಿನಗೆ ತಿಂಗಳಿಗೆ ಕೇವಲ ನೂರೈವತ್ತು ರೂಪಾಯಿ ಸಂಬಳವೆ?"

"ಹೌದು ಸರ್. ಖಾಸಗಿ ಕೆಲಸ. ದುಡಿದರೆ ಮಾತ್ರ ಸಂಬಳ. ಇನ್ನೆರಡು ತಿಂಗಳು ನಾನು ಹಗಲು-ರಾತ್ರಿ ದುಡಿದು ಈ ಮುಂಗಡ ಹಣ ತಿರುಗಿ ಮುಟ್ಟಿಸಬೇಕು."

ಡಾಕ್ಟರು ಥಟ್ಟನೆ ಆ ಹಣದಲ್ಲಿ ನೂರೈವತ್ತನ್ನು ಆತನಿಗೆ ವಾಪಸ್ಸು ಮಾಡುತ್ತ, "ಪಾಪ.... ಮೊದಲೇ ಹೇಳಬಾರದೇನಪ್ಪಾ? ನನ್ನ ಫೀ ಅಂತ ಈ ನೂರೈವತ್ತು ಮಾತ್ರ ಸಾಕು. ನಿನ್ನ ಕೈಗೆ ಹಾಕಿರುವ ನೂರೈವತ್ತರಲ್ಲಿ ಹೆಂಡತಿಗೆ ಒಳ್ಳೆಯ ಆಹಾರ ಕೊಡಿಸು. ಹಾಂ, ಆಕೆ ಪೂರ್ಣ ಗುಣವಾಗುವವರೆಗೆ ಬೇಕಾಗುವ ಔಷಧಿ, ಗುಳಿಗೆಗಾಗಿ ಚಿಂತಿಸಬೇಡ. ವಾರಕ್ಕೊಮ್ಮೆ ನನ್ನ ಹತ್ತಿರ ಕಳಿಸು. ನಾನು ಪುಕ್ಕಟೆಯಾಗಿ ಕೊಡುತ್ತೇನೆ, ತಿಳಿಯಿತಾ! ಹೋಗಿ ಬಾ. ದೇವರು ಒಳ್ಳೆಯದು ಮಾಡಲಿ."

ಆತ ಗಳಗಳನೆ ಅತ್ತುಬಿಟ್ಟ. ದೇಹ ಬಾಗಿ 'ವೈದ್ಯ ನಾರಾಯಣ'ನ ಪಾದಗಳಿಗೆ ನಮಿಸಿತು.

ಇದು ಇಪ್ಪತ್ತು ವರ್ಷಗಳ ಹಿಂದಿನ ಘಟನೆ. ಮುಂಬಯಿಯಲ್ಲಿ ನಡೆದದ್ದು. ಆ ಹೃದಯವಂತನ ಹೆಸರು ಡಾ. ಮುಳಗಾಂವಕರ್. ಮಹಾರಾಷ್ಟ್ರದಲ್ಲಿ ದಲಿತರ ದೇವತೆ, ದೀನರ ಬಾಳಿನ ಬೆಳಕು ಎನಿಸಿದ್ದ ಖ್ಯಾತ ಶಸ್ತ್ರಕ್ರಿಯಾತಜ್ಞ. ಅವರಿಂದ 'ಪುನರ್ಜನ್ಮ' ಪಡೆದು ಹೊಸ ಬದುಕು ನಡೆಸಿದವರು ಅಸಂಖ್ಯ ಜನ. ●

ಇದಕ್ಕೇನೆನ್ನಬೇಕು?
ಚೋದ್ಯವೆ?
ಉಪೇಕ್ಷೆಯೆ?
ಅಥವಾ
ಮತ್ತಿನ್ನೇನಾದರೂ
ಹೆಸರಿದೆಯೆ?

# ಫಲ ನೀಡದ ಪ್ರಯೋಗ

• ಕೈವಾರ ಗೋಪಿನಾಥ್

**ಜು**ಲೈ ೧೦, ೧೯೭೬. ಅಮೇರಿಕದ 'ನಾಸಾ' ಉಪಗ್ರಹ ಉಡಾವಣಾ ಸಂಸ್ಥೆಗೆ ಅದೊಂದು ಪರ್ವದಿನವಾಗಿತ್ತು. ಏಕೆಂದರೆ ಅಂದು ಮಂಗಳಗ್ರಹದ ಮೇಲೆ ಇಳಿದ ವೈಕಿಂಗ್-೧ ವ್ಯೋಮನೌಕೆ, ಅಂತಹ ಘಟನೆಗೆ ಕಾರಣವಾದ ಅಮೆರಿಕದ ಮೊಟ್ಟಮೊದಲ ಸಾಧನವಾಗಿತ್ತು. ವಿಚಿತ್ರವೆಂದರೆ, ಮಂಗಳಗ್ರಹದ ಸನಿಹದಲ್ಲಿಯೇ ಅದನ್ನು ಸುತ್ತುತ್ತಿದ್ದ ವೈಕಿಂಗ್-೧ ಭೂಮಿಗೆ ರವಾನಿಸಿದ ಚಿತ್ರಗಳನ್ನು ನೋಡಿದ ವಿಜ್ಞಾನಿಗಳು ಅಲ್ಲಿನ ಪರಿಸ್ಥಿತಿ ನೌಕೆ ಆ ಗ್ರಹದಲ್ಲಿ ಇಳಿಯುವುದಕ್ಕೆ ಪ್ರತಿಕೂಲವಾಗಿರುವುದನ್ನು ಗಮನಿಸಿದರು. ಹಾಗೆಂದೇ ೧೯೭೬ರ ಜುಲೈ ೪ ರಂದು ಅಂದರೆ ಅಮೆರಿಕದ ೨೦೦ನೆಯ ಸ್ವಾತಂತ್ರ್ಯೋತ್ಸವದ ದಿನ ಮಂಗಳಗ್ರಹದ ಮೇಲೆ ಇಳಿಯಬೇಕಾಗಿದ್ದ ಆ ನೌಕೆಯನ್ನು ಆರು ದಿನಗಳ ನಂತರ, ಅಂದರೆ ಜುಲೈ ೧೦ ರಂದು ಇಳಿಯಲು ಆದೇಶಿಸಿದರು.

ಆ ಸಾಧನೆ, ಸಂಭ್ರಮದ ಮಧ್ಯೆ ಅಮೆರಿಕದ ವಿಜ್ಞಾನಿಯೊಬ್ಬನಿಗೆ ನಿರಾಶೆ ಕಾದಿತ್ತು. ನ್ಯೂಯಾರ್ಕಿನ ರೂಚೆಸ್ಟರ್ ವಿಶ್ವವಿದ್ಯಾಲಯದಲ್ಲಿ ಅತ್ಯಂತ ಮೇಧಾವಿ ಸೂಕ್ಷ್ಮ ಜೀವ ವಿಜ್ಞಾನಿಯೆನ್ನಿಸಿದ್ದ ವುಲ್ಫ್ ವಿಷ್ನಿಯಾಕ್‌ನೇ ಆ ದುರದೃಷ್ಟಕರ ವ್ಯಕ್ತಿಯಾಗಿದ್ದ. ೧೯೫೦ರಲ್ಲಿಯೇ ವಿಷ್ನಿಯಾಕ್, 'ನಾಸಾ'ದ ಇನ್ನೊಬ್ಬ ವಿಜ್ಞಾನಿ ಕಾರ್ಲ್ ಸಗಾನ್‌ರ ಜೊತೆ ಮಂಗಳಗ್ರಹದ ಮೇಲೆ ಜೀವಿಗಳಿರಬಹುದೆಂಬ ವಿಷಯದ ಬಗ್ಗೆ ಚರ್ಚೆ ನಡೆಸಿದ್ದ. ಕಾರ್ಲ್ ಸಗಾನ್ 'ಕಾಸ್ಮಾಸ್' ಎಂಬ ಪ್ರಸಿದ್ಧ ಪುಸ್ತಕದ ಲೇಖಕರೂ ಆಗಿರುವುದಲ್ಲದೆ, ಆ ಪುಸ್ತಕದ ಬಗ್ಗೆ ತಯಾರಾದ ಟಿ.ವಿ. ಸರಣಿಯ ನಿರ್ದೇಶಕರೂ ಆಗಿದ್ದಾರೆ. ಕಾಕತಾಳೀಯವೆಂಬಂತೆ ಅದೇ ವರುಷ ಖಗೋಳ ವಿಜ್ಞಾನಿಗಳ ರಾಷ್ಟ್ರೀಯ ಸಮ್ಮೇಳನವೊಂದು ಅಮೇರಿಕದಲ್ಲಿ ನಡೆಯಿತು. ಅದರಲ್ಲಿ ವಿಷ್ನಿಯಾಕ್ ಕೂಡ

ಭಾಗವಹಿಸಿದ್ದ. ಮಂಗಳಗ್ರಹದ ಮೇಲೆ ಸೂಕ್ಷ್ಮ ಜೀವಿಗಳ ಇರವನ್ನು ಕಂಡುಹಿಡಿಯಲು ಅನುಕೂಲವಾದ ಸ್ವಯಂ ನಿರ್ವಹಣಾ ಸಾಧನವನ್ನು ನಿರ್ಮಿಸಲು ಸಾಧ್ಯವೇ ಎಂಬುದರ ಬಗ್ಗೆ ಖಗೋಳ ವಿಜ್ಞಾನಿಗಳು ವಿಷಯ ಪ್ರಸ್ತಾಪ ಮಾಡಿದರು. ಅಂತಹ ಸಾಧನವನ್ನು ನಿರ್ಮಿಸಲು ತಾನು ಪ್ರಯತ್ನ ಪಡುವುದಾಗಿ ವಿಷ್ಣಿಯಾಕ್ ಆ ವಿಜ್ಞಾನಿಗಳಿಗೆ ಭರವಸೆ ನೀಡಿದ.

ಹನ್ನೆರಡು ವರುಷಗಳ ನಿರಂತರ ಪ್ರಯತ್ನದಿಂದ ವಿಷ್ಣಿಯಾಕ್ ಅಂತಹ ಒಂದು ಸಾಧನವನ್ನು ನಿರ್ಮಿಸಿದ. ವಿಷ್ಣಿಯಾಕ್‌ನ ಸ್ನೇಹಿತರು ಆ ಸಾಧನವನ್ನು 'ವುಲ್ಫ್ ಟ್ರ್ಯಾಪ್' ಎಂಬುದಾಗಿ ಅವನ ಹೆಸರಿನಲ್ಲೇ ಕರೆದರು. ವೈಕಿಂಗ್-೧ರಲ್ಲಿ ಅಳವಡಿಸಬೇಕಾಗಿದ್ದ 'ವುಲ್ಫ್ ಟ್ರ್ಯಾಪ್'ನ ಕಾರ್ಯವೈಖರಿ ಹೀಗಿರಬೇಕಿತ್ತು:

ವೈಕಿಂಗ್-೧ ಮಂಗಳಗ್ರಹದ ಮೇಲೆ ಇಳಿದಾಗ ಆ ಸಾಧನ ತನ್ನ ಜೊತೆ ತೆಗೆದುಕೊಂಡು ಹೋಗುವ ಪೋಷಕ ಆಹಾರದಿಂದ ಕೂಡಿದ ಜೈವಿಕ ಪದಾರ್ಥದ ಜೊತೆಯಲ್ಲಿ ಮಂಗಳನ ನೆಲದ ಮೇಲಿನ ಮಣ್ಣನ್ನು ಬೆರೆಸುವುದು. ನಂತರ ಆ ದ್ರವದ ಮಿಶ್ರಣದ ಬಗ್ಗಡತೆಯನ್ನು (Turbidity) ಪರೀಕ್ಷಿಸುವುದು. ಏಕೆಂದರೆ ಈ ಮಂಗಳನ ಮಣ್ಣಲ್ಲಿ ಸೂಕ್ಷ್ಮ ಜೀವಿಗಳಿದ್ದ ಪಕ್ಷದಲ್ಲಿ, ಅವು ಬೆಳೆದು, ದ್ರವದ ಬಗ್ಗಡತೆಯಲ್ಲಿ ಬದಲಾವಣೆ ಕಂಡುಬರುವುದು.

ಸೂಕ್ಷ್ಮ ಜೀವ ವಿಜ್ಞಾನಕ್ಕೆ ಸಂಬಂಧಪಟ್ಟಂತೆ ವೈಕಿಂಗ್-೧ ಮಂಗಳಗ್ರಹದ ಮೇಲೆ ನಿರ್ವಹಿಸಬೇಕಾಗಿದ್ದ ಮೂರು ಪ್ರಯೋಗಗಳಲ್ಲಿ ಒಂದನ್ನು 'ವುಲ್ಫ್ ಟ್ರ್ಯಾಪ್' ನಿರ್ವಹಿಸಬೇಕಾಗಿತ್ತು. ಮಿಕ್ಕ ಎರಡು ಪ್ರಯೋಗಗಳಲ್ಲಿ ಸೂಕ್ಷ್ಮ ಜೀವಿಗಳು (ಇದ್ದರೆ?) ಆಹಾರ ಸೇವಿಸುವ ಪ್ರಕ್ರಿಯೆಯಲ್ಲಿ ತಮ್ಮ ದೇಹದಲ್ಲಿ ಹೀರಿಕೊಳ್ಳುವ ಮತ್ತು ದೇಹದಿಂದ ಹೊರಬಿಡುವ ಅನಿಲಗಳನ್ನು ವಿಶ್ಲೇಷಿಸುವ ವ್ಯವಸ್ಥೆಯನ್ನು ಮಾಡಲಾಗಿತ್ತು. ಆದರೆ ಆ ಸೂಕ್ಷ್ಮ ಜೀವಿಗಳ ಆಹಾರ ಸೇವನೆಗಿಂತ, ಅವುಗಳು ಬೆಳೆಯುವ ಪ್ರಕ್ರಿಯೆಯನ್ನು ಅಭ್ಯಸಿಸುವ ಉದ್ದೇಶವೇ ಪ್ರಮುಖವಾಗಿತ್ತು. ಹಾಗೆಂದೇ ವಿಷ್ಣಿಯಾಕ್ ಸೃಷ್ಟಿಸಿದ 'ವುಲ್ಫ್ ಟ್ರ್ಯಾಪ್' ಸಾಧನ ಗಮನಾರ್ಹವಾಗಿತ್ತು.

ವಿಷ್ಣಿಯಾಕ್‌ನ ಪಾಲಿಗೆ ೧೯೭೦ರ ಸಾಲಿನಲ್ಲಿ ದುರದೃಷ್ಟವೊಂದು ಕಾದಿತ್ತು. ವೈಕಿಂಗ್-೧ ವ್ಯೋಮನೌಕೆಯ ಉಡಾವಣೆಗೆ ಅಮೆರಿಕ ಸರಕಾರ 'ನಾಸಾ'ಗೆ ನಿಗದಿಪಡಿಸಿದ್ದ ಬಜೆಟ್‌ನಲ್ಲಿ ಸ್ವಲ್ಪಮಟ್ಟಿಗೆ ಖೋತಾ ಕಂಡುಬಂದಿತು. ಹಾಗಾಗಿ 'ನಾಸಾ'ದಲ್ಲಿ ಯಾವ ಪ್ರಯೋಗಗಳ ಖರ್ಚು ಕಡಿಮೆ ಮಾಡಬೇಕೆಂಬುದಾಗಿ ಸಂಬಂಧಪಟ್ಟ ಅಧಿಕಾರಿಗಳು ಸಮಾಲೋಚನೆ ನಡೆಸಿದರು. ತತ್ಪರಿಣಾಮವಾಗಿ ವೈಕಿಂಗ್-೧ ನಿರ್ವಹಿಸಬೇಕಾಗಿದ್ದ ನಾಲ್ಕು ಸೂಕ್ಷ್ಮ ಜೀವವಿಜ್ಞಾನದ ಪ್ರಯೋಗಗಳನ್ನು ತಡೆಹಿಡಿಯಲು ನಿರ್ಧರಿಸಲಾಯಿತು. ವಿಷ್ಣಿಯಾಕ್‌ನ ೧೨ ವರುಷಗಳ ಸತತ ಶ್ರಮ ಫಲ ನೀಡದೇ, ಚಿಗುರಿನಲ್ಲಿಯೇ ಮುರುಟಿ ಹೋಯಿತು. ೧೯೭೬ರ ಜುಲೈ ೧೦ ರಂದು 'ವುಲ್ಫ್ ಟ್ರ್ಯಾಪ್' ರಹಿತ ವೈಕಿಂಗ್-೧ ಮಂಗಳಗ್ರಹದ ಮೇಲೆ ಇಳಿಯಿತು.

ಆದರೆ ನಿಸ್ಪೃಹತೆಗೆ ಹೆಸರಾಗಿದ್ದ ವಿಷ್ಣಿಯಾಕ್ ಧೃತಿಗೆಡಲಿಲ್ಲ. ನಮ್ಮ ಭೂಮಿಯಲ್ಲಿಯೇ ಮಂಗಳಗ್ರಹದ ವಾತಾವರಣ ಇರುವಂತಹ ನೆಲದಲ್ಲಿ ತನ್ನ ಸೂಕ್ಷ್ಮ ಜೀವವಿಜ್ಞಾನದ ಪ್ರಯೋಗಳನ್ನು ಮುಂದುವರಿಸಲು ಯೋಚಿಸಿದ್ದ. ಅಂಟಾರ್ಕ್ಟಿಕದ ಕಣಿವೆಗಳು ಪ್ರಯೋಗಗಳಿಗೆ ಸರಿಯಾದ ಪ್ರದೇಶ ಎಂಬುದಾಗಿ ನಿರ್ಧರಿಸಿದ. ಅದಕ್ಕೆ ಕಾರಣವೂ ಇತ್ತು. ಅಂಟಾರ್ಕ್ಟಿಕದ ಆ ಕಣಿವೆಗಳ ಭೂಪ್ರದೇಶದ ಮಣ್ಣನ್ನು ಪರೀಕ್ಷಿಸಿದ್ದ ಹಿಂದಿನ ವಿಜ್ಞಾನಿಗಳು, ಅಲ್ಲಿ ತಾವು ಕಂಡಿದ್ದ ಸೂಕ್ಷ್ಮ ಜೀವಿಗಳು ಅಲ್ಲಿಯೇ ಸೃಷ್ಟಿಯಾದದ್ದಲ್ಲವೆಂದೂ, ಬೇರೆ ಪ್ರದೇಶಗಳ ವಾತಾವರಣದಿಂದ ಈ ಪ್ರದೇಶಕ್ಕೆ ವಾತಾವರಣದ ಮೂಲಕ ಸಾಗಿಸಲ್ಪಟ್ಟಿವೆಯೆಂದೂ ನಿರ್ಧರಿಸಿದ್ದರು. ಆದರೆ ಅಂಟಾರ್ಕ್ಟಿಕದಲ್ಲಿಯೇ ಸೂಕ್ಷ್ಮ ಜೀವಿಗಳ ಸೃಷ್ಟಿಯ ಸಾಧ್ಯತೆ ಇದೆಯೆಂದೂ, ಮಂಗಳಗ್ರಹದ ವಾತಾವರಣಕ್ಕೆ ಆ ಪ್ರದೇಶ ಹೊಂದಿಕೊಳ್ಳುತ್ತವೆಂದೂ ವಿಷ್ಣಿಯಾಕ್‌ನ ದೃಢ ಅಭಿಪ್ರಾಯ

ವಾಗಿತ್ತು.

ವಿಷ್ನಿಯಾಕ್‌ನನ್ನು ೧೯೭೩ರ ನವೆಂಬರ್ ೮ ರಂದು ಅವನ ನೂತನ ಸೂಕ್ಷ್ಮಜೀವ ವಿಜ್ಞಾನ ಸಾಧನದೊಂದಿಗೆ ಹೆಲಿಕಾಪ್ಟರ್‌ನಲ್ಲಿ ಅಂಟಾರ್ಕ್ಟಿಕದ ಮೌಂಟ್ ಬೌಲ್ಡರ್ ಪ್ರದೇಶದ ಮೆಕ್ ಮುರ್ಡೋ ಎಂಬ ಪ್ರಾಯೋಗಿಕ ಕೇಂದ್ರಕ್ಕೆ ಸಾಗಿಸಲಾಯಿತು. ಅಂಟಾರ್ಕ್ಟಿಕದ ಇನ್ನೂ ಅನೇಕ ಸ್ಥಳಗಳಲ್ಲಿ ಪ್ರಾಯೋಗಿಕ ಕೇಂದ್ರಗಳನ್ನು ಸ್ಥಾಪಿಸಿ, ಅಲ್ಲಿನ ಭೂ ಪ್ರದೇಶದ ಮಣ್ಣಿನಲ್ಲಿ 'ವುಲ್ಫ್ ಟ್ರ್ಯಾಪ್' ಸಾಧನಗಳನ್ನಿಡಬೇಕಾಗಿತ್ತು. ಒಂದು ತಿಂಗಳ ನಂತರ, ಆ ಪ್ರದೇಶಗಳಲ್ಲಿನ ಮಣ್ಣನ್ನು ಸಂಗ್ರಹಿಸಿದ 'ವುಲ್ಫ್ ಟ್ರ್ಯಾಪ್'ಗಳನ್ನು ಅಮೇರಿಕಕ್ಕೆ ವಾಪಸ್ಸು ತರಬೇಕಾಗಿತ್ತು. ಅದರಂತೆ ೧೯೭೩ರ ಡಿಸೆಂಬರ್ ೧೦ ರಂದು ವಿಷ್ನಿಯಾಕ್ ಸ್ಥಾಪಿಸಿದ್ದ ಸಾಧನಗಳನ್ನು ವಾಪಸ್ಸು ತರಲು ಮತ್ತೆ ಅವನನ್ನು ಕಳುಹಿಸಲಾಯಿತು. ವಿಷ್ನಿಯಾಕ್ ಆ ಕೆಲಸ ಆರಂಭಿಸಿದಾಗ ಮೂರು ಕಿಲೋ ಮೀಟರ್ ಎತ್ತರದಲ್ಲಿದ್ದ ಹೆಲಿಕಾಪ್ಟರಿನಿಂದ ಅವನ ಭಾವಚಿತ್ರಗಳನ್ನು ತೆಗೆಯಲಾಯಿತು. ದುರದೃಷ್ಟಕರವಾದ ಸಂಗತಿಯೆಂದರೆ, ಆ ಭಾವ ಚಿತ್ರವೇ ವಿಷ್ನಿಯಾಕ್‌ನ ಕೊನೆಯ ಭಾವಚಿತ್ರವಾಗಿತ್ತು. ಅಷ್ಟೇ ಅಲ್ಲ, ಅವನ ಭಾವಚಿತ್ರ ತೆಗೆದಾಗಲೇ ಯಾರಾದರೂ ಅವನನ್ನು ನೋಡಿದ ಕೊನೆಯ ದೃಶ್ಯ ಕೂಡ.

ಹದಿನೆಂಟು ಗಂಟೆಗಳ ನಂತರ ವಿಷ್ನಿಯಾಕ್‌ನ ದೇಹ ಅಂಟಾರ್ಕ್ಟಿಕದಲ್ಲಿನ ಮಂಜಿನ ಕಡಿದಾದ ಬಂಡೆಯೊಂದರ ತಳದಲ್ಲಿ ಕಾಣಿಸಿತು. ಹಿಂದೆಂದೂ ಪರಿಶೋಧಿಸದ ಪ್ರದೇಶಗಳಲ್ಲಿ ವಿಷ್ನಿಯಾಕ್ ಪ್ರಯೋಗ ನಡೆಸುವ ಸಲುವಾಗಿ ಅಲೆದಾಡಿದ್ದುದು ನಂತರ ಗೊತ್ತಾಯಿತು. ಹಾಗೆ ಅಲೆದಾಡುವಾಗ, ಮಂಜಿನಲ್ಲಿ ಜಾರಿ, ೧೫೦ ಮೀಟರ್‌ಗಳಷ್ಟು ದೂರ ತಳ್ಳಲ್ಪಟ್ಟಿದ್ದ ವಿಷ್ನಿಯಾಕ್‌ಗೆ ಬಹುಶಃ ಸೂಕ್ಷ್ಮಜೀವಿಗಳ ಯಾವುದೋ ಗಹನವಾದ ವಿಷಯ ಗಮನಕ್ಕೆ ಬಂದಿರಬಹುದು ಅಥವಾ ಯಾವುದೋ ಹಸಿರು ಪ್ರದೇಶವನ್ನು ಅವನು ಕಂಡಿರಬಹುದು ಎಂಬುದಾಗಿ ನಿರ್ಧರಿಸಲಾಯಿತು.

ಅವನು ತನ್ನ ಡೈರಿಯಲ್ಲಿ ನಮೂದಿಸಿದ ಕೊನೆಯ ದಾಖಲೆ ಹೀಗಿತ್ತು: 'ತಾರೀಖು: ಡಿಸೆಂಬರ್ ೧೦, ೧೯೭೩. ೨೨:೩೦ ಗಂಟೆಗಳು. ಪ್ರಾಯೋಗಿಕ ಕೇಂದ್ರ ೨೦೨ಕ್ಕೆ ಬಂದು ಪರೀಕ್ಷೆ ನಡೆಸಿದೆ. ಇಲ್ಲಿನ ಮಣ್ಣಿನ ತಾಪ- ೧೦ ಡಿಗ್ರಿ ಆಗಿದೆ. ಗಾಳಿಯ ತಾಪ- ೧೬ ಡಿಗ್ರಿ ಆಗಿದೆ'. ಅಂದರೆ ಮಂಗಳ ಗ್ರಹದ ಮೇಲಿನ ಬೇಸಿಗೆಯ ವಾತಾವರಣದ ಮಾದರಿಯ ವಾತಾವರಣವನ್ನು ವಿಷ್ನಿಯಾಕ್ ಅಂಟಾರ್ಕ್ಟಿಕದ ಮೇಲೆ ಹುಡುಕಿದ್ದ.

ವಿಷ್ನಿಯಾಕ್‌ನ ಸ್ನೇಹಿತರು ಅವನು ಸ್ಥಾಪಿಸಿದ್ದ ಪ್ರಾಯೋಗಿಕ ಕೇಂದ್ರಗಳಿಂದ ಮಣ್ಣಿನ ಮಾದರಿಗಳನ್ನು ತಂದು, ಅವನು ಸೂಚಿಸಿದ್ದ ಪ್ರಯೋಗ ಶೈಲಿಯಲ್ಲೇ ಮುಂದುವರಿದು ಪರೀಕ್ಷಿಸಿದರು. ಅವರಿಗೆ ಒಂದು ಆಶ್ಚರ್ಯ ಕಾದಿತ್ತು. ಸ್ವಾಭಾವಿಕವಾಗಿ ನಡೆಸುತ್ತಿದ್ದ ಪರೀಕ್ಷೆಗಳಿಂದ ಕಂಡು ಹಿಡಿಯಲು ಕಷ್ಟವಾಗಿದ್ದ ಅನೇಕ ನಮೂನೆಯ ಸೂಕ್ಷ್ಮ ಜೀವಿಗಳನ್ನು ವಿಷ್ನಿಯಾಕ್‌ನ ಮಾದರಿಯ ಪ್ರಯೋಗಗಳಿಂದ ಪತ್ತೆ ಹಚ್ಚಲಾಯಿತು. ಹೊಸ ಪ್ರಭೇದದ ಕಿಣ್ವಗಳನ್ನು ಆ ಮಣ್ಣಿನ ಮಾದರಿಗಳಲ್ಲಿ ಕಂಡು ಹಿಡಿದದ್ದು ಬೇರೆ ಯಾರೂ ಆಗಿರದೆ ವಿಷ್ನಿಯಾಕ್‌ನ ವಿಧವೆ ಹೆಲೆನ್ ಸಿಂಪ್ಸನ್ ಆಗಿದ್ದಳು.

ಅಷ್ಟೇ ಅಲ್ಲ, ಇಮ್ರೆ ಫ್ರೀಡ್‌ಮನ್ ಎಂಬ ಸೂಕ್ಷ್ಮಜೀವ ವಿಜ್ಞಾನಿ ಅಂಟಾರ್ಕ್ಟಿಕದ ಬಂಡೆಗಳ ಎರಡು ಮಿಲಿಮೀಟರ್ ಒಳಗೆ, ವಿಷ್ನಿಯಾಕ್‌ನ ಪ್ರಯೋಗಗಳಿಂದ ಸೃಷ್ಟಿಯಾದ ಪಾಚಿಗಳನ್ನು ಗುರುತಿಸಿದ. ಸಮಾಧಾನಕರ ವಿಷಯವೆಂದರೆ ಮಂಗಳಗ್ರಹದ ಮೇಲಿನ ಅಂಟಾರ್ಕ್ಟಿಕದ ಮಂಜಿನ ಪ್ರದೇಶದಲ್ಲಿ ಉಂಟಾಗಿರುವ ಕುಳಿಗೆ ವಿಷ್ನಿಯಾಕ್‌ನ ಹೆಸರನ್ನು ಇಡಲಾಗಿದೆ. ಈ ನಾಮಕರಣ ಬಾಹ್ಯಾಕಾಶ ತಂತ್ರಜ್ಞಾನದ ಮುನ್ನಡೆಗೆ ತನ್ನ ಜೀವವನ್ನೇ ಅರ್ಪಿಸಿದ ವಿಷ್ನಿಯಾಕ್‌ಗೆ ಅಮೆರಿಕ ಸಲ್ಲಿಸಿದ ಗೌರವ. ●

---

ಆತ ಕೊಟ್ಟ ವಿವರಣೆ: "ನಾವಿಬ್ಬರೂ ದೂರದ ಸಂಬಂಧಿಗಳು. ಆತ ನಮ್ಮಪ್ಪ-ಅಮ್ಮನ ಮೊದಲ ಮಗ.. ನಾನು ೧೬ನೆಯವ"

# ಸಂಚು

ಪೌರಾಣಿಕ ಹಿನ್ನೆಲೆಯ ವಿಚಾರಪ್ರಚೋದಕ ಕಾದಂಬರಿ

ಮಹಾ ? ಭಾರತ



## ಪುಸ್ತಕ ವಿಭಾಗ

• ಭೀಮಸೇನ ತೊರಗಲ್ಲ

ಸಂಗ್ರಹ: ಶ್ರೀ.ಹಾ. (ಪುಣೆ)

'ಮಹಾಭಾರತದ ಕತೆ ನಮಗೆ ಗೊತ್ತಿದ್ದಂತೆ ನಡೆದಿಲ್ಲ, ಆದರೆ ನಡೆದದ್ದೇನು ಎಂದು ಕಂಡುಹಿಡಿಯಲೆತ್ನಿಸಿದವರ ಕತೆ ಗೊತ್ತಿದೆ.'

'ಸಂಚು' ಕಾದಂಬರಿಯ ಕೊನೆಯ ವಾಕ್ಯವಿದು.

ಕಾಲ ಸರಿದ ಹಾಗೆ ನಡೆದ ಘಟನೆಗಳು ನೈಜತ್ವವನ್ನು ಕಳೆದುಕೊಳ್ಳುತ್ತವೆ. ಮಹಾಭಾರತದ ಕಾಲ ಮುಗಿದು ೫೦ ವರ್ಷಗಳು ಸಂದ ಮೇಲೆ ಸ್ವಾಭಾವಿಕವಾಗಿಯೆ ನಿಜ ಸಂಗತಿ ವಿರೂಪವನ್ನೂ ವಿರಾಟ್ ಸ್ವರೂಪವನ್ನೂ ಪಡೆಯಿತು- ಎಂಬುದು ಈ ಕಾದಂಬರಿಯನ್ನು ಬರೆಯಲು ಲೇಖಕರಿಗೆ ಪ್ರೇರಣೆಯನ್ನೊದಗಿಸಿದೆ.

ಕಥಾಸಂದರ್ಭ ಹೀಗಿದೆ: ಹದಿನೆಂಟು ದಿನ ಮಹಾಯುದ್ಧ ಮುಗಿದು ಅಧರ್ಮಿಗಳಾದ ಕೌರವರೊಬ್ಬರೂ ಉಳಿಯದಂತೆ ಮಡಿದರು. ಪಾಂಡವರು ಧರ್ಮಿಷ್ಠರು; ಹಾಗಾಗಿ ಯುದ್ಧದಲ್ಲಿ ವಿಜಯಿಗಳಾದರು; ಸುಖ-ಸಮೃದ್ಧಿಯಿಂದ ರಾಜ್ಯವಾಳಿದರು. ಪ್ರಕೃತ ಅವರ ಮೊಮ್ಮಗ ಪರೀಕ್ಷಿತ ರಾಜ್ಯವಾಳುತ್ತಿದ್ದಾನೆ.

ಪ್ರಶ್ನೆ ಇದು: ಪಾಂಡವರ ಗೆಲವು ಎಂದರೆ ಧರ್ಮದ ವಿಜಯವೇ. ಒಪ್ಪೋಣ. ಆದರೆ ಅಭಿಮನ್ಯು ಅದಾವ ಅಧರ್ಮದ ಕೃತ್ಯವನ್ನೆಸಗಿದನೆಂದು ಮಡಿದ? ಕಾರಣವೇನೇ ಇರಲಿ, ಹಿರಿಯ ಪಾಂಡವರು ಅಧರ್ಮವೆನ್ನಬಹುದಾದ್ದನ್ನು ಮಾಡಿಯೇ ಇದ್ದಾರೆ. ಅದನ್ನೂ ಬಿಡೋಣ. ಅವನ ಹೆಂಡತಿ ಉತ್ತರೆ? ಹದಿನಾರರ ಹುಡುಗಿ. ಆ ವಯಸ್ಸಿನ ವಿಧವೆಯಾಗಿ, ಎಲ್ಲ ಸುಖಕ್ಕೂ ಎರವಾಗಿ, ಜೀವನವಿಡೀ ಗಂಡನ ವರ್ಷ ಶ್ರಾದ್ಧ ಮಾಡಿಸುತ್ತ ಇರಬೇಕಾದ ಪರಿಸ್ಥಿತಿ ಬಂದಿತಲ್ಲ, ಅದಾವ ಘೋರವಾದ ಪಾಪಕೃತ್ಯವನ್ನು, ಅಧರ್ಮದ ಕೆಲಸವನ್ನು ಆಕೆ ಮಾಡಿದ್ದಳು?

ನೆನಪಿಡಿರಿ. ಮಹಾಭಾರತವು ಪುರಾಣವಲ್ಲ; ಇತಿಹಾಸ ಕಾವ್ಯ. ಅದರಲ್ಲಿ ರಾಜಕಾರಣದ ಎಳೆಗಳು ಓತಪ್ರೋತವಾಗಿ ನೇಯ್ದುಕೊಂಡಿವೆ. ರಾಜಕೀಯ ಇರುವಲ್ಲಿ- ಕಲಿಯುಗವೇನು, ದ್ವಾಪರವೇನು- ವಂಚನೆ ಸುಳ್ಳು, ಸಂಚುಗಾರಿಕೆ, ಕೊಲೆ ಇವೆಲ್ಲ ಇರುವಂತಹವೇ. ಅವುಗಳ ನೈಜ ಸ್ಥಿತಿಯನ್ನು ಮರೆಮಾಚಲೆಂದು ಎಷ್ಟೋ ಘಟನೆಗಳಿಗೆ ಅಲೌಕಿಕದ, ಪವಾಡದ ಸ್ವರೂಪ ಬರುತ್ತದೆ. ಕುಂತಿಗೆ ದೇವತೆಗಳಿಂದ ಪುತ್ರಪ್ರದಾನ, ದ್ರೌಪದಿಗೆ ಅಕ್ಷಯಾಂಬರ, ಇತ್ಯಾದಿ. ಈ ಪವಾಡದ ತೆರೆಯನ್ನು ಸರಿಸಿ, ಅವೆಲ್ಲ ಇತಿಹಾಸ ಕಾಲದ ರಾಜಕೀಯ ಘಟನೆಗಳೆಂದು ಬಗೆದು ನೈಜಸ್ಥಿತಿಯನ್ನು ಅರಿತುಕೊಳ್ಳುವಲ್ಲಿ ತಪ್ಪೇನಿದೆ?

ಈ ಬಗೆಯ ವಿಶ್ಲೇಷಣೆಯನ್ನು ಮಹಾರಾಷ್ಟ್ರದ ಇರಾವತಿ ಕರ್ವೆ, ದುರ್ಗಾ ಭಾಗವತರು ಮಾಡಿದ್ದಾರೆ. ನಮ್ಮ ಎಸ್.ಎಲ್. ಭೈರಪ್ಪನವರು 'ಪರ್ವ' ಕಾದಂಬರಿಯನ್ನು, ಸತ್ಯಾನ್ವೇಷಕರಾಗಿಯೆ ಬರೆದದ್ದಲ್ಲವೆ?

ಇನ್ನೊಂದು ಮಾತು. ಇತಿಹಾಸವು ತನ್ನಷ್ಟಕ್ಕೆ ಪುನರಾವರ್ತನಗೊಳ್ಳುತ್ತದೆನ್ನುವುದು ನೆಲೆಗೊಂಡ ಮಾತಾಗಿದೆ. ಮೂರು ಸಾವಿರಗಳಷ್ಟು ಹಿಂದಿನ ಇತಿಹಾಸವು ಈ ಶತಮಾನದ ಕೊನೆಯಲ್ಲಿ ಪುನರಾವರ್ತನಗೊಳ್ಳುತ್ತಲಿದೆ- ಎಂಬುದನ್ನು ಕಾದಂಬರಿಕಾರರು ಅಲ್ಲಲ್ಲಿ ಸೂಕ್ಷ್ಮವಾಗಿ ತೋರಿಸಿಕೊಟ್ಟಿದ್ದಾರೆ. ಓದುಗರು ಈ ಅಂಶವನ್ನೂ ಗಮನದಲ್ಲಿರಿಸಿಕೊಳ್ಳಬೇಕು.

ಪರಿಣಾಮವಾಗಿ ಇದೊಂದು ಮಾಮೂಲಿಯ, ನೇರ ಕಥಾನಕದ ಕಾದಂಬರಿಯಾಗಿಲ್ಲ, ವೈಚಾರಿಕ ಪಾತಳಿಯಲ್ಲಿ ಸಾಗಿದೆ. ಶ್ರೀಕೃಷ್ಣನೇ ಮೊದಲಾದ ಹಲವಾರು ಪಾತ್ರಗಳ ಬಗ್ಗೆ ನಮಗಿರುವ ಪರಂಪರಾಗತ ಅಭಿಪ್ರಾಯಗಳನ್ನು ಬುಡಮೇಲು ಮಾಡುವ ರೀತಿಯಲ್ಲಿ ಖಂಡಿಸಬೇಕು ಎನ್ನುವ ರೀತಿಯಲ್ಲಿಯೂ 'ಸಂಚು' ಕಾದಂಬರಿಯು ವಿಚಾರಪ್ರಚೋದಕವಾಗಿದೆ.

● ಸಂಗ್ರಾಹಕ

ರಾಣಿ'ಯಾಗಲೇ ಇಲ್ಲ. ಒಮ್ಮೆಲೆ ರಾಜಮಾತೆಯಾದ ಉತ್ತರಾದೇವಿ ಶ್ರಾದ್ಧದ ದಿನಗಳಲ್ಲಿ ವಿಮನಸ್ಕಳಾಗುತ್ತಿದ್ದಳು. ಐವತ್ತನ್ನು ದಾಟಿದ್ದರೂ ಇನ್ನೂ ಪ್ರೌಢ ಯುವತಿಯಂತೆ ಕಾಣುತ್ತಿದ್ದ ಅವಳು ಒಮ್ಮೆ ಮಾತ್ರ ಅರಳಿ, ಹೂಬಿಟ್ಟ ಬಳ್ಳಿಯಾಗಿದ್ದಳು. ಯುದ್ಧವಿರದ ಶಾಂತಿ ಕಾಲದಲ್ಲಿ ರಾಣಿಯರು ಉಲ್ಲಾಸದಿಂದ ಓಡಾಡುವುದನ್ನು ನೋಡಲು ಅವಳು ದೂರ ಹೋಗಬೇಕಾಗಿರಲಿಲ್ಲ. ತನ್ನ ಮೂವರು ಸೊಸೆಯಂದಿರು ಅದರಲ್ಲೂ ಪಟ್ಟ ಮಹಿಷಿ ವಸುಂಧರಾ ತನಗಿಂತಲೂ ಹೆಚ್ಚು ಗಾಂಭೀರ್ಯದಿಂದ ಆದರೂ ಉಲ್ಲಾಸದಿಂದ ವರ್ತಿಸುವುದನ್ನು ಕಂಡು ಕರುಬಿದ್ದಳು ಕೂಡ. ಆದರೆ ಇಲ್ಲದ ಗಾಂಭೀರ್ಯವನ್ನು ಮೊಗದ ಮೇಲೆ ತಂದುಕೊಂಡು ಮನಸ್ಸಿನೊಳಗೇ, ಎಂದೋ ತೀರಿಹೋದ ಅಭಿಮನ್ಯುವಿನೊಡನೆ ಚಕ್ಕಂದವಾಡುತ್ತಿದ್ದಳು.

ನಾತೆಯಲ್ಲಿ ಅತ್ತೆಯಾಗಬೇಕಾದ ದ್ರೌಪದಿಯ ಬಗೆಗೂ ಅವಳಿಗೆ ಅಸೂಯೆ. ಅವಳಂತೆ ತನಗೂ ಐವರು ಅಭಿಮನ್ಯುಗಳು ಇದ್ದಿದ್ದರೆ? ಒಬ್ಬ ಅಭಿಮನ್ಯು ಚಕ್ರವ್ಯೂಹಕ್ಕಾದರೆ ಇನ್ನುಳಿದವರು ಪ್ರೇಮವ್ಯೂಹದಲ್ಲಿ ಇರಬಹುದಾಗಿತ್ತಲ್ಲ! ಆದರೆ ಅವಳು ಐದು ಬೇರೆ ಬೇರೆ ಪುರುಷರನ್ನೇನೂ ಊಹಿಸಿಕೊಳ್ಳುತ್ತಿರಲಿಲ್ಲ. ತನ್ನ ಅಭಿಮನ್ಯುವೇ ಐದು ಸಲ ಕಾಣಿಸಿಕೊಳ್ಳಬೇಕೆಂದು ಅವಳ ಹಂಬಲ. ಹಾಗೆ ನೋಡಿದರೆ, ದೈತ್ಯರಂಥ ಐದು ಗಂಡಂದಿರನ್ನು ಸೇರಿಕೊಂಡ ದ್ರೌಪದಿ ಒಬ್ಬ ಪೂಜ್ಯ ವ್ಯಕ್ತಿಯಾಗಿ ಎಂದೂ ಅವಳಿಗೆ ತೋರಲಿಲ್ಲ. ಅದರಂತೆ ಅತ್ತೆಯ ಅತ್ತೆ ಕುಂತಿಯ ಚರಿತ್ರೆಯೂ ಅಭಿಮಾನವನ್ನು ತರಿಸಲಿಲ್ಲ. 'ತಾನು ಈ ಅಪವಿತ್ರ ಪರಂಪರೆಯವಳಲ್ಲ, ಸುಭದ್ರ ಶೀಲದ ಸುಭದ್ರೆಯ ಸೊಸೆ' ಎಂದು ಸಮಾಧಾನವನ್ನೂ ಪಟ್ಟುಕೊಂಡಿದ್ದಾಳೆ. ಶೀಲವೇ ಇಲ್ಲದ ಈ ಹಿರಿಯರೆಲ್ಲ ಧರ್ಮ ಸ್ಥಾನದಲ್ಲಿ ನಿಂತದ್ದಾದರೂ ಹೇಗೆ ಎಂದು ಸೋಜಿಗಗೊಂಡಿದ್ದಾಳೆ.

ಶ್ರಾದ್ಧದ ದಿನಗಳಲ್ಲಿ ಅವಳು ಸ್ವಚ್ಛಂದ ಚಿಂತನೆಯಲ್ಲಿ ತೊಡಗುತ್ತಾಳೆ. ಜೀವನದುದ್ದಕ್ಕೂ ತಾನು ಪಡೆದದ್ದೆಷ್ಟು, ತನ್ನಂತೆಯೆ ಪತಿಯನ್ನು ಕಳೆದುಕೊಂಡಿದ್ದ ದುರ್ಯೋಧನ ಪತ್ನಿ ಭಾನುಮತಿಗೆ ದೊರಕಿದ್ದೆಷ್ಟು ಎಂದು ಯೋಚಿಸುತ್ತಾಳೆ. ಅಭಿಮನ್ಯುವಿನ ಅಪ್ಪಂದಿರಿಗೆ ಯುದ್ಧ ಅನಿವಾರ್ಯವೆಂದು ಗೊತ್ತಿತ್ತಲ್ಲವೆ? ಹಾಗಿದ್ದಾಗ ಯುದ್ಧ ಮುಗಿದ ಮೇಲೆಯೇ ಅವನ ವಿವಾಹ ಮಾಡಬಹುದಿತ್ತಲ್ಲವೆ? ಆಗ ತನ್ನ ಜೀವನದ ಉತ್ತಮ ಭಾಗವನ್ನೆಲ್ಲ ಗಂಡನ ಶ್ರಾದ್ಧ ಮಾಡುವುದರಲ್ಲಿ ಕಳೆಯುವುದಾಗುತ್ತಿರಲಿಲ್ಲ. ಅಂತೂ ಈಗ ಅರವತ್ತನ್ನು ಸಮೀಪಿಸುತ್ತಿದ್ದ ಉತ್ತರೆಯು ನಲ್ವತ್ತೈದರ ಮಗ ಹಾಗು ಹದಿನೈದರ ಗಂಡನೊಡನೆ ಏಕಕಾಲಕ್ಕೆ ಜೀವಿಸುವುದನ್ನು ಅಭ್ಯಾಸ ಮಾಡಿಕೊಂಡಿದ್ದಳು.

ತಂದೆ ಅಭಿಮನ್ಯುವಿನ ವರ್ಷಶ್ರಾದ್ಧದ ಐದು ದಿನಗಳ ಸಮಾರಾಧನೆಯನ್ನು ಪೂರೈಸಿದ ಪರೀಕ್ಷಿತರಾಜನು ಈ ದಿನ ಉಳಿದ ಕಕ್ಕಂದಿರಿಗೆ- ಎಂದರೆ ಅಶ್ವತ್ಥಾಮನಿಂದ ಹತರಾದ ಉಪಪಾಂಡವರಿಗೆ- ಪಿಂಡಪ್ರದಾನ ಮಾಡುವ ತಿಥಿ ಬಂದಿತ್ತು. ಈ ಸಮಾರಾಧನೆಗೆಂದೇ ದೂರದಿಂದ ಬಂದಿದ್ದ ಕುಲಪತಿ ಕೀರ್ತಿಶರ್ಮರು ಮರಳಿ ಹೊರಟುನಿಂತಿದ್ದರು. ಬಳಿಯಲ್ಲೇ ರಾಜಪುರೋಹಿತರಾದ ಸತ್ಯಾಶ್ರಯರು, ಪರೀಕ್ಷಿತರಾಜ, ಉತ್ತರಾದೇವಿ- ಮತ್ತಿತರ ಪರಿವಾರದವರು

ನೆರೆದಿದ್ದರು. ವಾತಾವರಣ ಗಾಂಭೀರ್ಯದಿಂದ ಕೂಡಿದ್ದಿತು. ಆಗ ಕೀರ್ತಿಶರ್ಮರು ಹೇಳಿದರು:

"ಇಲ್ಲಿಗೆ ಬಂದಾಗ ಪುನೀತರ ಭೆಟ್ಟಿಯೂ ಆದೀತೆಂದು ತಿಳಿದಿದ್ದೆವು. ಅವರನ್ನು ಕಂಡೇ ಮುಂದಕ್ಕೆ ಪ್ರಯಾಣ ಬೆಳೆಸಬೇಕೆಂಬ ಸಂಕಲ್ಪ. ಅದೇಕೋ ಬಲಗೊಳ್ಳುತ್ತಿದೆ."

ಆಗ ಪರೀಕ್ಷಿತರಾಜನು, "ಕುಲಪತಿಗಳು ಇಲ್ಲಿಗೆ ಬರುವುದು ಗೊತ್ತಿದ್ದೂ ಅವರು ಬರಲಿಲ್ಲ, ಬಿಡಲಿ. ಆದರೆ ಹಿರಿಯರಾಗಿ ತಾವು ಅಲ್ಲಿಯವರೆಗೂ ಹೋಗಬೇಕಾದ ಪ್ರಮೇಯ ಅರ್ಥವಾಗಲಿಲ್ಲ" ಎಂದು ನುಡಿದನು. ತನ್ನ ಹಿರಿಯರಾದ ಪಾಂಡವರನ್ನು ಕುರಿತು ಜಗತ್ತೇ ಹಾಡಿಹೊಗಳುತ್ತಿರುವಾಗ ಈ ಪುನೀತನೊಬ್ಬ ಅಪಸ್ವರವನ್ನು ಎತ್ತುತ್ತ ಇದ್ದಾನೆ- ಎಂದು ಅವನಿಗೆ ಅನಿಸಿದ್ದಿತು.

ಆಗ ಕುಲಪತಿಗಳನ್ನುದ್ದೇಶಿಸಿ ಉತ್ತರೆ ಕೇಳಿದಳು, "ತಮ್ಮೊಡನೆ ನಾನೂ ಪ್ರಯಾಣ ಮಾಡಬಹುದೋ? ಸುಮ್ಮನೆ ಇಲ್ಲಿ ಉಳಿದುಕೊಂಡು ನನಗೂ ಬೇಸರ. ನಾನೂ ಬಂದರೆ ಅಭ್ಯಂತರವಿಲ್ಲ ತಾನೆ?"

*

"ಈ ಅನಿರೀಕ್ಷಿತ ಭೆಟ್ಟಿಯಿಂದ ಸಂತೋಷವಾಗಿದೆ ನಿಜ. ಆದರೆ ಅದಕ್ಕಿಂತ ಹೆಚ್ಚು ಸೋಜಿಗವಾಗಿದೆ. ಮುಖ್ಯತಃ ರಾಜಮಾತೆಯವರು ನಮ್ಮ ಕುಟೀರಕ್ಕೆ ಬಂದದ್ದು ಇದೇ ಪ್ರಥಮ ಬಾರಿ. ತಾಯಿ, ನೀವಿರುವಷ್ಟು ದಿನವೂ ನಮ್ಮ ಶಿಷ್ಯರು ತಮ್ಮ ನೆರವಿಗಿದ್ದಾರೆ," ಎಂದು ಪುನೀತರಾಗಿ ನುಡಿದು ಕುಲಪತಿಗಳತ್ತ ಹೊರಳಿದರು.

"ಈ ಭೆಟ್ಟಿಯಲ್ಲಿ ಕುಲಪತಿಗಳು ಯಾವ ವಿಷಯವನ್ನು ಚರ್ಚಿಸಬೇಕೆಂದಿದ್ದಾರೆ?"

"ನಾನು ಹೊರಟಾಗ ಇಂಥದೇ ವಿಷಯ ಎಂದುಕೊಂಡಿರಲಿಲ್ಲ. ಆದರೆ ನನ್ನ ಸಂಗಡ ಪಾರ್ಥ ಸೊಸೆಯೂ ಬಂದಿದ್ದಾರಲ್ಲವೆ, ನಾವೂ ನೀವೂ ತುಸು ಚರ್ಚಿಸಿಬಿಟ್ಟಿದ್ದ ಹಳೆಯ ವಿಷಯವೇ ಇದೆಯಲ್ಲ."

"ರಾಜಮಾತೆಯ ಸಮ್ಮುಖದಲ್ಲಿ ಅವರ ಮನೆತನದ ವಿಷಯವನ್ನು ಚರ್ಚಿಸುವುದು ಸಮಂಜಸವಾದೀತೆ?"

"ಯಾರು ಉಪಸ್ಥಿತರಿದ್ದಾರೆ ಎನ್ನುವುದರ ಮೇಲೆ ನಿಮ್ಮ ತರ್ಕವೇನೂ ಬದಲಾಗುವುದಿಲ್ಲ. ರಾಜಮಾತೆ ಕುರುಕ್ಷೇತ್ರದ ಕಹಿಯನ್ನುಂಡವರು. ಆ ಕಹಿಯ ಮುಂದೆ ನಿಮ್ಮ ಬಿರುನುಡಿಗಳು ಹೆಚ್ಚಿನ ವಿರಸಕ್ಕೆ ಕಾರಣವಾಗಬೇಕಿಲ್ಲ. ಅಲ್ಲದೆ ಅವರಾದರೂ ಸತ್ಯಾಸತ್ಯತೆಯ ಶೋಧದಲ್ಲೇ ಇದ್ದಾರೆ. ಅದಕ್ಕಾಗಿ ಈ ಅವಕಾಶವನ್ನು ಹುಡುಕಿಕೊಂಡು ಬಂದಿದ್ದಾರೆ."

ರಾಜಪುರೋಹಿತ ಸತ್ಯಾಶ್ರಯರು ಆ ನಡುವೆ ಬಾಯಿ ಹಾಕಿದರು:

"ಉತ್ತರಾದೇವಿಯವರೇ ನೀವೇ ಹೇಳಿರಿ. ಪಾಂಡವರ ವಿಜಯ ಧರ್ಮದ ವಿಜಯ ಎನ್ನುವ ಕುಲಪತಿಗಳು ಇಲ್ಲಿ ಇದ್ದಾರೆ. ವಿಜಯಕ್ಕೂ ಧರ್ಮಕ್ಕೂ ಸಂಬಂಧವೇ ಇಲ್ಲ ಎಂದು ಸಾಧಿಸಹೊರಟಿರುವ ಪುನೀತರೂ ನಮ್ಮೆದುರಿಗಿದ್ದಾರೆ. ಯಾರದು ತಪ್ಪು, ಯಾರದು ಸರಿ?"

ರಾಜಮಾತೆ ಹೇಳಿದಳು:

"ಕುಲಪತಿಗಳೇ, ಪುನೀತರ ವಾದವನ್ನು ತಾವು ಹೇಗೆ ಖಂಡಿಸಿದರೂ ನಮಗೆ ಸಂತೋಷವೇ. ಆಗ ಕುರುವಂಶದ ವಿಷಯ ಕೂಲಂಕಷವಾಗಿ ಚರ್ಚೆಗೆ ಬಂದರೆ ನಮಗೆ ಎರಡು ರೀತಿಯಲ್ಲಿ ಲಾಭ. ನಮ್ಮ ವಂಶದ ಇತಿಹಾಸ ಕಣ್ಣೆದುರು ಬಂದೀತು. ಚರ್ಚೆಯ ಇತ್ಯರ್ಥದಲ್ಲಿ ಧರ್ಮಾಧರ್ಮದ ಸ್ಪಷ್ಟ ಚಿತ್ರಣವೂ ಆದೀತು."

ಪುನೀತರು ಹೇಳತೊಡಗಿದರು:

"ಒಂದು ಕಾಲದಲ್ಲಿ ಶಂತನು ಎಂಬೊಬ್ಬ ಚಕ್ರವರ್ತಿ ಇದ್ದ. ಅವನಲ್ಲಿ ರಾಜನಾಗುವ ಯಾವ ಯೋಗ್ಯತೆಯೂ ಇರಲಿಲ್ಲ. ಶಂತನುವಿನ ಮುಖ್ಯ ಕಾರ್ಯವೆಂದರೆ ರಾಜ್ಯದ ಗಡಿಯನ್ನು ದಾಟಿ ಹೋಗಿ ಬೇಟೆಯಾಡುವ ನೆಪದಲ್ಲಿ ಗುಡ್ಡಗಾಡು ಜನಾಂಗದ ಪಕ್ವ ಕನ್ಯೆಯರನ್ನು ಕೂಡಿಕೊಳ್ಳುವುದು. ಆದರೆ ಆರೋಗ್ಯವಂತ ಮಕ್ಕಳು ಹುಟ್ಟುವಂತಹ ವಯಸ್ಸಾಗಲೀ ಶರೀರ ದಾರ್ಢ್ಯವಾಗಲಿ ಅವನಿಗೆ ಉಳಿದಿರಲಿಲ್ಲ. ಗಂಗಾ ಎಂಬ ಸ್ತ್ರೀಯೊಡನೆ ಕೂಡಿದಾಗ, ಒಂದಲ್ಲ ಒಂಬತ್ತು ಭ್ರೂಣಹತ್ಯೆಗಳಾದುವು. ಇತ್ತ ಶಂತನುವಿಗೆ ಅರಮನೆಯಲ್ಲಿಯೂ ಸಂತಾನವಿರಲಿಲ್ಲ. ಈ ನದಿ ತೀರದ ಸಂಸಾರದಲ್ಲೂ ಮಕ್ಕಳಿಲ್ಲ.

"ಒಂದಾದರೂ ಸದೃಢ ಮಗುವನ್ನು ಹೆತ್ತು ನನಗೆ ಕೊಡಬಾರದೆ?" ಎಂದು ಶಂತನು ಗಂಗೆಗೆ ಅಂಗಲಾಚಿದ. ಅವಳಿಗೂ ಹುಟ್ಟಿದ ನಿರ್ಜೀವ ಕೂಸುಗಳನ್ನು ನದಿಗೆ ಎಸೆದು ಎಸೆದು ಸಾಕಾಗಿತ್ತು. ಈ ಸಲ ನವಮಾಸ ತುಂಬಿ ಒಂದು ಆರೋಗ್ಯವಂತ ಕೂಸಿಗೆ ಜನ್ಮವಿತ್ತಳು. ಶಂತನು ರಾಜಧಾನಿಯಿಂದ ಧಾವಿಸಿ ಬಂದ. ಗಂಗಾ ಹೇಳಿದಳು:

"ಪ್ರಭೂ, ನಿಮ್ಮ ಮಗುವನ್ನು ರಾಜಧಾನಿಗೆ ಕರೆದೊಯ್ದು ಅಲ್ಲಿಯೆ ಅವನನ್ನು ಬೆಳೆಸಬೇಕು. ಅಂದಾಗಲೇ ರಾಜಕುಮಾರನಾಗಿ ಶೋಭಿಸಿಯಾನು."

ರಾಜನಿಗೂ ಆ ಮಾತು ಒಪ್ಪಿಗೆಯಾಯಿತು. ಗಂಗಾಸುತನನ್ನು ಕರೆದೊಯ್ದನು. ಕೆಲದಿನಗಳ ಮೇಲೆ ನದಿ ತೀರಕ್ಕೆ ಬಂದಾಗ ಗಂಗಾ ಇರಲಿಲ್ಲ. ಅಪವಿತ್ರ ದೇಹವನ್ನು ಮತ್ತೆ ರಾಜನಿಗೆ ಉಣಬಡಿಸಬಾರದೆಂಬ ನಿಯತ್ತು ಆ ಆದಿವಾಸಿ ಮಹಿಳೆಗೂ ಇದ್ದಿತೆಂದು ತೋರುತ್ತದೆ. ನೋಡನೋಡುತ್ತ ಗಂಗಾಸುತ ಪ್ರಬುದ್ಧನಾಗತೊಡಗಿದ. ಇತ್ತ ಶಂತನು ತನ್ನ ಎಂದಿನ 'ಬೇಟೆ'ಗಾಗಿ ಹೊರಟಾಗ ಬೆಸ್ತರ ಬೆಡಗಿಯೊಬ್ಬಳು ಕಣ್ಣಿಗೆ ಬಿದ್ದಳು. ಅವಳೇನೂ ಬೆಸ್ತರವನ ಮಗಳು ಮಾತ್ರವಾಗಿ ಉಳಿದಿರಲಿಲ್ಲ. ಪರಾಶರನೆಂಬ ವಿದ್ವಾಂಸನು ಅವಳ ರುಚಿನೋಡಿಯಾಗಿತ್ತು. ಆ ರುಚಿಯ ಕುರುಹಾಗಿ ಕೃಷ್ಣದ್ವೈಪಾಯನನೆಂಬ ಬಾಲಕ ಪರಾಶರನ ಬಳಿಯೇ ಇದ್ದ. ಈ 'ಕನ್ಯೆ' ಗಂಗೆಯಂತೆ ಮುಗ್ಧಳಾಗಿರಲಿಲ್ಲ. ರಾಜ್ಯ, ರಾಜಧಾನಿ, ರಾಜಕಾರಣಗಳ ಸ್ಪಷ್ಟ ಕಲ್ಪನೆಯೂ ಅವಳಿಗಿದ್ದಿತು.

ಶಂತನು ತನ್ನನ್ನು ಬಯಸಿ ಬಂದಾಗ ಅಳುಕದೆ ತನ್ನನ್ನು ಸರಿಯಾದ ಬೆಲೆಗೆ ಮಾರಿಕೊಳ್ಳಲು ಸಿದ್ಧಳಾದಳು:

"ನಾನೇ ರಾಣಿಯಾಗಬೇಕು. ಬೇರೆ ರಾಣಿಯರನ್ನು ತರಕೂಡದು."

"ಓಹೋ, ನೀನು ಬಂದರೆ ಉಳಿದವರು ಬೇಡವೇ ಬೇಡ."

"ನನ್ನ ಮಕ್ಕಳೇ ಪಟ್ಟವನ್ನೇರಬೇಕು."

ಆಗ ಮಾತ್ರ ಶಂತನು ಮೌನ ತಾಳಿದ. ಶೂರ ಯೋಧನಾಗಿ ಬೆಳೆದಿದ್ದ ಗಂಗಾಸುತ ಇದ್ದನಲ್ಲವೆ, ಎರಡು ದಿನಗಳ ಬಳಿಕ ಶಂತನು ರಾಜಧಾನಿಗೆ ಮರಳಿ ಮಂತ್ರಿಗಳ ಮುಖಾಂತರ ಮಗನಿಗೆ ವಿಷಯ ತಿಳಿಯುವಂತೆ ಮಾಡಿದ.

ಬೆಸ್ತರಾಕೆ ಗಂಗಾಸುತನನ್ನು ಕೇಳಿದಳು: "ಈಗೇನೋ ನೀನು ಅರಸೊತ್ತಿಗೆ ಬೇಡ ಎನ್ನಬಹುದು. ನಾಳೆ ನೀನು ಮದುವೆಯಾಗಿ, ನಿನಗೆ ಮಕ್ಕಳು ಹುಟ್ಟಿ ಅವರು ತಮ್ಮ ಹಕ್ಕನ್ನು ಚಲಾಯಿಸತೊಡಗಿದರೆ ವೃದ್ಧನಾದ ನೀನೇನು ಮಾಡೀಯ?"

"ಆಯ್ತು, ಬ್ರಹ್ಮಚಾರಿಯಾಗಿಯೇ ಉಳಿಯುವೆ," ಎಂದು ಪ್ರತಿಜ್ಞೆ ಮಾಡಿದ. ಹೀಗೆ ಗಂಗಾಸುತ 'ಭೀಷ್ಮ' ಆದದ್ದರಲ್ಲಿ, ಹೊಗಳಿಕೆಯನ್ನು ಗಳಿಸುವ ಆತ್ಮಾಭಿಮಾನವೂ ಸಾಕಷ್ಟು ಕೆಲಸ ಮಾಡಿತು....

ಪುನೀತರ ಈ ಹಿಂದಿನ ಘಟನೆಗಳ ಅರ್ಥೈಸುವಿಕೆ ಹೀಗೇ ಮುಂದುವರೆಯಿತು. ಧೃತರಾಷ್ಟ್ರ-ಗಾಂಧಾರಿಯರ ಹಾಗೂ ಪಾಂಡು ಮತ್ತು ಪತ್ನಿಯರ ಸಂಸಾರದ ದುರ್ಯೋಧನ, ಧರ್ಮಾದಿಗಳ ಹುಟ್ಟಿನ ಹಿನ್ನೆಲೆಯನ್ನೂ ತಮ್ಮದೇ ಆದ ರೀತಿಯಲ್ಲಿ ವಿವರಿಸುತ್ತ ಹೋದರು.

"ಧೃತರಾಷ್ಟ್ರ, ಪಾಂಡುರಾಜರು, ಒಂದು ದೊಡ್ಡ ಪಾಠಶಾಲೆ ನಡೆಸುವಷ್ಟು ಮಕ್ಕಳನ್ನು ಪಡೆದಿದ್ದರಷ್ಟೆ. ಆ ಪಾಠಶಾಲೆಗೆ ದ್ರೋಣಾಚಾರ್ಯನನ್ನು ತರಲಾಯಿತು. ನಿಮ್ಮ ಸತ್ಯಾಶ್ರಯರಂತೆ ಕೇವಲ ಅಕ್ಷರ ವಿದ್ಯೆ ಕಲಿಸದೆ, ಕ್ಷತ್ರಿಯರಿಗೆ ಮುಖ್ಯವಾಗಿ ಬೇಕಾದ ಯುದ್ಧ ಕಲೆಯನ್ನು ಕಲಿಸಲು ಸಮರ್ಥರಿದ್ದರು. ಹಾಗೆ ಕಲಿಸುವಾಗ ದ್ರೋಣನ ಮುಂದೆ ಒಂದು ಗುರಿ ಇದ್ದಿತು. ತನಗೆ ಅವಮಾನಿಸಿದ ದ್ರುಪದರಾಜನ ಮೇಲೆ ಇವರುಗಳಿಂದ ಸೇಡು ತೀರಿಸಿಕೊಳ್ಳಬೇಕು ಎಂಬುದು. ಬಾಲ್ಯದಲ್ಲಿ ಬಡವರು ಗೆಳೆಯರಾಗಬಹುದು. ಆದರೆ ಮುಂದೆ ಅವರಲ್ಲೊಬ್ಬ ಉಚ್ಚ ಸ್ಥಾನಕ್ಕೆ ಏರಿದಾಗ, ಆ ಇನ್ನೊಬ್ಬ ಯಃಕಶ್ಚಿತನನ್ನು ಗೆಳೆಯನೆಂದು ಒಪ್ಪಲಾರ ಎನ್ನುವ ವ್ಯಾವಹಾರಿಕ ಬುದ್ಧಿ ಆ ಪಂಡಿತ ಬ್ರಾಹ್ಮಣನಿಗೆ ತಿಳಿಯಲಿಲ್ಲ. ಹಾಗೆ ನೋಡಿದರೆ ಕೊನೆಯವರೆಗೂ ಅವನು ಅವ್ಯವಹಾರಿಯಾಗಿಯೇ ಬಾಳಿದ.

"ಭಿಲ್ಲರ ದೊರೆ ಏಕಲವ್ಯನ ಕುರಿತ ಅವನ ವರ್ತನೆಯೂ ತೀರ ಅಸಹಜವಾದದ್ದು. ಯಾವುದನ್ನು ದ್ರೋಣನು ಪ್ರಯತ್ನಪೂರ್ವಕವಾಗಿ ರಾಜಕುಮಾರರಿಗೆ ಕಲಿಸಬೇಕಿತ್ತೋ ಆ ಬಿಲ್ಲುಗಾರಿಕೆ ಬೇಡರವನಿಗೆ ಸಹಜವಾಗಿ ಕರಗತವಾಗಿತ್ತು. ಆದಾಗ್ಯೂ ದಲಿತನಾದ ಏಕಲವ್ಯನು ಸ್ವಪ್ರತಿಷ್ಠೆಗಾಗಿ ದ್ರೋಣನನ್ನು ತನ್ನ ಗುರು ಎಂದು ಹೇಳತೊಡಗಿದ. ಭಿಲ್ಲರ ವಿದ್ಯೆಯನ್ನು ತನ್ನ ಶಿಷ್ಯರಿಗೆ ಕಲಿಸಿ ಆ ವಿದ್ಯೆಯಲ್ಲಿ ಅವರನ್ನು ಇನ್ನಷ್ಟು ಪಳಗಿಸಬಹುದೆಂಬುದನ್ನು ಗಮನಿಸದೆ ಏಕಲವ್ಯನನ್ನು ಶಿಕ್ಷಿಸಿದನಲ್ಲವೆ... ತನ್ನ ಮಗ ಅಶ್ವತ್ಥಾಮ ಅತ್ಯಂತ ಪರಾಕ್ರಮಿ ಎಂಬುದನ್ನು ಬಲ್ಲ ದ್ರೋಣನು, 'ಅಶ್ವತ್ಥಾಮ ಮಡಿದ' ಎಂದು ಕೇಳಿಸಿಕೊಂಡಾಕ್ಷಣ ತನ್ನ ರುಂಡವನ್ನು ಹಾರಿಸುವುದಕ್ಕೆ ಅನುವು ಮಾಡಿಕೊಟ್ಟ. ಅಷ್ಟು ಸುಲಭವಾಗಿ ತನ್ನ ಮಗ ಸಾಯಲಾರ- ಎನ್ನುವ ಯುಕ್ತಾಯುಕ್ತತೆ ಕಿಂಚಿತ್ತಾದರೂ ತೋರಬೇಡವೆ? ಅತ್ತ ಕ್ಷತ್ರಿಯರಂತೆ ಯುದ್ಧ ಮಾಡುವುದನ್ನೂ ಬಿಡಲಿಲ್ಲ. ಇತ್ತ ದ್ವಿಜರಂತೆ 'ಸಾವೆಂದರೆ ಶರೀರದ ಒಂದು ಸ್ಥಿತಿ' ಎನ್ನುವ ಪರಿಜ್ಞಾನವನ್ನೂ ತೋರಲಿಲ್ಲ. ದ್ರುಪದ, ಏಕಲವ್ಯ, ಅಶ್ವತ್ಥಾಮ ಯಾರ ವಿಷಯವೇ ಇರಲಿ. ಬಲುಬೇಗ ಭಾವನಾವಶನಾಗಿ ವಿವೇಕರಹಿತನಾಗಿ ನಡೆದುಕೊಂಡ- ಈ ದ್ರೋಣ."

ಉತ್ತರಾದೇವಿ ಹೇಳಿದಳು:

"ದ್ರೋಣಾಚಾರ್ಯರ ಕತೆ ಗೌಣ. ನಾವು ನಿರ್ಧರಿಸಬೇಕಾದದ್ದು ಕುರುರಾಜರುಗಳ ನಡತೆಯನ್ನು. ಅದನ್ನು ಮುಂದುವರಿಸಬೇಕು."

"ಆಗಲಿ. ಎಲ್ಲ ಬಾಲಕರಂತೆ ಕೌರವರೂ ಪಾಂಡವರೂ ಬೆಳೆದರು. ಬೇರೆ ಬೇರೆ ಮನೆಗೆ ತೆರಳುವ ಆ ಮಕ್ಕಳಲ್ಲಿ ಎರಡು ಗುಂಪುಗಳಾಗಿ ಆಗಾಗ ಘರ್ಷಣೆಯಾಗುತ್ತಿದ್ದರೆ ಅದು ಸಹಜವೇ. ದುರ್ಯೋಧನಾದಿಯಾಗಿ ಕೌರವರೆಲ್ಲ ಸೇರಿದರೆ, ಐದು ಪಾಂಡುಪುತ್ರರನ್ನು ಶಿಕ್ಷಿಸಬಹುದಾಗಿತ್ತು. ಆದರೆ ಅಧಿಕೃತ ರಾಜನ ಮಕ್ಕಳೆಲ್ಲ ಸೇರಿ ಸದೆಬಡೆದರೆಂಬ ಕೆಟ್ಟ ಹೆಸರು ಬಾರದಂತೆ ಭೀಷ್ಮ ಹಾಗೂ ದ್ರೋಣರು ಶ್ರಮಿಸುತ್ತಿದ್ದರು. ಈ ಅಲ್ಪಸಂಖ್ಯಾತರಿಗೆ ಕೊಟ್ಟ ವಿಶೇಷ ರಕ್ಷಣೆಯಿಂದ ಕೌರವರು ಕ್ರಮೇಣವಾಗಿ ಪಾಂಡುಪುತ್ರರನ್ನು ದ್ವೇಷಿಸತೊಡಗಿದರು. ಇಲ್ಲದಿದ್ದರೆ ದೂರದ ಕರ್ಣನ ಸಖ್ಯ ಬೆಳೆಸಿದ ದುರ್ಯೋಧನನು ತನ್ನ ಚಿಕ್ಕಪ್ಪನ ಮಕ್ಕಳೊಡನೆ ಸ್ನೇಹದಿಂದ ಇರದೇ ಇರಲು ಕಾರಣವಿರಲಿಲ್ಲ.

"ಬಾಲಕರು ತರುಣರಾದರು. ಮುಗ್ಧ ಜಗಳಗಳು ಮರ್ಮದ ಕಾಳಗಗಳಾದವು. ಒಬ್ಬರ ಪ್ರಾಣವನ್ನು ಇನ್ನೊಬ್ಬರು ತೆಗೆಯಬೇಕೆನ್ನುವಷ್ಟರ ಮಟ್ಟಿಗೆ ಕೈ ಕೈ ಮಿಲಾಯಿಸಿ ಕಾದತೊಡಗಿದರು.

ಬೆಳೆದು ನಿಂತ ತರುಣರನ್ನು ವಿಧಾಯಕ ಕೆಲಸದಲ್ಲಿ ತೊಡಗಿಸದಿದ್ದರೆ ಅಡ್ಡದಾರಿ ಬೀಳುವ ವಯಸ್ಸದು.

ಜಗಳ ಅತಿರೇಕಕ್ಕೆ ಬಂದಾಗ ಧೃತರಾಷ್ಟ್ರನೇ ತನ್ನ ಪರ ಊರಿನ ಬೇಸಿಗೆಯ ನಿವಾಸವೊಂದರಲ್ಲಿ ಪಾಂಡವರನ್ನು ಇಟ್ಟಿದ್ದ. ಅವರು ಅಲ್ಲಿಗೆ ಇರಲಿಕ್ಕೆ ಹೋಗುವಾಗ ಕೌರವರು ಕೋಪದಲ್ಲಿ ನುಡಿದದ್ದೂ ಉಂಟು. 'ನೀವು ಎಲ್ಲಿಯೇ ಇರಲಿ ಆ ಮನೆಗೇ ಬೆಂಕಿ ಇಡುತ್ತೇವೆ' ಎಂದು. ಪಾಂಡವರಿಗೆ ಈ ಹೆದರಿಕೆ ಇತ್ತು. ಅವರು ಬೆಂಕಿ ಇಡುವ ಮೊದಲು ತಾವೇ ಇಟ್ಟುಬಿಟ್ಟರೆ ಅಪಖ್ಯಾತಿ ಸರಿಯಾಗಿಯೇ ದುರ್ಯೋಧನನ ಪಂಗಡದವರಿಗೆ ಬರುವದೆಂಬ ಕುಂತಿಯ ಬುದ್ಧಿವಾದ ಪಾಂಡವರಿಗೆ ಹಿಡಿಸಿತ್ತು. ಒಂದು ರಾತ್ರಿ ಅವರೆಲ್ಲ ಮನೆಬಿಟ್ಟು ತಾವೇ ಮನೆಗೆ ಅಗ್ನಿಯನ್ನಿಟ್ಟುಬಿಟ್ಟರು. ಧೃತರಾಷ್ಟ್ರನ ರಾಜ್ಯದಲ್ಲಿ ತಮ್ಮ ಜೀವಿತಗಳಿಗೆ ಎಂದಿಗೂ ರಕ್ಷಣೆ ಇಲ್ಲ ಎಂಬ ಬಲವಾದ ಭಾವನೆ ಅವರಲ್ಲಿ ಬೇರೂರಿತ್ತು.

ರಾಜಕಾರಣವೆಂದರೆ ಅದೇ ಅಲ್ಲವೆ? ಬೇಡವಾದವರನ್ನು ಮುಗಿಸಿಬಿಡುವುದೂ ರಾಜನೀತಿಜ್ಞನ ಬಳಕೆಯಲ್ಲಿರುವ ಅಸ್ತ್ರವೆಂದ ಮೇಲೆ ಆ ಸಂಭವನೀಯ ಸಂಗತಿಯನ್ನು ಅಲ್ಲಗಳೆಯುವುದೂ ಸಾಧ್ಯವಿರಲಿಲ್ಲ. ಪಾಂಡವರು ಪಾಂಚಾಲ ರಾಜ್ಯದಲ್ಲಿಯ ಪಟ್ಟಣವೊಂದರಲ್ಲಿ ಅಜ್ಞಾತವಾಸಿಗಳಾಗಿಯೇ ಇರತೊಡಗಿದಾಗ ಬಕಾಸುರನೆಂಬ ಆಸುರೀ ವೃತ್ತಿಯವನೊಬ್ಬನನ್ನು ಭೀಮ ಮುಗಿಸಿಬಿಟ್ಟ ಕತೆ ಪವಾಡದಷ್ಟು ಜನಜನಿತವಾಗಿದೆ. ಆ ಊರಲ್ಲಿಯ ಪಾಳೆಯಗಾರನಂತೆ ಬಕಾಸುರ ವರ್ತಿಸುತ್ತಿದ್ದ. ದಿನಕ್ಕೊಂದು ಮನೆಯವರಂತೆ ಬಕಾಸುರನ ದಂಡಿಗೆ ಆಹಾರವನ್ನು ಒದಗಿಸುವ ಮಾತಾಗಿತ್ತು. ಒಂದು ದಿನ ಭೀಮ ಹೋಗಿ ಗಪ್ಪನೆ ಬಕಾಸುರನ ಕುತ್ತಿಗೆ ಹಿಡಿದು ಅವನನ್ನು ಮುಗಿಸಿಬಿಟ್ಟ. ಬಕಾಸುರನ ದಂಡು ನಾಯಕನಿಲ್ಲದೆ ಅಧೈರ್ಯಗೊಂಡು ಪಲಾಯನ ಹೇಳಿತು. ರಾಜನೊಬ್ಬನನ್ನು ಕೊಂದರೆ ರಾಜ್ಯವನ್ನೆ ಗೆದ್ದಂತೆ ಎನ್ನುವುದು ಈಗಲೂ ಈ ಕುರಿಗಳಂತಹ ಜನರ ನಾಡಿನ ಪದ್ಧತಿಯಂತೆಯೇ ಆಗಲೂ ಆಗಿರುವುದು ಸಹಜ. ಭೀಮ ಪವಾಡ ಪುರುಷನಾದ.

ಇತ್ತ ತನ್ನ ರಾಜ್ಯದಲ್ಲಿ ಪಾಂಡವರು ಪ್ರವೇಶಿಸಿದ್ದನ್ನು ಅರಿತ ದ್ರುಪದ ಮಗಳ ಸ್ವಯಂವರವನ್ನು ಆಯೋಜಿಸಿದ. ದ್ರುಪದನ ರಕ್ಷಣೆಯಲ್ಲಿ, ಪಾಂಡವರು ದ್ರೌಪದಿಯನ್ನು ವರಿಸಿದರು. ದುರ್ಯೋಧನಾದಿಗಳು ಅಸೂಯೆಪಟ್ಟರಾದರು ಏನೂ ಹೊಳೆಯದೆ ಹಸ್ತಿನಾವತಿಗೆ ಮರಳಿದರು.

ಧೃತರಾಷ್ಟ್ರನ ಮೇಲೆ ಅವಾಸ್ತವ ಅಪವಾದ ಬಂದಿತ್ತು. ಪಾಂಡವರನ್ನು ಹತ್ಯೆಗೀಡುಮಾಡುವ ಸಂಚು ಮಾಡಿದ್ದ ಎಂದು ವಿದುರನೇ ರಾಜಧಾನಿಯಲ್ಲಿ ಕೂಗನ್ನು ಎಬ್ಬಿಸಿದ್ದ.

ಈ ಉಸಾಬರಿಯೆ ಬೇಡ, ಎಂದು ದುರ್ಯೋಧನನಿಗೆ ಹಸ್ತಿನಾವತಿಯ ರಾಜ್ಯವನ್ನು ಒಪ್ಪಿಸಿ, ಧರ್ಮನಿಗೆ ಇಂದ್ರಪ್ರಸ್ಥದ ಕಾರಭಾರವನ್ನು ಒಪ್ಪಿಸುವ ಕಾರ್ಯ ಜರುಗಿತು. ರಾಜ್ಯದ ಜನಕ್ಕೆ ಇದ್ದ ರಾಜ್ಯವನ್ನು ಒಡೆದು ದಾಯಾದಿಗಳಲ್ಲಿ ಹಂಚಿಕೊಡುವ ವಿಧಾನ ಹೊಸದು. ಆದರೂ ವಿದುರನಾದಿಯಾಗಿ ಪಾಂಡವರ ಕುರಿತು ಜನತೆಯಲ್ಲಿ ಹೆಚ್ಚಿನ ಸಹಾನುಭೂತಿಯನ್ನು ಹುಟ್ಟಿಸಿದ್ದರಿಂದ ಈ ಏರ್ಪಾಡು ಸರಿಯಾದುದೆಂದೇ ಪರಿಗಣಿಸಲಾಯಿತು. ಆದರೆ ಭೀಷ್ಮ ಇಲ್ಲಿ ತಪ್ಪಿನ ಬೀಜವನ್ನು ಬಿತ್ತಿದ. ಒಟ್ಟಾದ ರಾಜ್ಯವನ್ನು ತುಂಡು ಮಾಡುವದೂ, ಇಬ್ಬಿಬ್ಬರಿಗೆ ಪಟ್ಟಕಟ್ಟುವುದೂ ಕೊನೆಗೆ ವಿರಸದಲ್ಲಿಯೇ ಕೊನೆಗಾಣುವುದೆಂದು ಅವನು ಊಹಿಸಬೇಕಾಗಿತ್ತು. ಜಗಳ ತಪ್ಪಿಸಲು ಹೋಗಿ ಜಗಳವನ್ನು ಹುಟ್ಟಿಸಿದ. ಬಹಳಷ್ಟು ಸಲ ಹೀಗೆಯೇ ಆಗುತ್ತದೆ. ಯಾರಿಗೂ ನಿಷ್ಠುರರಾಗುವುದು ಬೇಡವೆಂದು ಅವಾಸ್ತವ ಸೂತ್ರವನ್ನು ಕಂಡುಹಿಡಿಯುತ್ತೇವೆ. ತಾತ್ಪೂರ್ತಿಕವಾಗಿ ಗಾಯ ಮುಚ್ಚುತ್ತದೆ. ಆದರೆ ಅದರ ವಿಷ ದೇಹದ ತುಂಬ ವ್ಯಾಪಿಸತೊಡಗಿ ಒಂದು ದಿನ ಗಾಯದ ಬದಲು ದೇಹವನ್ನೆ ಸುಡಬೇಕಾಗುತ್ತದೆ.

ಹಸ್ತಿನಾವತಿ, ಇಂದ್ರಪ್ರಸ್ಥ ಹೀಗೆ ಎರಡೆರಡು ರಾಜಧಾನಿಗಳಾದ ಮೇಲೆ ಅಲ್ಲಿಯ ವಾರ್ತೆ ಇಲ್ಲಿ,

ಇಲ್ಲಿಯ ವಾರ್ತೆ ಅಲ್ಲಿ ಹೇಳುತ್ತಲೇ ತಮ್ಮ ಬೇಳೆಬೇಯಿಸಿಕೊಳ್ಳುವವರ ಜಾತಿಯೊಂದು ನಿರ್ಮಾಣಗೊಂಡಿದ್ದೀತು. ಇಂದ್ರಪ್ರಸ್ಥದ ಅರಮನೆಯನ್ನು ಕಟ್ಟಿಸುವಾಗ ಸ್ವಾಭಾವಿಕವಾಗಿಯೇ ನೂತನ ವಾಸ್ತುಕಲೆಯನ್ನು ಬಳಕೆಗೆ ತಂದಿರಲು ಸಾಕು. ಹಸ್ತಿನಾವತಿಯ ಅರಮನೆ ಅದರ ಮುಂದೆ ತೀರಾ ಹಳೆಯದು. ಅರಮನೆಯನ್ನು ಕಟ್ಟಿ ಪೂರ್ತಿಯಾದ ಮೇಲೆ ಧರ್ಮ ತನ್ನ ಹಸ್ತಿನಾವತಿಯ ಬಂಧುಗಳನ್ನು ಬಂದು ನೋಡಲು ಆಹ್ವಾನಿಸಿದ. ದುರ್ಯೋಧನ ಹಾಗೂ ಸಹೋದರರು ಹೊಸ ಅರಮನೆಯನ್ನು ಬೆರಗಿನಿಂದ ನೋಡಿದರು. ಅವರ ಬೆರಗನ್ನೂ ದಿಗಿಲನ್ನೂ ಕಂಡು ದ್ರೌಪದಿ ನಕ್ಕಳಂತೆ.

ಅಳುವ ಹೆಣ್ಣು ಸುಖದಿಂದಿರುತ್ತಾಳೆ. ನಗುವ ಹೆಣ್ಣು ಅಪಾಯವನ್ನು ತರುತ್ತಾಳೆ. ದ್ರೌಪದಿ ನಕ್ಕದ್ದರಿಂದ ದುರ್ಯೋಧನ ಖತಿಗೊಂಡ. ತಮ್ಮನ ವಿಶ್ವಾಸವನ್ನು ಮೆಚ್ಚುವುದರ ಬದಲು ಅವರ ನಾಶಕ್ಕಾಗಿ ಹಾತೊರೆಯತೊಡಗಿದ. ಹಸ್ತಿನಾವತಿಗೆ ಮರಳಿದ.

ಬೇಟೆಯಾಡುವ ದಿನಗಳು ಮುಗಿದು ಮೋಡ ಮುಸುಕಿ ಮಳೆ ಸುರಿಯುವ ದಿನಗಳು ಬಂದವು. ರಾಜರುಗಳು ಏನು ಮಾಡಬೇಕು? ಬಿತ್ತನೆ, ಸಸಿ ನಾಟುವದು ಮೊದಲಾದ ಮಹತ್ವದ ಕೆಲಸಗಳಲ್ಲಿ ಪ್ರಜೆಗಳು ತೊಡಗಿದಾಗ ಬೆಚ್ಚನೆ ಮನೆಯಲ್ಲಿ ಕುಳಿತು ಪಗಡೆ ಆಡುವ ಪರಿಪಾಠ ಅರಮನೆಯಲ್ಲಿದೆಯಷ್ಟೆ. ಈ ಸಲ ದುರ್ಯೋಧನ ಧರ್ಮರಾಜನಿಗೆ ಲೆತ್ತ ಆಡಲಿಕ್ಕೆ ಹಸ್ತಿನಾವತಿಗೆ ಬರಲು ಆಹ್ವಾನ ಕಳಿಸಿದ್ದ. ಧರ್ಮನಿಗಾದರೂ ಅದೇ ಬೇಕಾಗಿತ್ತು. ಕರೆಯುವುದಷ್ಟೇ ಬಾಕಿ, ಬಂದೇ ಬಿಟ್ಟ. ಜೂಜು ಮನುಷ್ಯನ ರಕ್ತದ ಗುಣವಾಗಿದೆ. ಅದನ್ನು ಒಪ್ಪಲೇಬೇಕು.

ಧರ್ಮ ಬಂದು ಆಟಕ್ಕೆ ಕುಳಿತ. ಕ್ರಮೇಣ ಎಲ್ಲವನ್ನೂ ಕಳೆದುಕೊಂಡ. ಮೋಜಿಗಾಗಿ ಆಡಬೇಕಾದ ಆಟ. ರಾಜ್ಯವನ್ನು ಪಣಕ್ಕೆ ಹಚ್ಚುವುದೆಂದರೇನು ಎಂದು ಬುದ್ಧಿ ಹೇಳಿ ಎಲ್ಲವನ್ನೂ ಮರಳಿ ಕೊಡಲು ಧೃತರಾಷ್ಟ್ರ ಆಜ್ಞೆ ಮಾಡಿ ಧರ್ಮನಿಗೇನೂ ಹಾನಿ ತಟ್ಟದಂತೆ ಮರಳಿ ಕಳಿಸಿದ. ಹಸ್ತಿನಾವತಿಯ ಜನ ಹಿರಿಯ ರಾಜನ ಔದಾರ್ಯತೆಯನ್ನು ಮನಸಾ ಮೆಚ್ಚಿತು. ಧೃತರಾಷ್ಟ್ರನಿಗೂ ಎರಡೆರಡು ವಿಧದ ಭಯ, ಆತಂಕ. ಪಾಂಡವರ ಸಂಪತ್ತು ದುರ್ಯೋಧನನಿಗೆ ಸೇರಿದರೆ ಅವರು ಹಸ್ತಿನಾವತಿಗೆ ಮರಳುವರು. ಆಗ ಮತ್ತೆ ಘರ್ಷಣೆ. ಮೇಲಾಗಿ ಸತ್ತ ತಮ್ಮನ ಮಕ್ಕಳಿಗೆ ಅನ್ಯಾಯವೆಸಗಿದನೆಂಬ ಅಪವಾದ. ಪಾಂಡು ತನ್ನ ಮೇಲೆ ಘೋರ ಅನ್ಯಾಯವನ್ನೇ ಮಾಡಿದ ಎಂದು ಧೃತರಾಷ್ಟ್ರನಿಗೆ ಪದೇ ಪದೇ ಎನ್ನಿಸತೊಡಗಿತು.

ಧರ್ಮ ಇಂದ್ರಪ್ರಸ್ಥಕ್ಕೆ ಹೋಗಿ ಬಡಾಯಿಕೊಚ್ಚಿಕೊಂಡಿರಬೇಕು. 'ನಾವೇನು ಎಲ್ಲವನ್ನೂ ಕಳೆದುಕೊಂಡಿರಲಿಲ್ಲ. ಇನ್ನೂ ಆಟ ಮುಗಿದಿರಲಿಲ್ಲ. ಎಲ್ಲಿ ತನ್ನ ಮಗ ಹಸ್ತಿನಾವತಿಯನ್ನು ಕಳೆದುಕೊಳ್ಳುತ್ತಾನೋ ಎಂಬ ಅಂಜಿಕೆಯಿಂದ ಕುರುಡು ಮುದುಕ ಆಟ ನಿಲ್ಲಿಸಿಬಿಟ್ಟ. ನನ್ನದನ್ನು ನನಗೆ ಮರಳಿಸುವ ನಾಟಕ ಹೂಡಿದ' ಎಂದು ಹೇಳಿರಬೇಕು. ನಡುವಿನವರಿಂದ ಈ ಮಾತು ದುರ್ಯೋಧನನಿಗೆ ಗೊತ್ತಾಗಿ ಅವನ ರೋಷ ಇಮ್ಮಡಿಸಿರಬೇಕು. 'ಗೆದ್ದದ್ದನ್ನು ಅಪ್ಪನ ಮಾತು ಮೀರಲಾರದೆ ಮರಳಿಸಿದ್ದಲ್ಲದೆ, ಆ ಔದಾರ್ಯಕ್ಕೂ ಬೆಲೆ ಇಲ್ಲದೆ ಹೋಯಿತಲ್ಲ' ಎಂದು ಕುಪಿತನಾದ. 'ಅಪ್ಪು ಮದ ಈ ಧರ್ಮನಲ್ಲಿದ್ದರೆ ಇನ್ನೂ ಒಮ್ಮೆ ಬಂದು ಕವಡೆಗಳನ್ನು ಒಗೆಯಲಿ. ನಾನು, ನನ್ನಪ್ಪ ನ್ಯಾಯವಾಗಿ ವರ್ತಿಸಿದ್ದರೆ ಗೆಲುವು ನಮಗೇ ದೊರೆಯುತ್ತದೆ' ಎಂದು ಬಹಿರಂಗವಾಗಿಯೇ ಹೇಳತೊಡಗಿದ.

ಹಸ್ತಿನಾವತಿ ಈ ಹೊತ್ತಿಗೆ ದುರ್ಯೋಧನನನ್ನು ದೇಶದ ಪ್ರಭು, ಸಾಕ್ಷಾತ್ ದೇವಾಂಶ ಎಂದು ವಾಡಿಕೆಯಂತೆ ರೂಢಿಸಿಕೊಂಡುಬಿಟ್ಟಿತ್ತು. ಅಂತಹ ದುರ್ಯೋಧನನಿಗೆ ಧರ್ಮ ಈ ರೀತಿ




# ಕ್ಯಾನ್ ಫಿನ್ ಹೋಮ್ಸ್ ನೆರವಿನೊಂದಿಗೆ

ಕೇವಲ ಆರು ವರ್ಷಗಳ ಅಲ್ಪ ಅವಧಿಯಲ್ಲಿ, 60,000ಕ್ಕೂ ಹೆಚ್ಚು ಮನೆಗಳ ನಿರ್ಮಾಣಕ್ಕೆ ಕ್ಯಾನ್ ಫಿನ್ ಹೋಮ್ಸ್ ನೆರವಾಗಿದೆ. ಈಗ ಇಳಿಸಿದ ಬಡ್ಡಿ ದರಗಳಲ್ಲಿ ದೊರೆಯುವ ರೂ.20 ಲಕ್ಷಗಳವರೆಗಿನ ನೆರವಿನೊಂದಿಗೆ ನಿಮ್ಮದೇ ಮನೆಯ ಬಗ್ಗೆ ಯೋಜಿಸಬಹುದು.

ಮನೆಯ ನಿರ್ಮಾಣದ / ಖರೀದಿಯ ಯೋಜನೆಯಿದೆಯೇ? ರಾಷ್ಟ್ರದಾದ್ಯಂತ ಇರುವ ನಮ್ಮ 25 ಶಾಖೆಗಳು ನಿಮ್ಮದೇ ಮನೆಯ ಯೋಜನೆಗೆ, ಅತ್ಯಲ್ಪ ಕಾಗದ ಪತ್ರಗಳ ಮೂಲಕ ಶೀಘ್ರವಾಗಿ ಸಾಲ ಮಂಜೂರು ಮಾಡಲು ಸಂತೋಷಪಡುತ್ತವೆ.




**Can Fin Homes Ltd**
(Sponsor: CANARA BANK)

NAd/CFH/3062

ನೊಂದಾಯಿತ ಕಛೇರಿ: 32, 'ಶಾಂತಿ ಕುಟೀರ', ಎರಡನೇ ಮಹಡಿ, ದೇವರಾಜ ಅರಸ್ ರಸ್ತೆ (ರೇಸ್ ಕೋರ್ಸ್ ರಸ್ತೆ), ಬೆಂಗಳೂರು 560 001

ಶಾಖೆಗಳು ಮತ್ತು ದೂರವಾಣಿ ಸಂಖ್ಯೆ: ಬೆಂಗಳೂರು (ಕನಿಂಗ್‌ಹ್ಯಾಮ್ ರಸ್ತೆ) (2266430), ಬೆಂಗಳೂರು (ಜಯನಗರ) (6630776), ಭೋಪಾಲ್ (563508), ಭುವನೇಶ್ವರ್ (402045), ಮುಂಬಯಿ (4362604), ಕ್ಯಾಲಿಕಟ್ (366461), ಕೊಯಮತ್ತೂರು (235977), ಧಾರವಾಡ (41080), ದಾವಣಗೆರೆ (26645), ನವ ದೆಹಲಿ (6430236), ಗೋವಾ (222671), ಹೈದರಾಬಾದ್ (242166), ಜೈಪುರ (381036), ಲಖ್ನೋ (73734), ಮಂಗಳೂರು (440193), ಮೈಸೂರು (35699), ಮದರಾಸು (8522110), ಮಧುರೈ (35172), ನೊಯಿಡಾ - ಘಾಜಿಯಾಬಾದ್ [ಪ್ರತಿನಿಧಿ] (51146), ಪಾಂಡಿಚೇರಿ (38447), ಪುಣೆ (321327), ತ್ರಿಸ್ಸೂರ್ (332421), ತ್ರಿವೇಂಡ್ರಮ್ (77446), ತಿರುಚಿ (28960), ವಿಜಯವಾಡ (474781), ವಿಶಾಖಪಟ್ಟಣ (546736).

ಹೆಸರಿಡಬಹುದೇ ಎಂದು ಬೇಸರಪಡುವ ಜನ ಹೆಚ್ಚಾಯಿತು. ಈ ಸಲ ಸಹಾನುಭೂತಿ ದುರ್ಯೋಧನನಿಗೆ ಪೂರ್ತಿಯಾಗಿ ದೊರಕಿತು. ಅಂತಹ ಒಳ್ಳೆಯ ಅವಕಾಶ ದೊರೆತದ್ದರಿಂದಲೋ ಅಥವಾ ಜೂಜಿನ ತೀಟೆ ಜೋರಾಯಿತೋ, ದುರ್ಯೋಧನ ಧರ್ಮನಿಗೆ ಮತ್ತೆ ಆಹ್ವಾನ ನೀಡಿದ. ಧರ್ಮ ಇನ್ನೂ ತನ್ನ ಮಬ್ಬಿನಲ್ಲೇ ಇದ್ದ. ಈ ಸಲ ಹಸ್ತಿನಾವತಿಯನ್ನೇ ಗೆದೆಯಬೇಕು ಎಂದು ಆಸೆಪಟ್ಟಿದ್ದರೂ ಆಶ್ಚರ್ಯವಿಲ್ಲ.

ಆದರೆ ಇದನ್ನೂ ಒಂದು ಧರ್ಮಯುದ್ಧ ಎನ್ನುವುದಾದರೆ ಪರಿಣಾಮ ಏನಾಯಿತೆಂದು ಗೊತ್ತೇ ಇದೆಯಲ್ಲ. ಧರ್ಮ ಎಲ್ಲವನ್ನೂ ಸೋತ. ಈಗ ಪಣಕ್ಕೊಡ್ಡಲು ಅವನ ಬಳಿ ಏನೂ ಇರಲಿಲ್ಲ. ಹಿಂದಿದ್ದ ಹಿರಿಯರ ಸಹಾನುಭೂತಿ ಕೂಡ ಈಗ ಮರೆಯಾಗಿತ್ತು. ಪ್ರೇಕ್ಷಕರ ಸಂಖ್ಯೆ ಬೆಳೆದಿತ್ತು. ದುರ್ಯೋಧನ ಈಗ ರಾಜನಂತೆ ಯೋಚಿಸಿರಬೇಕು. ದ್ರೌಪದಿಯನ್ನೂ ಪಣಕ್ಕಿಡಲು ಕೇಳಿಕೊಳ್ಳಲಿಲ್ಲ.

ಈಗ ಬಹುಪರಿಶ್ರಮದಿಂದ ತಡೆದುಕೊಂಡಿದ್ದ ಪ್ರಶ್ನೆಯನ್ನು ಉತ್ತರಾದೇವಿ ಕೇಳಿದಳು-

"ದ್ರೌಪದಿ ದೇವಿಯರ ಮಾನಹರಣಕ್ಕೇ ಯತ್ನಿಸಿದ ದುರ್ಯೋಧನನದು ಸರಿ ಎಂದು ನೀವು ಹೇಳುತ್ತಿದ್ದೀರಿ ಎಂದು ತಿಳಿಯಬೇಕೆ?" ಎಂದಳು.

"ಹಾಗೇನಿಲ್ಲ. ನೀವು ವಸ್ತ್ರಾಪಹರಣದ ಪ್ರಕರಣವನ್ನು ಸಂಬಂಧಿಸಿ ಈ ಪ್ರಶ್ನೆಯನ್ನು ಕೇಳಿರಬೇಕು. ಅದೇನೂ ಅಂತಹ ಮಹತ್ವದ ವಿಷಯವಲ್ಲವೆಂದು ನನ್ನ ನಂಬಿಕೆ. ಆದ್ದರಿಂದ ಅದರ ಕುರಿತು ಅಷ್ಟಾಗಿ ವಿವರಿಸಲಿಲ್ಲ" ಪುನೀತರೆಂದರು.

"ಎಲ್ಲ ಜನರು ಮಹತ್ವದ್ದು ಎಂದು ತಿಳಿದುಕೊಳ್ಳುವ ವಿಷಯಗಳನ್ನು ಗೌಣವಾಗಿ ಪರಿಗಣಿಸಿದರೆ ದೊಡ್ಡಸ್ತಿಕೆಯ ಲಕ್ಷಣವೆಂದು ನೀವು ತಿಳಿದುಕೊಂಡಂತೆ ಕಾಣುತ್ತದೆ. ಅಥವಾ ನಿಮಗೆ ಅನಾನುಕೂಲಕಾರಕ ಸಂಗತಿಗಳನ್ನು ಬದಿಗಿಟ್ಟರೆ ವಾದದ ಬಲ ಬೆಳೆಯುವುದೆಂದು ಭಾವಿಸಿದ್ದೀರಿ."

"ಅದೂ ಅಲ್ಲ ತಾಯಿ, ನೀವು ಹಾಗೆ ಭಾವಿಸುವುದಾದರೆ ಅದೇ ಭಾಗವನ್ನು ಮೊದಲು ಚರ್ಚಿಸಿ ಮುಂದೆ ಹೋಗುತ್ತೇನೆ.

"ಕ್ರಯಕ್ಕೆ ಅಥವಾ ವಿನಿಮಯ ರೂಪದಲ್ಲಿ ಹೆಣ್ಣುಗಳನ್ನು ಹಸ್ತಾಂತರಿಸುವ ವಿಧಾನ ಈಗಲೂ ಬಳಕೆಯಲ್ಲಿದೆ. ಆಗಲೂ ಇತ್ತು. ಹೀಗೆ ಇರುವ ಅಧಿಕಾರದಿಂದಲೇ ಎಲ್ಲವನ್ನೂ ಕಳೆದುಕೊಂಡ ಧರ್ಮರಾಜ ದ್ರೌಪದಿಯನ್ನೂ ಪಣಕ್ಕೆ ಇಟ್ಟ. ಆಗಲೇ ಪ್ರಶ್ನೆ ಎದ್ದಿತ್ತು. 'ದ್ರೌಪದಿ ಧರ್ಮನೊಬ್ಬನದೇ ಸೊತ್ತಲ್ಲ. ಅವಳ ಮೇಲೆ ಅವನಿಗೆ ಪೂರ್ಣಾಧಿಕಾರವೇ ಇಲ್ಲ' ಎಂದು ವಿವರಿಸಲಾಯಿತು. ಆದರೆ ಧರ್ಮ ಒಪ್ಪಲಿಲ್ಲ. ಇಂದ್ರಪ್ರಸ್ಥ ರಾಜ್ಯ ಹೇಗೆ ತನ್ನದೋ ಹಾಗೆ ದ್ರೌಪದಿಯೂ ತನ್ನವಳೇ. ತನ್ನ ತಮ್ಮಂದಿರನ್ನೂ ಹಾಗೆ ತಾನು ವಿನಿಯೋಗಿಸಬಹುದು ಎಂದೂ ಹೇಳಿದ.

ಇನ್ನೂ ಒಂದು ಪದ್ಧತಿ ನಿಮಗೆ ಗೊತ್ತೇ ಇದೆ. ರಾಜರು ಹೊಸ ಹೆಣ್ಣನ್ನೊಂದು ತಂದು ಆಸ್ಥಾನದಲ್ಲಿ ಬೆತ್ತಲೆ ಮಾಡಿದರೆ ಅವಳನ್ನು ಅಂದಿನಿಂದ ಸಾರ್ವಜನಿಕ ಸೊತ್ತಾಗಿ ಪರಿಗಣಿಸಿದಂತೆ. ಹೆಣ್ಣಿಗೆ ಕೊಡುವ ಸಂಸ್ಕಾರಗಳಲ್ಲಿ ಇದೂ ಒಂದು.

ಗೆದ್ದ ಹೆಣ್ಣನ್ನು ಹೇಗೆ ಪ್ರಯೋಜನಗೊಳಿಸಬೇಕು ಎನ್ನುವುದನ್ನು ಸೋತವನು ಹೇಳಲಾರ. ವಸ್ತ್ರಾಪಹರಣದ ಸಮಾರಂಭದ ದಿನವೂ ಅದೇ ಆಯಿತು. ದುರ್ಯೋಧನನಿಗೆ ದ್ರೌಪದಿ ಅಂತಃಪುರ ಸೇರಬೇಕು ಎಂದು ಅನಿಸಿರಲಿಕ್ಕಿಲ್ಲ. ಐವರು ಬಳಸಿದ ಮೇಲೆ ಇನ್ನಾವ ಮೋಜು ಉಳಿದಿರಬೇಕು ಎಂದು ಭಾವಿಸಿ ಅವಳನ್ನು ಆಸ್ಥಾನದ ಹೆಣ್ಣಾಗಿಸುವುದನ್ನು ನಿರ್ಧರಿಸಿರಬೇಕು. ಅವಳ ಮೇಲೆ ಮೋಹವೇ ಇತ್ತು ಎಂದು ಗ್ರಹಿಸಿದರೆ ತುಂಬಿದ ಸಭೆಯಲ್ಲಿ ತಾನು ಮೆಚ್ಚಿದ ಕನ್ಯೆಯನ್ನು ಯಾರಾದರೂ ಬಟ್ಟೆ ತೊಟ್ಟಾಗ ಕೂಡ ತೋರಿಯಾರೆ?

ಸಭೆಯಲ್ಲಿ ಭೀಷ್ಮನಿದ್ದ, ವಿದುರನಿದ್ದ, ಕೃಪಾಚಾರ್ಯರು, ದ್ರೋಣರು, ಕರ್ಣ ಮೊದಲಾದ ಧರ್ಮಿಗಳೂ ಉಪಸ್ಥಿತರಿದ್ದರು. ಸಭೆಯ ದಿನವನ್ನು ಮೊದಲೇ ಜಾಹೀರಾತುಗೊಳಿಸಲಾಗಿತ್ತು. ಯಾರೂ ವಿರೋಧ ಮಾಡಲಿಲ್ಲ. ಆತಂಕವನ್ನೊಡ್ಡಲಿಲ್ಲ. ನಿಯಮಕ್ಕೆ ಅನುಸಾರವಾಗಿ ನಡೆದ ಕಾರ್ಯಕ್ರಮವನ್ನು ವಿರೋಧಿಸುವ ಮಾರ್ಗವೇ ಇರಲಿಲ್ಲ.

ಕೃಷ್ಣ ಮಾತ್ರ ನಡುವೆ ಕೈ ಹಾಕಿದ. ಪಾಂಡವರ ಪಕ್ಷವನ್ನು ಸದಾ ವಹಿಸುತ್ತಿದ್ದ ಆತ ಒಂದೇ ಸಾಲಿನ ಒಕ್ಕಣಿಕೆ ಬರೆಸಿ ದೂತನನ್ನು ಸರಿಯಾದ ಸಮಯಕ್ಕೆ ಕಳುಹಿಸಿದ. ಅದರಲ್ಲಿ ಧರ್ಮಾಧರ್ಮದ ವಿವೇಚನೆ ಇರಲಿಲ್ಲ. "ದ್ರೌಪದಿಯನ್ನು ಬಿಟ್ಟುಬಿಡು. ಇಲ್ಲದಿದ್ದರೆ ಪರಿಣಾಮ ನೆಟ್ಟಗಾಗಲಿಕ್ಕಿಲ್ಲ" ಎಂದು ಬರೆಸಿದ್ದ. ಕೃಷ್ಣನ ಚತುರ ರಾಜಕಾರಣವನ್ನು ಆಗಿನ ರಾಜರೆಲ್ಲ ಬಲ್ಲವರಾಗಿದ್ದರು. ಅವನು ಸಂಶೋಧಿಸಿ ಇಟ್ಟುಕೊಂಡ ಕೆಲ ಮಾರಕ ಅಸ್ತ್ರಗಳು ಯುದ್ಧದ ದಿಕ್ಕನ್ನೇ ಬದಲಿಸುವಂಥವು. ಅವನ ವಿರೋಧ ಯಾರಿಗೂ ಬೇಕಾಗಿರಲಿಲ್ಲ.

ಈ ಒಂದು ಹೆಣ್ಣಿನ ಕಾರಣಕ್ಕೇಕೆ ಕೃಷ್ಣನನ್ನು ಇದಿರುಹಾಕಿಕೊಳ್ಳುವುದು ಎಂದು ವಿಚಾರ ಮಾಡಿದವನೆ, ಸೀರೆಗೆ ಕೈ ಹಾಕಿದ ದುಃಶ್ಯಾಸನನನ್ನು ದುರ್ಯೋಧನ ಪ್ರತಿಬಂಧಿಸಿದ. ದ್ರೌಪದಿಗೆ ಹೊರಟು ಹೋಗಲು ತಿಳಿಸಿದ.

ಐವರು ಗಂಡಂದಿರು ಮಾಡಲಾರದ್ದನ್ನು ಕೃಷ್ಣನ ಒಂದು ಪತ್ರ ಮಾಡಿದ್ದನ್ನು ನೋಡಿ ದ್ರೌಪದಿಗೆ ನಿಜವಾಗಿಯೂ ಕೃಷ್ಣನ ಅಪಾರ ಶಕ್ತಿಯ ಕುರಿತು ಮೆಚ್ಚುಗೆಯೆನಿಸಿರಬೇಕು. ಕೃಷ್ಣನ ಸ್ವಭಾವವೂ ಮೊದಲಿಸಿಂದ ಹಾಗೆಯೇ. ಮಹಿಳೆಯರ ಮನಸ್ಸನ್ನು ಗೆಲ್ಲುವ ವಿಧಾನದಲ್ಲಿ ಆತನದು ಎತ್ತಿದ ಕೈ.

ಹೀಗೆ ಜೂಜಾಟದಲ್ಲಿ ಸೋತು ಹೋದ ಧರ್ಮ ದ್ರೌಪದಿಯನ್ನು ಅನ್ಯಾಯವಾಗಿ ಮರಳಿ ಪಡೆದುಕೊಂಡ. ಆದರೆ ಹಿಂದಿನಂತೆ ರಾಜ್ಯವನ್ನು ಮರಳಿ ದೊರಕಿಸಲು ಆಗಲಿಲ್ಲ, ಕರಾರಿನಂತೆ ಹನ್ನೆರಡು ವರ್ಷ ವನವಾಸ, ಒಂದು ವರ್ಷದ ಅಜ್ಞಾತವಾಸವನ್ನು ಅನುಭವಿಸಬೇಕಾಯಿತು. ಹಿರಿಯರಾಗಲಿ, ಪುರಜನರಾಗಲಿ ಪಾಂಡವರ ಪರವಾಗಿ ಚಕಾರವನ್ನೆತ್ತಲಿಲ್ಲ. ಅವರು ನ್ಯಾಯವಾಗಿಯೆ ಸೋತವರು ಎಂದು ಎಲ್ಲರಿಗೂ ಅರಿವಾಗಿತ್ತು.

ಈಗ ದ್ರುಪದರಾಜ ಅಳಿಯಂದಿರನ್ನು ತನ್ನ ರಾಜ್ಯದಲ್ಲಿ ಇಟ್ಟುಕೊಳ್ಳಬಹುದಿತ್ತು. ಆದರೆ ಹಾಗೆ ಮಾಡಿದರೆ ಹಸ್ತಿನಾವತಿಯ ವಿರುದ್ಧ ಯುದ್ಧವನ್ನು ಸಾರಿದಂತೆಯೆ. ಅದಕ್ಕಾಗಿ ಸಾಕಷ್ಟು ಶಕ್ತಿ ಸಂಚಯ ಅವನಲ್ಲೂ ಇರಲಿಲ್ಲ. ಕೃಷ್ಣ ಬಂದ. ಅವನೂ, ವನವಾಸವೇ ಪಾಂಡವರಿಗೆ ಸದ್ಯಕ್ಕೆ ವಿಹಿತ ಎಂದು ಅಭಿಪ್ರಾಯಪಟ್ಟ.

ಬಲಿಷ್ಠ ಹಸ್ತಿನಾವತಿಯನ್ನು ಸಂಪೂರ್ಣ ವಿನಾಶದತ್ತ ಹೊರಳಿಸಬೇಕಾದರೆ ಒಂದು ಮಹಾಯುದ್ಧವೇ ತಾರಕ. ಆ ಯುದ್ಧ ಕೌರವ ಪಾಂಡವರ ನಡುವೆಯೇ ನಡೆಯಬೇಕು. ಅದು ನಡೆಯಬೇಕಾದರೆ ಪಾಂಡವರು ಕಷ್ಟಕ್ಕೊಳಗಾಗಬೇಕು. ಅವರು ರೋಷಗೊಳ್ಳಬೇಕು. ಹಿಂದಿನಂತೆ ಅನಾಯಾಸವಾಗಿ ಇಂದ್ರಪ್ರಸ್ಥ ಕಳೆದುಕೊಂಡು ಮರಳಿ ಈಗಲೂ ದೊರೆತರೆ ಅವರು ಮತ್ತೆ ವಿಲಾಸದಲ್ಲೆ ತೊಡಗುವವರು. ಇದರಿಂದ ಶಾಶ್ವತ ಪರಿಹಾರ ದೊರೆಯಲಾರದು ಎಂದು ಕೃಷ್ಣ ತೀರ್ಮಾನಿಸಿದ. ಈ ಕಾರಣವನ್ನು ಒಳಗಿಟ್ಟುಕೊಂಡು ಹೊರಗೆ ಮಾತ್ರ ಬೇರೆ ವಾದವನ್ನೆ ಸಾರಿದ ಕೃಷ್ಣ. 'ಧರ್ಮದಂತೆ ನೀವು ಸೋಲು ಪಡೆದವರು. ಅದರ ಫಲವನ್ನು ಉಣ್ಣಲೇಬೇಕು' ಎಂದು.

ಧರ್ಮ, ನ್ಯಾಯಗಳ ಅಳತೆಗೋಲೂ ನಮ್ಮಲ್ಲಿ ಯಾವಾಗಲೂ ವಿಕಾರ ರೂಪವನ್ನು ತಾಳುತ್ತದೆ. ತಪ್ಪಿರಲಿ ಒಪ್ಪಿರಲಿ, ಕಷ್ಟವನ್ನು ಅನುಭೋಗಿಸಿದವರ ಕುರಿತು ಜನ ಅವಾಸ್ತವ ಸಹಾನುಭೂತಿಯನ್ನು ತಾಳುತ್ತದೆ. ಕೃಷ್ಣನಿಗೆ ಜನತೆಯ ಹೃದಯದ ಮಿಡಿತ ಗೊತ್ತಿದ್ದಷ್ಟು ಇನ್ನಾರಿಗೂ ಗೊತ್ತಿರಲಿಲ್ಲ.

ಪಾಂಡವರು ರಾಜಕುಮಾರರು, ಅರಸೊತ್ತಿಗೆಯನ್ನು ಭೋಗಿಸಿದವರು. ಅವರು ನಾರು ಬಟ್ಟೆತೊಟ್ಟು ಬರಿಗಾಲಿನಿಂದ ಅರಣ್ಯಾಭಿಮುಖವಾಗಿ ರಾಜಬೀದಿಯಲ್ಲಿ ನಡೆದುಹೋದರಾದರೆ ಅವರು ಒಮ್ಮೆಲೆ ಮಹಾಪುರುಷರಾಗಿ ಬಿಡುತ್ತಾರೆ ಎನ್ನುವುದನ್ನು ಅವನು ಸರಿಯಾಗಿಯೆ ಲೆಕ್ಕ ಹಾಕಿದ. ಆ ದೃಶ್ಯದ ಪೂರ್ಣ ಪರಿಣಾಮವನ್ನು ಪಡೆದ.

ಜೂಜಿನಲ್ಲಿ ಮಗ್ನರಾಗಿ ಬೀದಿ ಭಿಕಾರಿಗಳಾದ ಪಾಂಡವರು ಒಮ್ಮೆಲೆ ಧರ್ಮವಂತರಾದರು. ಜನರ ಕಣ್ಣುಗಳು ತೇವವಾದವು. ರಾಮ ಪಿತೃವಾಕ್ಯ ಪರಿಪಾಲನೆಗೆ ಅರಣ್ಯಕ್ಕೆ ಹೋಗುವ ಕತೆ ಕೇಳಿದ ಅವರು ಈಗ ಇಲ್ಲಿ ಹೋಲಿಸಿದರು. ರಾಮನ ಉದಾತ್ತ ಧ್ಯೇಯವೆತ್ತ- ಇವರ ಪರಿಸ್ಥಿತಿಯೆತ್ತ ಎಂದು ವಿವೇಚಿಸುವದು ಆಗಲಿಲ್ಲ. ನೂರು ಹತ್ಯೆ ಮಾಡಿದವನನ್ನು ವಧೆ ಮಾಡುವಾಗ ಕೂಡ ಅವನ ಮಡದಿ ಮಕ್ಕಳು ಅಳತೊಡಗಿದರೆ ಕೂಡಿದ ಜನರನ್ನು ಬೇಕಾದರೆ ಕೇಳಿರಿ, ಅವನನ್ನು ಬಿಟ್ಟುಬಿಡಬೇಕೆಂದೇ ವಾದಿಸುತ್ತಾರೆ.

ಹೀಗೆ ಪಾಂಡವರು ಅರಣ್ಯಕ್ಕೆ ಹೋಗುವುದನ್ನು ಹೃದಯಂಗಮ ದೃಶ್ಯವನ್ನಾಗಿ ಮಾಡಲಾಯಿತು. ಅವರ ಹಿಂದೆಯೆ ನಡೆದ ದ್ರೌಪದಿ ಪರಮಪತಿವ್ರತೆಯಾದಳು. ವೀರವನಿತೆಯೂ ಆದಳು. ವನವಾಸದಲ್ಲಿರುವಾಗ ಪಾಂಡವರನ್ನು ಮರೆತು ಕೌರವರು ಸುಖಲೋಲುಪರಾಗುವರು. ವಿಲಾಸವನ್ನು ತೊರೆದ ಪಾಂಡವರು ಶಕ್ತಿ ಸಂಚಯದಲ್ಲಿ ತೊಡಗುವರು ಎಂದು ಕೃಷ್ಣ ಹಾಕಿದ ಲೆಕ್ಕ ಸರಿಯಾಯಿತು.

ಅರಣ್ಯದಲ್ಲಿದ್ದರೂ ದ್ರುಪದರಾಜ ಸುಗ್ರಾಸ ಭೋಜನ ವ್ಯವಸ್ಥೆಯನ್ನು ಅವರಿಗಾಗಿ ಮಾಡಿದ್ದ. ದ್ರೌಪದಿಯ ಊಟವಾಗುವವರೆಗೂ ದ್ರುಪದನ ಸೇವಕರು ದಿನಾಲು ಕಾದಿದ್ದು ನಂತರ ತಮ್ಮ ಬಿಡಾರಗಳಿಗೆ ಮರಳುತ್ತಿದ್ದರು. ಪಾಂಡವರಿಗೆ ಭೋಜನದ ಚಿಂತೆ ಈ ಕ್ರಮದಿಂದ ತಪ್ಪಿಹೋಗಿತ್ತು. ಅವರ ಬಳಿ ಯಾರೇ ಬಂದರೂ ಆ ಘೋರ ಅರಣ್ಯದಲ್ಲೂ ಅವರಿಗೆ ದ್ರುಪದನ ಗುಪ್ತ ವ್ಯವಸ್ಥೆಯ ಮುಖಾಂತರ ಷಡ್ರಸಾನ್ನಕ್ಕೆ ಕೊರತೆಯಾಗುತ್ತಿರಲಿಲ್ಲ. ಅವರೆಲ್ಲ ದ್ರೌಪದಿಯ ಮಹಿಮೆಯನ್ನು ಹೊಗಳುತ್ತಿದ್ದರು. ಅವಳು ಅನ್ನದ ಅಕ್ಷಯ ಪಾತ್ರೆ ಎಂದು ಹಾಡಿ ಹರಸುತ್ತಿದ್ದರು.

"ಶಿಕ್ಷೆಯೆನಿಸಬೇಕಾದ ವನವಾಸವು ಮೋಜು ಹಾಗೂ ಮಹತ್ವಪೂರ್ಣ ಕೆಲಸದಲ್ಲಿ ಪರ್ಯವಸಾನ ಹೊಂದುವಂತೆ ಮಾಡಿದ ಕೀರ್ತಿ ಕೃಷ್ಣನಿಗೆ ಸಲ್ಲುವದು. ನಿಸರ್ಗದ ನಿವಾಸದಲ್ಲಿ ನಿತ್ಯ ಇರತೊಡಗಿದ ಪಾಂಡವರು ಶಸ್ತ್ರಾಸ್ತ್ರಗಳ ಬಳಕೆಯನ್ನು ಪುನಃ ಅಭ್ಯಸಿಸತೊಡಗಿದರು. ಮೋಜಿಗಾಗಿ ಕಾಡುಪ್ರಾಣಿಗಳನ್ನು ಬೇಟೆಯಾಡಿದರೆ ಮೇಜವಾನಿಗಾಗಿ ಸಾಧುಪ್ರಾಣಿಗಳನ್ನು ಸಾಯಿಸಿದರು. ಹಲವಾರು ವಿಷಯಗಳ ಚಿಂತನೆಗೂ ತೊಡಗಿದರು. ದೇಹದೊಂದಿಗೆ ಈಗ ಅವರ ಬುದ್ಧಿಯೂ ಪಕ್ವವಾಗತೊಡಗಿತು.

"ದ್ರೌಪದಿಗೆ ಮಾತ್ರ ತನ್ನ ಗುರಿ ಇನ್ನೂ ದೂರವಿದ್ದಂತೆ ಕಾಣುತ್ತಿತ್ತು. ಅಲ್ಲದೆ ಅವಳ ಧ್ಯೇಯವೀಗ ವಿಸ್ತಾರಗೊಂಡಿತ್ತು. ತಂದೆಯ ಶತ್ರು ದ್ರೋಣನನ್ನು ಪಾಂಡವರ ವಿರೋಧಿಗಳನ್ನಾಗಿ ಮಾಡಬೇಕಾಗಿತ್ತು. ತನ್ನನ್ನು ಬೀದಿಯ ಹೆಣ್ಣನ್ನಾಗಿಸಲು ಯತ್ನಿಸಿದ ಕೌರವರ ವಧೆಯಾಗಬೇಕಾಗಿತ್ತು. ಕಷ್ಟಕಾಲದಲ್ಲಿ ತನ್ನನ್ನು ಅಕ್ಷಯ ಪಾತ್ರೆಯನ್ನಾಗಿಸಿದ ತಂದೆ ದ್ರುಪದನ ಋಣವನ್ನು ತೀರಿಸಬೇಕಾಗಿತ್ತು. ಕೃಷ್ಣನ ನೆರವನ್ನು ಸರಿಯಾಗಿ ನೆನೆದುದನ್ನು ಪ್ರದರ್ಶಿಸಲು ಅರಸೊತ್ತಿಗೆಯನ್ನು ಮರಳಿ ಪಡೆಯಬೇಕಾಗಿತ್ತು. ಮುಖ್ಯವಾಗಿ ಒಬ್ಬ ಮಹಾತ್ವಾಕಾಂಕ್ಷೆಯುಳ್ಳ ಹೆಣ್ಣು ಏನೆಲ್ಲವನ್ನು ಸಾಧಿಸಿಯಾಳು ಎನ್ನುವುದನ್ನು ಇತಿಹಾಸ ಅರಿಯುವಂತೆ ಆಗುವದಿತ್ತು. ಅದೇ ಮಹಾಭಾರತದ ತಿರುಳು ಎಂದೆನಿಸುತ್ತದೆ.

"ಕಾಡಿನಲ್ಲಿಯೂ ಇಷ್ಟು ಸುಖದಿಂದ ಇರಬೇಕಾದರೆ ಯಾರು ಸಹಾಯ ಒದಗಿಸುತ್ತಿದ್ದಾರೆ ಎನ್ನುವುದನ್ನು ಅರಿಯುವುದು ದುರ್ಯೋಧನನ ರಾಜಧರ್ಮವೇ ಇತ್ತು. ಅದಕ್ಕಾಗಿ ಬ್ರಾಹ್ಮಣರನ್ನು

ಬಳಸುವುದು ಪದ್ಧತಿ ತಾನೆ. ಬ್ರಾಹ್ಮಣರಿಗೆ ಯಾವ ಹಿಂಸೆ, ಹಾನಿಯನ್ನು ಮಾಡಕೂಡದೆಂಬ ಕಟ್ಟಳೆ ಇರುವಾಗ ಅವರನ್ನು ಬೇಹುಗಾರಿಕೆಗೆ ಬಳಸುವುದು ಸುಲಭ ಉಪಾಯವೇ ಆಗಿದೆ.

ದೂರ್ವಾಸ ಮುನಿಗಳು ತಮ್ಮ ಅಪಾರ ಶಿಷ್ಯವೃಂದದೊಡನೆ ಹಸ್ತಿನಾವತಿಗೆ ಬಂದು ರಾಜಾತಿಥ್ಯವನ್ನು ಪಡೆದು ಸಂತುಷ್ಟರಾದ ಸಮಯದಲ್ಲಿ ದುರ್ಯೋಧನ ಅವರ ಬಳಿ ಬಂದ. ಪಾಂಡವರ ಪಾಡನ್ನು ಅರಿತು ಬರಲು ಕೇಳಿಕೊಂಡ. ಸಂಚಾರ ಪ್ರಿಯರಾದ ಅವರು ಸಹಜವಾಗಿಯೆ ಒಪ್ಪಿದರು. ದೂರ್ವಾಸರಿಗೆ ಊಟದ ವ್ಯಸನ. ಇರಲಿ. ದುರ್ಯೋಧನನ ಮಾತಿನಂತೆ ಹೊರಟು ನಿಂತರು. ಸುಮಾರು ಹನ್ನೆರಡು ದಿನಗಳ ಕಾಲ ಅರಣ್ಯದಲ್ಲಿ ನಡೆದು ನಡೆದು ದೂರ್ವಾಸರು ಹಾಗೂ ಅವರ ದಂಡು ಪಾಂಡವರ ಕುಟೀರವಿದ್ದ ನದಿ ತೀರಕ್ಕೆ ಬರುವಷ್ಟರಲ್ಲಿ ತುಂಬಾ ಬಳಲಿದ್ದರು. ನದಿಯ ಆಚೆ ದಂಡೆಗಿದ್ದ ಸಹದೇವ ದ್ರೌಪದಿಗೆ ಸುದ್ದಿ ಮುಟ್ಟಿಸಿದ. ಅಲ್ಲಿಯೆ ಇದ್ದ ದ್ರುಪದನ ಸೇವಕರು ಹೊಸ ಪೂರೈಕೆಗಾಗಿ ಅಶ್ವರಥಗಳಲ್ಲಿ ರಾಜಧಾನಿಯತ್ತ ಓಡಿದರು. ಹೋಗುವಾಗ ದ್ರೌಪದಿಗೆ ಅವರು ಅರ್ಧದಿನದಲ್ಲಿ ಬರುವುದಾಗಿ ಭರವಸೆಯನ್ನಿತ್ತಿದ್ದರು. ಇತ್ತ ಕೃಷ್ಣನ ಬೇಹುಗಾರರು ದೂರ್ವಾಸರು ಕಾಡಿನತ್ತ ಹೊರಟದ್ದನ್ನು ತಿಳಿಸಿದಾಗಲೇ ಅವನು ಪಾಂಡವರಿಗೆ ಒದಗಬಹುದಾದ ಸಂಕಷ್ಟದ ಅರಿವು ಪಡೆದ. ಕೂಡಲೇ ಐದುಸಾವಿರ ಉಂಡೆಗಳನ್ನೂ ಮೂವತ್ತು ಕುಕ್ಕೆ ಅವಲಕ್ಕಿಯನ್ನೂ ಸಿದ್ಧಗೊಳಿಸಿ ತನ್ನ ರಥದಲ್ಲಿ ಹಾಕಿಸಿದ. ಗವಳಿಗರ ನಾಯಕನಾದ ಆತ ಒಂದಿಷ್ಟು ಬೆಣ್ಣೆ, ಸಾಕಷ್ಟು ಮೊಸರನ್ನೂ ಜೊತೆಗೆ ತೆಗೆದುಕೊಂಡು ಪಾಂಡವರತ್ತ ಧಾವಿಸಿದ.

ದೂರ್ವಾಸರು ಸಹದೇವನ ಕಣ್ಣಿಗೆ ಬಿದ್ದಾಗ ಇನ್ನೊಂದು ದಿಕ್ಕಿನಲ್ಲಿ ಕೃಷ್ಣ ಬರುತ್ತಿದ್ದುದು ಅವನ ಗಮನಕ್ಕೆ ಬರಲಿಲ್ಲ. ತನ್ನ ಮಾನವನ್ನು ಒಮ್ಮೆ ಉಳಿಸಿದ ಕೃಷ್ಣನನ್ನು ಕಷ್ಟ ಬಂದೊಡನೆ ನೆನೆಯುವುದು ದ್ರೌಪದಿಗೆ ಅಭ್ಯಾಸವಾಗಿತ್ತೇನೋ. ಕೃಷ್ಣ ಅದೇ ಸಮಯಕ್ಕೆ ಸರಿಯಾಗಿ ಕುಟೀರದೊಳಕ್ಕೆ ಬಂದ. ಪಾಂಡವರಿಗೆ ದಿಗಿಲು. ಈ ಕೃಷ್ಣನೊಬ್ಬ ದೇವತೆಯೇ ಸರಿ ಎಂದುಕೊಂಡರು. ದೇವರಂತೆ






ಬಂದೆಯಪ್ಪಾ ಎಂದು ಧರ್ಮಜನೇ ಅಭಿಮಾನದಿಂದ ಅವನನ್ನು ಸ್ವಾಗತಿಸಿದ. ದ್ರೌಪದಿಯಂತೂ ಭಕ್ತಿಯಿಂದ ಅವನ ಕಾಲಿಗೆರಗಿದಳು.

ಕೃಷ್ಣ ತುಂಟು ಗಾಂಭೀರ್ಯ ನಟಿಸಿ, ಬಂದ ವಿಪತ್ತೇನೆಂದು ಕೇಳಿದ. ಪಾಂಡವರು ವಿವರಿಸುತ್ತಿರುವಾಗಲೇ ದೂರ್ವಾಸರು ಆಗಮಿಸಿದರು. ಚುಟುಕಿನಲ್ಲಿ 'ಚಿಂತೆ ಬೇಡ' ಎಂದು ಹೇಳಿ, ಕೃಷ್ಣ ದೂರ್ವಾಸರಿಗೆ ಸಾಷ್ಟಾಂಗ ನಮಸ್ಕರಿಸಿದ. ಕೃಷ್ಣನನ್ನು ಅಲ್ಲಿ ನೋಡಿದ ಕೂಡಲೇ ದೂರ್ವಾಸರು ಅರ್ಧ ತಣ್ಣಗಾದರು.

ಕೃಷ್ಣನ ಹಿರಿಮೆ ಇದ್ದದ್ದೇ ಇಲ್ಲಿ. ಎಲ್ಲ ಕ್ಷತ್ರಿಯರಂತೆ ಅವನು ಕೇವಲ ಕ್ಷತ್ರಿಯನಾಗಿರಲಿಲ್ಲ. ಬ್ರಾಹ್ಮಣನೂ ಆಗಿದ್ದ. ತತ್ವಜ್ಞಾನದ ತಿರುಳನ್ನು ಅರಗಿಸಿಕೊಂಡ ಕೆಲವೇ ಋಷಿಗಳಿಗಿದ್ದಷ್ಟು ಜ್ಞಾನ ಕೃಷ್ಣನಿಗಿತ್ತು. ಕ್ಷತ್ರಿಯ ಹುಂಬರಂತಹ ಶಕ್ತಿ ಅವನಿಗಿರದಿದ್ದರೂ, ಅದನ್ನು ಮೀರಿಸುವಂತಹ ಯುಕ್ತಿಯ ಯಂತ್ರಗಳು, ಶಸ್ತ್ರಾಸ್ತ್ರಗಳು ಅವನಿಗಿದ್ದವು. ಮುಖ್ಯವಾಗಿ ಅವನ ಚಾಣಾಕ್ಷತೆಯಿಂದಾಗಿ ಯುದ್ಧ ಯಾವಾಗಲೂ ಪರಭೂಮಿಯ ಮೇಲೆ ನಡೆಯುತ್ತಿತ್ತು. ಹೀಗಾಗಿ ಅವನ ರಾಜ್ಯ ಸದಾ ಸುಭಿಕ್ಷವಾಗಿತ್ತು.

ಬ್ರಾಹ್ಮಣರೂ ಋಷಿಗಳೂ ಕೃಷ್ಣನ ಮುಂದೆ ತಮ್ಮ ಆಢ್ಯತೆಯನ್ನು ತೋರುವಂತಿರಲಿಲ್ಲ. ಅವರು ಸಾಮಾನ್ಯ ಡಾಂಭಿಕರಾಗಿದ್ದರಂತೂ ಅವನ ಮುಂದೆ ಡೊಗ್ಗಾಲು ಊರಬೇಕಾಗಿತ್ತು. ಅಂಥ ಕೃಷ್ಣ ನಮಸ್ಕರಿಸಿದಾಗ ದೂರ್ವಾಸರಿಗೆ ಗರುಡಗೆರೆಯನ್ನು ಕಂಡಂತಾಯಿತು. ಅವರು ಮೆತ್ತಗಾದರು. 'ಸ್ನಾನ ಮಾಡಿ ಬರುತ್ತೇವೆ' ಎಂದು ಹೇಳಿ ನದಿಯ ಕಡೆಗೆ ಹೊರಟರು. ಆ ವೇಳೆಗಾಗಲೇ ನದಿಯ ದಡದಲ್ಲಿ ತಂಗಿದ್ದ ದೂರ್ವಾಸರ ಶಿಷ್ಯವೃಂದಕ್ಕೆ ಕೃಷ್ಣನ ಸೇವಕರು ವಿಪುಲ ತಿಂಡಿಯನ್ನು ಸರಬರಾಜು ಮಾಡಿದ್ದರು. ಬರಗಾಲದ ಪ್ರದೇಶದಿಂದ ಬಂದವರಂತೆ ಅವರು ಅದನ್ನೆಲ್ಲ ತಿಂದು ಶಿಷ್ಟರಂತೆ ಸ್ನಾನಕ್ಕಿಳಿದಿದ್ದರು. ತುಂಬಿದ ಹೊಟ್ಟೆಯಿಂದ ಸ್ನಾನಕ್ಕಿಳಿದ ಅವರು ಎಮ್ಮೆಯಂತೆ ನೀರಿನಲ್ಲಿ ಚೆಲ್ಲಾಟವಾಡಿದರು. ದೂರ್ವಾಸರು ಕೃಷ್ಣನನ್ನು ಕಂಡು ಅನ್ಯಮನಸ್ಕರಾಗಿದ್ದರು. ಅಂತೂ ಇಡೀ ಪರಿವಾರ ತಾಸೆರಡು ತಾಸು ಬಿಟ್ಟು ಆಶ್ರಮದ ಎದುರಿನ ಆವಾರದಲ್ಲಿ ಬಂದು ಬೀಡುಬಿಟ್ಟಿತು.

"ಕೃಷ್ಣ ದೂರ್ವಾಸರೊಂದಿಗೇ ಆಚಮನಕ್ಕೆ ಕುಳಿತ. ವೈಶ್ವದೇವವನ್ನು ಮಂತ್ರೋಚ್ಚಾರಣೆಗಳಿಂದ ಶಾಸ್ತ್ರೋಕ್ತವಾಗಿ ಮಾಡಿ ಮುಗಿಸುವುದಾದರೆ ಮೂರು ಗಂಟೆಗಳೇ ಬೇಕಲ್ಲ. ಅದನ್ನು ಮುಗಿಸುವಷ್ಟರಲ್ಲಿ ದ್ರುಪದನ ದಂಡು ಮೃಷ್ಟಾನ್ನ ಭೋಜನವನ್ನು ಅಣಿಗೊಳಿಸಿತ್ತು.

"ಊಟಕ್ಕೆ ಕುಳಿತರೆ ಸಮಾಧಾನದಿಂದ ಉಂಡವ ಕೃಷ್ಣನೊಬ್ಬನೆ. ದೂರ್ವಾಸರಿಗೆ ಚಿಂತೆ. ರಾಜಾತಿಥ್ಯವನ್ನು ತೊರೆದು ತಾವು ಅರಣ್ಯಕ್ಕೆ ಬಂದುದೇಕೆ ಎಂದವನು ಕೇಳಿದರೆ? ಪಾಂಡವರಿಗೆ ಚಿಂತೆ, ಮಾಡಿದ ಅಡುಗೆ ಸಾಲದೆ ಹೋದರೆ ಎಂದು. ಆದರೆ ಹತ್ತು ಹತ್ತು ಸಿಹಿ ಉಂಡಿಗಳನ್ನು ತಿಂದು ಅವಲಕ್ಕಿ ಮೊಸರು ಸೇವಿಸಿದ ಶಿಷ್ಯರಿಗೆ ಊಟವೇ ಹೋಗಲಿಲ್ಲ. ಅವರಿಗೆ ನಿದ್ದೆ ಬೇಕಾಗಿತ್ತು. ಊಟದ ಶಾಸ್ತ್ರ ಮುಗಿಸಿ ಅವರು ಎದ್ದರು. ಆದರೆ ತಿಂಡಿಯ ವಿಷಯ ಗುರುಗಳಿಗೆ ತಿಳಿಯದಂತೆ ಎಚ್ಚರಿಕೆ ವಹಿಸಿದ್ದರು. ಸ್ನಾನಕ್ಕೆ ಪೂರ್ವದಲ್ಲಿ, ಅದೂ ಪಾಂಡವರ ಆಹಾರವಲ್ಲದ್ದನ್ನು ತಿಂದು ತೇಗಿದ್ದನ್ನು ಹೇಳಲು ಹೆದರಿದ್ದು ಸ್ವಾಭಾವಿಕವೇ.

"ವನವಾಸದಲ್ಲಿ ಕಳೆದ ೧೨ ಸಂವತ್ಸರಗಳ ತಪಸ್ಸು ಪಾಂಡವರಿಗೆ ಮನಸ್ಸಿನ ಮೇಲೆ ಸಾಕಷ್ಟು ಸಂಯಮವನ್ನು ತಂದಿತು. ದ್ರೌಪದಿ ಪಾಂಡವರ ದೌರ್ಬಲ್ಯಗಳನ್ನು ಚೆನ್ನಾಗಿ ಅರ್ಥಮಾಡಿಕೊಂಡಳು. ಬಹುಶಃ ಭೀಮನೊಬ್ಬನನ್ನು ಬಿಟ್ಟರೆ ಉಳಿದ ನಾಲ್ವರೂ ಹೇಡಿಗಳೇ. ಆದ ಅನ್ಯಾಯವನ್ನು ಪ್ರತೀಕಾರದ ಮೂಲಕ ಎದುರಿಸಲು ಮನಸ್ಸು ಮಾಡಲಾರರು. ಅರ್ಜುನ ವೀರಯೋಧನೇನೋ ನಿಜ. ಆದರೆ ಅವನ ಅಭಿಮಾನ ಸುಭದ್ರೆಯ ಹೃದಯದಲ್ಲಿ ಮನೆಮಾಡಿತ್ತು. ಸುಭದ್ರೆಗೆ ಈ ಪಾಂಡವರು ಕೌರವರು,

ಯುದ್ಧ ರಾಜಕಾರಣಗಳ ಬಗ್ಗೆ ಪ್ರೀತಿ, ಉತ್ಸುಕತೆ ಇರಲಿಲ್ಲ. ಅವಳು ನಂದಗೋಕುಲದಂತಹ ಸಂಸಾರವನ್ನು ಬಯಸಿದ್ದಾಳು. ರಾಧಾಕೃಷ್ಣರ ಮಿಲನವನ್ನು ಕಲ್ಪಿಸಿಯಾಳು. ಆದರೆ ಹೆರಳುಬಿಚ್ಚಿ ನಿಂತ ದ್ರೌಪದಿಯ ಆಕ್ರೋಶ, ಅವಳ ಪಾಲಿಗೆ ಸಲ್ಲದ ಕ್ಲೇಶ. ಅಂತೆಯೇ ವನವಾಸದ ವಾಸದಲ್ಲಿ ಅವಳು ಪಾಲ್ಗೊಳ್ಳಲಿಲ್ಲ. ತವರು ಮನೆಯ ಅರಮನೆಗೆ ಹೋಗಿಬಿಟ್ಟಳು. ಆದ್ದರಿಂದ ಅರ್ಜುನ, ಎರಡು ನಾವೆಗಳಲ್ಲಿ ಕಾಲಿಟ್ಟು ಆಚೆ ದಡವನ್ನು ಸೇರಬಯಸುವ ದುಸ್ಸಾಹಸಿಯಂತೆ ದ್ರೌಪದಿಗೆ ತೋರುತ್ತಿತ್ತು. ಇನ್ನು ಮೂವರು ಅಮಾಯಕರು, ಅರ್ಜುನನೋ, ಕೃಷ್ಣನ ಸಖ ಮತ್ತು ಕೃಷ್ಣನ ಸಹೋದರಿಯ ಗಂಡ, ಇನ್ನುಳಿದವ ಭೀಮನೊಬ್ಬನೇ.

ಭೀಮ ಸಹೃದಯಿ, ದ್ರೌಪದಿಯ ಮನವನ್ನು ಕನ್ನಡಿಯಂತೆ ಓದಬಲ್ಲವ. ಅವಳಿಗೆ ಪೂರ್ಣ ಆಸರೆಯನ್ನು ನೀಡಬೇಕೆನ್ನುವ ತವಕ ಅವನಿಗೆ. ಮತ್ಸ್ಯಯಂತ್ರವನ್ನು ಭೇದಿಸಿದವ ಈ ಕುರಿತು ನೈತಿಕ ಜವಾಬ್ದಾರಿ ಹೊಂದಿರಬೇಕು. ಇಲ್ಲವೇ ಹಿರಿಯನೆನಿಸಿಕೊಳ್ಳುವ ಧರ್ಮ ಹೊಣೆ ಹೊತ್ತುಕೊಳ್ಳಬೇಕು. ಇಬ್ಬರೂ ಒಂದಿಷ್ಟು ನಿರ್ಲಿಪ್ತರಿರುವಾಗ ನಡುವಿನವನಾದ ತಾನೇಕೆ ಅಧಿಕ ಪ್ರಸಂಗಕ್ಕಿಳಿಯಬೇಕು ಎಂದು ಭೀಮ ಯೋಚಿಸಿದವನಲ್ಲ. ಅವನ ಈ ನಿಲುವು ದ್ರೌಪದಿಗೆ ಅರ್ಥವಾಗಿತ್ತು. ತಾನು ತೀರ ಅಸಹಾಯಕಳಾಗುವವರೆಗೂ ಇದೇ ಕಾರಣದಿಂದಲೇ ಭೀಮನ ಸಹಾಯ ಯಾಚಿಸುತ್ತಿರಲಿಲ್ಲ. ಅಜ್ಞಾತವಾಸದ ವರ್ಷದ ಅವಧಿಯನ್ನು ಸರಿಯಾಗಿ ಗಮನಿಸಿದರೆ ದ್ರೌಪದಿಯ ಈ ತುಮುಲ ಸ್ಪಷ್ಟವಾಗುತ್ತದೆ. ಅರ್ಜುನ ಹಿಂದೊಮ್ಮೆ ಪಾಪ ಪರಿಹಾರಕ್ಕಾಗಿ ಅಲೆದಾಡಿದ್ದನಷ್ಟೇ. ಆಗ ಸ್ವಂತಕ್ಕಾಗಿ ಅವನು ಸುಖವನ್ನು ಅರಸಿದ್ದ. ಈಗಲೂ ಅದೇ ಕೆಲಸ; ಆದರೆ ಮಗನಿಗಾಗಿ ಕನ್ಯೆಯ ಶೋಧ, ಆಗಲೂ ಪಾಪದ ಪರಿಮಾರ್ಜನೆ, ಈಗಲೂ ಶಾಪದ ಭೋಗ, ಜಗತ್ತಿನಲ್ಲೇ ಬಿಲ್ಲುಗಾರಿಕೆಯಲ್ಲಿ ನಿಸ್ಸೀಮನೆನಿಸಿಕೊಂಡಿದ್ದ ಪಾರ್ಥ ಹೆಂಗಳೆಯಾಗಿ, ಬೃಹನ್ನಳೆಯಾಗಿ ಅಂತಃಪುರವನ್ನು ಸೇರಿಕೊಂಡು ಬಿಟ್ಟ. ಹೆಣ್ಣಿನ ಒಡನಾಟ ಅವನಿಗೆ ಅವನ ಸಖ ಕೃಷ್ಣನಂತೆಯೇ ತುಂಬ ಇಷ್ಟವಾದ ಸಂಗತಿ.

"ಅವರೆಂದೂ ನಮ್ಮನ್ನು ಆ ಕಣ್ಣುಗಳಿಂದ ನೋಡಲಿಲ್ಲ."- ಉತ್ತರಾದೇವಿ ಪ್ರತಿಭಟಿಸಿದಳು

ಈಗ ಕತೆ ಹೇಳುವುದರಲ್ಲಿ ಪುನೀತರು ತೀರಾ ಮುಳುಗಿರಬೇಕು. ಒಮ್ಮೆಲೇ ಮರುಪ್ರಶ್ನೆ ಹಾಕಿದರು.

"ಆ ಕಣ್ಣುಗಳು ಎಂದರೆ ಯಾವ ಕಣ್ಣುಗಳು? ನೀವು ಹೇಳುವ ಆ ದೃಷ್ಟಿ ಪ್ರತ್ಯಕ್ಷ ಅಭಿಮನ್ಯುವಿನಿಂದ ಕೂಡ ನಿಮಗೆ ದೊರೆತದ್ದು ಒಂದೋ ಎರಡೋ ಮಾಸಗಳಷ್ಟು ಮಾತ್ರ. ಮಗನಿಗಾಗಿ ಲಲನೆಯನ್ನು ಶೋಧಿಸುವ ಕಣ್ಣುಗಳು ನಿಮಗೆ ಅರ್ಥವಾಗಲಿಕ್ಕಿಲ್ಲ."

"ಯುದ್ಧವಾಗದಿದ್ದರೆ ಕೌರವ ಪಾಂಡವರ ಸಮಸ್ಯೆಗೆ ಒಂದು ಇತ್ಯರ್ಥ ದೊರೆಯಲಾರದು ಎನ್ನುವುದು ಸ್ಪಷ್ಟವಾಗಿತ್ತು. ಭೀಷ್ಮ ದ್ರೋಣ ಮೊದಲಾದ ಹಿರಿಯರಿಗೆ ಇದು ಒಂದು ತಪ್ಪಿಸಲಾರದ ದುರಂತ ಎಂದು ಅರ್ಥವಾಗಿತ್ತು. ಈ ಅನಿವಾರ್ಯತೆಯನ್ನು ಮನಗಂಡ ಬಳಿಕವೇ ಹಿರಿಯರೆಲ್ಲ ದುರ್ಯೋಧನನ ಬೆಂಬಲಕ್ಕೆ ನಿಂತರು.

ಅತ್ತ ಪಾಂಡವರ ಬಣದಲ್ಲಿ ಧರ್ಮನಿಗೆ ಯುದ್ಧದಲ್ಲಿ ಆಸಕ್ತಿ ಇರುವ ಸಾಧ್ಯತೆ ಇರಲಿಲ್ಲ. ಅರ್ಜುನನಿಗೆ ಯುದ್ಧದ ಅವಶ್ಯಕತೆ ಕಂಡುಬರಲಿಲ್ಲ. ಯಾವ ಹೆಣ್ಣನ್ನು ಗೆದೆಯುವುದಿತ್ತು? ರಾಜ್ಯವನ್ನು ಗೆದ್ದರೆ ದುರ್ಯೋಧನನ ಬದಲು ಧರ್ಮ ರಾಜನಾಗುತ್ತಿದ್ದ. ಅರ್ಜುನ ರಾಜನಾಗುವ ಮಾತು ಇರಲಿಲ್ಲವೆಂದಮೇಲೆ ಯುದ್ಧ ಏಕೆ? ಭೀಮನಿಗೆ ಯುದ್ಧ ಬೇಕು ಎಂದೇನಿರಲಿಲ್ಲ. ದ್ರೌಪದಿ ವಸ್ತ್ರಾಪಹರಣದ ಹೇಯ ದೃಶ್ಯದ ಅವಮಾನದ ದಳ್ಳುರಿ ಭೀಮನ ಮನಸ್ಸಿನಲ್ಲಿತ್ತು. ಅಲ್ಲದೆ ಭೀಮ ದ್ರೌಪದಿಯನ್ನು ಮನಸಾರೆ ಪ್ರೀತಿಸುತ್ತಿರಬೇಕು. ಅಥವಾ ದ್ರೌಪದಿ ತನ್ನನ್ನೇ ಮೆಚ್ಚಿದ್ದಾಳೆಂಬ ಅಂಶ

ಅವನ ಲಕ್ಷ್ಯಕ್ಕೆ ಬಂದಿರಬೇಕು.

ಅಂತೂ ದ್ರೌಪದಿಯ ಇಚ್ಛೆ ಭೀಮನ ಇಚ್ಛೆಯಾಯಿತು. ದ್ರೌಪದಿಗೆ ಯುದ್ಧವು ಏಕೆ ಬೇಕಾಯಿತು? ದುರ್ಯೋಧನನ ಮೇಲಿನ ಕೋಪವೆ? ದುಃಶ್ಯಾಸನನ ಬಗ್ಗೆ ಕ್ರೋಧವೆ? ಅಖಂಡ ಸಾಮ್ರಾಜ್ಯದ ಸಮ್ರಾಜ್ಞಿಯಾಗುವ ಕನಸೆ? ಏನು?

ಇವಾವವೂ ಅಷ್ಟಾಗಿ ಅಲ್ಲ. ಅವಳಿಗೆ ಪಾಂಡವರ ಮೇಲೆ ಉಂಟಾದ ತಿರಸ್ಕಾರವೇ ಮುಖ್ಯ ಪ್ರಚೋದನೆಯಾಗಿರಬೇಕು. ಗಂಡಸರಂತೆ ಪಾಂಡವರು ಈವರೆಗೆ ವರ್ತಿಸಿರಲಿಲ್ಲ. ಒಂದು ಮತ್ಸ್ಯಯಂತ್ರವನ್ನು ಭೇದಿಸಿ ಅರ್ಜುನ ದ್ರೌಪದಿಯನ್ನು ಗೆದ್ದ. ಆದರೆ ಅತ್ಯಂತ ಅನೈಸರ್ಗಿಕ ಪ್ರಥೆಯಾಗಿ ಐವರು ಸಹೋದರರು ಅವಳನ್ನು ವಿವಾಹವಾದರು. ನೆಚ್ಚಿನ ರಾಜಕುಮಾರಿ ಐವರ ಸೇವೆಗೆ ಅಣಿಯಾಗಬೇಕಾಯಿತು. ಉಳಿದ ನಾಲ್ವರಿಗೆ ಇನ್ನೂ ನಾಲ್ಕು ವಧುಗಳನ್ನು ತರುವದು ಅಷ್ಟೊಂದು ದುಸ್ತರವಾಗಿತ್ತೆ? ಕೌರವರು ಪ್ರತಿಯೊಬ್ಬರಿಗೂ ಪ್ರತ್ಯೇಕ ಮಡದಿ ಇದ್ದಳು. ದ್ರೌಪದಿಯಂತಹ ಸ್ತ್ರೀಯನ್ನು ಭೋಗದ ಬೆಲೆವೆಣ್ಣನ್ನಾಗಿ ಮಾಡಿದರವರು! ಅದನ್ನು ಈಗ ಐದೂ ಗಂಡಂದಿರು ನೋಡುತ್ತ ಕುಳಿತಿದ್ದರು. ಇವರಿಗೆ ಯಾಕೆ ಗಂಡಸರೆನ್ನಬೇಕು?

ಯುದ್ಧವಾಗಲಿ, ಯುದ್ಧ ಆಗಿಯೆ ಬಿಡಲಿ. ಕೌರವರು ಗೆದ್ದರೆ ತಾನು ವಿಧವೆಯಾಗುವಳು. ಹೇಡಿ ಪುರುಷರ ಹೆಂಡತಿಯಾಗಿ ಕಾಡು ಕಾಡು ಅಲೆಯುವ ಭಾಗ ಮುಗಿಸಿಯಾಗಿದೆ. ತಾಯಿಯಷ್ಟೇ ನಿಖರ. ತಂದೆ ಯಾರು ಎನ್ನುವುದು ಗೊತ್ತಾಗದ ಐವರು ಉಪಪಾಂಡವರ ರೂಪದಲ್ಲಿ ಪುತ್ರರು. ಇಂತಹ ವಿಚಿತ್ರ ಸಂಸಾರದಲ್ಲಿ ಯೌವನ ಕಳೆದು ಹೋಗಿದೆ. ನೆಮ್ಮದಿ ತರುವಂತಹ ಯಾವುದೂ ಘಟನೆ ನಡೆದಿಲ್ಲ. ತನ್ನನ್ನು ಗೆದ್ದು ತಂದ ಬಿಲ್ಲುಗಾರ ಅರ್ಜುನ ಸುಭದ್ರೆಯ ಬಾಹುಗಳಲ್ಲಿ ಸಂತೋಷ ಪಡೆಯುತ್ತಾನೆ. ಉಲೂಪಿಯನ್ನೂ ಧೇನಿಸುತ್ತಾನೆ. ಅಂದಮೇಲೆ ಮಡದಿ ಎನ್ನುವ ವ್ಯಕ್ತಿಗೆ ಈ ಗಂಡಂದಿರಿಂದ ಯಾವ ಕರ್ತವ್ಯ ಸಂದಿದೆ? ಎಂಬ ಪ್ರಶ್ನೆ ದ್ರೌಪದಿಯಲ್ಲಿ ಹುಟ್ಟಿರುವದು ಸ್ವಾಭಾವಿಕ. ದ್ರೌಪದಿಯನ್ನು ಪಣಕ್ಕೆ ಹಚ್ಚಿ ಸೋತರು. ತುಂಬಿದ ಸಭೆಯಲ್ಲಿ ಬೆತ್ತಲೆಗೊಳಿಸಿದರು. ಕಾಡಿನ ಜೀವನಕ್ಕೆ ಎಳೆದೊಯ್ದರು. ಅಜ್ಞಾತವಾಸದಲ್ಲಿ ಹೆರವರ ದಾಸಿಯನ್ನಾಗಿಸಿದರು. ಹೀಗೆ ಹೆಂಡತಿಯ ಮೇಲೆ ಅಧಿಕಾರ ಸಾಗಿಸಿದರು, ಈ ಪಾಂಡವರು.

ಆದರೆ ಗಂಡಸು ಮಾಡಬೇಕಾದ ಕೆಲಸವನ್ನು ಮಾಡುವದಾಗಿರಲಿಲ್ಲ. ಧರ್ಮದ ಸೆರಗಿನಲ್ಲಿ ಮುಖ ಮುಚ್ಚಿಕೊಳ್ಳುತ್ತ ಕುಳಿತ ಧರ್ಮರಾಯ ತನ್ನ ಭಂಡತನವನ್ನೆಲ್ಲ ಮುಚ್ಚಿಕೊಳ್ಳುತ್ತಿದ್ದ. ಅವನಿಗೆ ವಿಧೇಯತೆ ತೋರಿಸುವ ಭರದಲ್ಲೋ ನೆವದಲ್ಲೋ ತಮ್ಮಂದಿರೂ ಹೇಡಿತನವನ್ನೆ ಅಪ್ಪಿಕೊಂಡಿದ್ದಾರೆ.

'ಗೆದ್ದರೆ ದ್ರೌಪದಿಯು ಕೊನೆಗೂ ಗೆದ್ದಳು. ರಾಜ್ಯದ ಒಡತಿ ಆದಳು. ಆದ ಅವಮಾನದ ಸೇಡು ತೀರಿಸಿಕೊಂಡಳು' ಎನ್ನುವಂತಾಗುತ್ತದೆ. ಸೋತರೆ ಈ ಹೇಡಿ ಗಂಡಂದಿರಿಗೆ ಕ್ಷತ್ರಿಯಯೋಗ್ಯ ಸಾವಾದರೂ ದೊರಕೀತು. ಗಂಡನಿಲ್ಲದವಳು ವಿಧವೆ. ಹೇಡಿ ಗಂಡನ ಹೆಂಡತಿ ಅದಕ್ಕಿಂತ ಕಡೆ ಎಂದು ದ್ರುಪದ ರಾಜನ ವೀರಪುತ್ರಿಗೆ ಅನಿಸಿದರೆ ಅದು ಸಹಜವೇ. ಅವಳಿಗೆ ಕೌರವರ ಮೇಲೆ ಸಿಟ್ಟಿಗೇಳುವುದಕ್ಕೆ ಒಂದು ಕಾರಣವಿದ್ದರೆ ಪಾಂಡವರ ಮೇಲೆ ಕ್ರೋಧ ತಾಳಲು ಹತ್ತು ಕಾರಣಗಳು ಉಂಟಾಗಿದ್ದವು.

ಇತ್ತ ಕೃಷ್ಣನಿಗೆ ಯುದ್ಧವಾಗುವದು ಅವಶ್ಯಕ ವಿಷಯವಾಗಿತ್ತು. ಕೌರವ ಪಾಂಡವರು ಒಂದಾದರೆ ಹಸ್ತಿನಾಪುರದಷ್ಟು ಬಲಶಾಲಿ ರಾಜ್ಯ ಇನ್ನೊಂದಾಗುತ್ತಿರಲಿಲ್ಲ. ದೊಡ್ಡದೊಂದು ಯುದ್ಧವಾಗಿ ಕೌರವರು ಹಾಗೂ ಪಾಂಡವರ ಬಣಗಳಲ್ಲಿ ಶಕ್ತಿ ಹ್ರಾಸವಾಗಲಿ! ಯಾರು ಗೆದ್ದರೆ ಏನಂತೆ? ಒಂದು ಪಕ್ಷ ಬಲರಾಮನದು. ಪಾಂಡವರ ಪಕ್ಷ ಕೃಷ್ಣನದು. ಗೆದ್ದವರು ಕೂಡ ಯುದ್ಧದ ಬಳಿಕ ಸೋತವರಷ್ಟೇ

ಬಲಹೀನರಾಗಿರುತ್ತಾರೆ. ಸಣ್ಣಪುಟ್ಟ ರಾಜರುಗಳೆಲ್ಲ ಎರಡರಲ್ಲೊಂದು ಬಣವನ್ನು ಹಿಡಿದು ನಾಶವಾಗುತ್ತಾರೆ. ಆಗ ದ್ವಾರಕೆಯೊಂದೇ ಪ್ರಬಲ ಸ್ಥಾನದಲ್ಲಿ ಉಳಿಯುವುದು. ಕೃಷ್ಣನಂತಹ ರಾಜಕೀಯ ಮಹಾತ್ವಾಕಾಂಕ್ಷಿ ಇದನ್ನೇ ಬಯಸಿದ್ದು ಸ್ಪಷ್ಟವಿತ್ತು. ಎಂತಲೇ ಯುದ್ಧವನ್ನು ನಿಶ್ಚಿತಗೊಳಿಸಲು ಆತ ತಾನೇ ಸಂಧಾನದ ಹೊಣೆ ಹೊತ್ತುಕೊಂಡ.

ಪಾಂಡವರು ಸಂಧಾನಕ್ಕೆಂದು ಹೋಗುವ ಕೃಷ್ಣನಿಗೆ ಏನನ್ನು ಹೇಳಿದ್ದರೋ, ಅಲ್ಲಿ ಕೌರವರ ಮುಂದೆ ಕೃಷ್ಣನು ಪ್ರತ್ಯಕ್ಷನಾಗಿ ಹೇಳಿದ್ದೇನೋ? ಯಾರು ಬಲ್ಲರು?

ಐದು ಗ್ರಾಮಗಳನ್ನು ಕೊಟ್ಟರೂ ಸಾಕು. ಯುದ್ಧ ಬೇಡ ಎಂದು ಧರ್ಮರಾಜ ಹೇಳಿದ್ದ. ಅರ್ಜುನ ಏನೂ ಹೇಳಲಿಲ್ಲ. ನಕುಲ ಸಹದೇವರನ್ನು ಯಾರೂ ಕೇಳಲೇ ಇಲ್ಲ. ದ್ರೌಪದಿ ಮಾತ್ರ ಬಿಚ್ಚಿದ ಹೆರಳನ್ನು ಮತ್ತೆ ಮತ್ತೆ ಉಚ್ಚಿ ತೋರಿಸಿದಳು. ತನಗೆ ಆದ ಘೋರ ಅವಮಾನದ ಸೇಡು ತೀರಿಸಿಕೊಳ್ಳಲು ಇದೊಂದೆ ಅವಕಾಶ ಎಂದು ಎತ್ತಿ ತೋರಿಸಿದಳು. ಭೀಮ ಮಾತ್ರ ದ್ರೌಪದಿಯ ಬದಿ ತೆಗೆದುಕೊಂಡ. ಅವನಿಗೆ ಧರ್ಮರಾಯನ ನಿರ್ಲಿಪ್ತತೆಯಾಗಲಿ, ಅರ್ಜುನನ ಸ್ವಾರ್ಥಸಾಧಕತೆಯಾಗಲೀ ಸೇರಿಕೆಯಾಗಲಿಲ್ಲ. ಅವನು ಯುದ್ಧಪ್ರಿಯನಲ್ಲದಿದ್ದರೂ ಎದುರಾಳಿಗೆ ಬೆನ್ನು ತೋರಿಸುವವನಲ್ಲ. ವೈಯಕ್ತಿಕವಾಗಿಯಂತೂ ಆತ ಒಳ್ಳೇ ಬಲಶಾಲಿ, ಅವನಿಗೆ ಯುದ್ಧ ತಂತ್ರಗಳು ಗೊತ್ತಿರಲಿಲ್ಲ. ಕೇವಲ ಒಬ್ಬ, ಇನ್ನೊಬ್ಬನೊಡನಾಡುವ ಕಾಳಗವನ್ನು ಅರಿತವ. ಆದರೆ ತಮಗಾಗಿ ಸರ್ವಸ್ವವನ್ನೂ ತ್ಯಾಗ ಮಾಡಿದ ದ್ರೌಪದಿಗಾಗಿ ಏನು ಮಾಡಿದರೂ ಕಡಿಮೆ ಎಂದಾತ ಭಾವಿಸಿದ.

ಕೃಷ್ಣನಿಗೆ ಬೇಕಾದದ್ದು ಯುದ್ಧ. ದ್ರೌಪದಿಗೆ ಬೇಕಾಯಿತು ಯುದ್ಧ. ದ್ರೌಪದಿಯ ಬಯಕೆಗೆ ಭೀಮನ ಅಸ್ತು ದೊರಕಿತು. ಅಂದ ಮೇಲೆ ಯುದ್ಧ ಬೇಕಾದವರ ಪರಡಿಯ ತೂಕ ಹೆಚ್ಚಿತು. ಯುದ್ಧಕ್ಕೆ ಜಯ ದೊರಕಿತು."

ಸಂಧ್ಯಾವಂದನೆಯ ಸೂಚನೆ ನೀಡಲು ಬಂದು ನಿಂತಿದ್ದ ಶಿಷ್ಯ ಕೇಶವನಿಗೆ ಈ ಹಂತದಲ್ಲಿ ಪ್ರವೇಶ ಮಾಡುವದು ಸಮಂಜಸವೆನಿಸಿರಬೇಕು.

ಆತ ನೇರವಾಗಿ ಮಧ್ಯೆ ಪ್ರವೇಶಿಸಿ ಪುನೀತರೆದುರು ನಿಂತು ಕೈ ಮುಗಿದು ಹೇಳಿದ:

"ಗುರುಗಳೇ, ಸಂಧ್ಯಾಸಮಯ ಜಾರಿ ಹೋಗುತ್ತಿದೆ. ತಾವೆಲ್ಲ ಈಗ ವಿಧಿಗಳನ್ನು ಪೂರೈಸುವದಾಗಬೇಕು."

**

"ಯುದ್ಧ ನಡೆಯಬೇಕೆಂದು ನಿರ್ಧಾರವಾದೊಡನೆ ಕೃಷ್ಣ ದ್ವಾರಕೆಗೆ ಮರಳಿ ಹೋದ. ಅಲ್ಲಿಗೇ ದುರ್ಯೋಧನ ಹೋದ. ಅರ್ಜುನನಂತೂ ಅವನ ಬೆನ್ನ ಹಿಂದೆಯೆ ದ್ವಾರಕೆಗೆ ತೆರಳಿದ್ದ.

ಕೌರವರಿಗೆ ಸಹಾಯ ನೀಡಬೇಕೆಂದು ಕೃಷ್ಣನಲ್ಲಿ ದುರ್ಯೋಧನ ಕೇಳಿಕೊಂಡನಷ್ಟೆ. ಕೃಷ್ಣ ನಿಜವಾಗಿಯೂ ಒಬ್ಬ ದೇವಪುರುಷನಾಗಿದ್ದರೆ ಆಗಲಾದರೂ ದುರ್ಯೋಧನನಿಗೆ ತಿಳಿಸಿ ಹೇಳಬೇಕಾಗಿತ್ತು. ಪಾಂಡವರದೇ ನ್ಯಾಯವಾಗಿದ್ದರೆ ದುರ್ಯೋಧನನಿಗೆ ಯಾವದೇ ರೀತಿಯ ಸಹಾಯ ನೀಡುವದನ್ನು ನಿರಾಕರಿಸಬೇಕಾಗಿತ್ತು ಹಾಗೂ ತನ್ನ ಎಲ್ಲ ಶಕ್ತಿಯನ್ನು ಪಾಂಡವರ ಪರವಾಗಿ ಬಳಸುವದಾಗಿ ಖಡಾಖಂಡಿತವಾಗಿ ಹೇಳಿ ಬಿಡಬೇಕಿತ್ತು. ಹಾಗೆ ಆತ ಮಾಡಿದ್ದರೆ ದುರ್ಯೋಧನ ಯುದ್ಧದ ಬಗ್ಗೆ ಬಹುಶಃ ಪುನಃ ಆಲೋಚಿಸುತ್ತಿದ್ದ. ಭೀಷ್ಮ ದ್ರೋಣರು ಯುದ್ಧ ಬೇಡವೆಂದು ಅವನಿಗೆ ಸ್ಪಷ್ಟ ಸಲಹೆ ನೀಡುತ್ತಿದ್ದರು. ಯುದ್ಧವೇ ಆಗುತ್ತಿರಲಿಲ್ಲ.

ಕೃಷ್ಣನಿಗೆ ಅದೆಲ್ಲಿ ಬೇಕಾಗಿತ್ತು? ದುರ್ಯೋಧನನಿಗೆ ತನ್ನ ಸೈನ್ಯವನ್ನು ಕೊಟ್ಟ. ತಾನು ಮಾತ್ರ ಪಾಂಡವರ ಶಿಬಿರದಲ್ಲಿ ಇರುವವ ಎಂದೂ ಹೇಳಿದ. ಆಗ ದುರ್ಯೋಧನ ಅವನಿಂದ ಒಂದು

ಮಾತು ಪಡೆದುಕೊಂಡ. ಯುದ್ಧದಲ್ಲಿ ಯಾರಿಗೇ ಸೋಲಾಗಲಿ, ಗೆಲುವಾಗಲಿ, ಕೃಷ್ಣನ ಬಳಿಯಿರುವ ಮಾರಕಾಸ್ತ್ರಗಳನ್ನು ಬಳಸಕೂಡದು ಎಂದು. ಮಾನವ ಜನಾಂಗಕ್ಕೇ ಮಾರಕವಾದ ಅಂತಹ ಅಸ್ತ್ರಗಳನ್ನು ಕೃಷ್ಣ ಬಳಸುವ ಆಲೋಚನೆ ಮಾಡಿರಲಿಕ್ಕಿಲ್ಲ. ಆದರೆ ಸಂಶೋಧಿಸಿ, ಪರಿಷ್ಕರಿಸಿ ಅವುಗಳನ್ನು ಜಾಗ್ರತ ರೂಪದಲ್ಲಿ ಸದಾ ಇಟ್ಟುಕೊಳ್ಳುವ ಕಾಳಜಿಯನ್ನು ಮಾತ್ರ ಆತ ವಹಿಸಿದ್ದ. ಕೊನೆಯ ಉಪಾಯವಾಗಿ ಆತ ಆ ಮಾರಕಾಸ್ತ್ರಗಳನ್ನು ಬಳಸುವ ಸಂಭವ ಇದ್ದೇ ಇತ್ತು. ಅಂತೂ ಕೃಷ್ಣನ ರಾಜಕಾರಣ ಕುಟಿಲತೆಯಿಂದ ಕೂಡಿದ್ದುದು. ಒಂದು ಪಕ್ಷದಲ್ಲಿ ತಾನು, ಇನ್ನೊಂದು ಪಕ್ಷದಲ್ಲಿ ತನ್ನ ಸೈನ್ಯ- ಹೀಗೆ ಎರಡೂ ಪಕ್ಷಗಳಿಗೆ ಯುದ್ಧದ ನೆರವು ನೀಡಿದ ಉದಾಹರಣೆ ಇನ್ನೊಂದಿದೆಯೆ? ತನ್ನ ಸೋದರಮಾವನನ್ನೇ ಕೊಂದ ವ್ಯಕ್ತಿಗೆ ದಾಯಾದಿಗಳು ಪರಸ್ಪರ ಸೆಣಸಾಡುವುದು ಯೋಗ್ಯವೆನಿಸಿರಬೇಕು. ಕಂಸನಿಗೆ ಸೋದರಳಿಯನಾಗಿದ್ದ ಆ ಕೃಷ್ಣನಿಗೆ ತನ್ನ ಸೋದರಳಿಯನ ಭೀತಿ ಯಾಕೆ ಇದ್ದಿರಬಾರದು? ಅಭಿಮನ್ಯು ತನ್ನೀ ಸೋದರಮಾವನನ್ನು ಕೊಂದು ಗದ್ದುಗೆಗೆ ಬಂದರೆ? ಕೃಷ್ಣ ಅಭಿಮನ್ಯುವಿನ ಹತ್ಯೆಯನ್ನು ಅದೆಂತು ನೆರವೇರಿಸಿದನೆಂದು ಹೇಳಬೇಕಾಗಿಲ್ಲ. ಅರ್ಜುನನನ್ನು ಬೇರೆಡೆಗೆ ಕಳಿಸಿದ್ದು ಅವನೇ. ಚಕ್ರವ್ಯೂಹದೊಳಗೆ ಹೊಕ್ಕ ಮೇಲೆ ಅಭಿಮನ್ಯು ಬರಲಾರ ಎಂಬುದೂ ಕೃಷ್ಣನಿಗೆ ಗೊತ್ತಿತ್ತು."

ಈಗ ಮಾತ್ರ ಉತ್ತರೆಗೆ ತಡೆದುಕೊಳ್ಳುವುದಾಗಲಿಲ್ಲ. ಪುನೀತರ ತರ್ಕ ಸರಣಿಯನ್ನು ಸುಲಭವಾಗಿ ನುಂಗಲಾಗದೇ ಮುಖ ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅತ್ತಳು.

ಅಳು ನಿಂತ ಮೇಲೆ ಉತ್ತರಾದೇವಿ ಕುಲಪತಿಗಳನ್ನುದ್ದೇಶಿಸಿ "ಪುನೀತರ ಮಾತುಗಳು ನಿಮಗೆ ಬೇಸರ ತರಿಸಿದ್ದರೆ ಆ ಹಿಂಸೆಗೆ ನಾನೇ ಕಾರಣ. ಕ್ಷಮಿಸಿರಿ" ಎಂದು ಬೇಡಿದಳು.

ಕೀರ್ತಿಶರ್ಮರು "ಇಲ್ಲ ತಾಯಿ, ಈ ಪುನೀತನೆಂಬ ಜ್ವಾಲಾಮುಖಿಯಲ್ಲಿ ಅವ್ಯಕ್ತ ರೊಚ್ಚಿನ ಶಕ್ತಿ ಇದೆ. ಅದು ಕಾಲಕಾಲಕ್ಕೆ ಏನನ್ನು ಉಗುಳುವುದೋ ನೋಡಬೇಕು. ಆದರೆ ಪುನೀತ ಎಂಬ ವ್ಯಕ್ತಿಯ ಬಗ್ಗೆ ನನಗೆ ಅಭಿಮಾನವೇ ಇದೆ."

**

ಮರುದಿನದ ಸಂವಾದದಲ್ಲಿ ಪುನೀತರು ಭಗವದ್ಗೀತೆಯ ನಿಮಿತ್ತದಿಂದ ಶ್ರೀಕೃಷ್ಣನ ಬಗ್ಗೆ ತಮ್ಮ ನಿಲುವನ್ನು ಇನ್ನಷ್ಟು ಸ್ಫುಟಗೊಳಿಸಿದರು.

"ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ, ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ- ಎಂದು ಹೇಳಿದ ಕೃಷ್ಣನ ಮಾತಿನಲ್ಲಿ ಎಷ್ಟೊಂದು ಅಹಂ ಇದೆ! ಅದಕ್ಕಿಂತ ಹೆಚ್ಚಾಗಿ ಆಭಾಸವಿದೆ.

"ಎಲ್ಲವೂ ನಿಯತಿಯಂತೆ ನಡೆಯುತ್ತಿದ್ದರೆ, ಧರ್ಮದ ಗ್ಲಾನಿಯಾದರೂ ಏಕೆ ಆಗಬೇಕು? ಸರ್ವಶಕ್ತಿಗಳಿಗೂ ಭಗವಂತನೇ ಪ್ರೇರಕನಾಗಿದ್ದರೆ ಪ್ರಮಾದಗಳಿಗೆಲ್ಲ ಆತನೆ ಹೊಣೆಗಾರನಲ್ಲವೇ? ಅಂದ ಮೇಲೆ ಈ ಕೃಷ್ಣ ಹೇಳುವುದೇ ಸತ್ಯವಾಗಿದ್ದರೆ, ಜಗತ್ತಿನಲ್ಲಿ ಅಧರ್ಮ, ಧರ್ಮಗಳಿಗೂ ಒಂದು ಅಳತೆ ಇದೆ. ಇಷ್ಟು ಕ್ಷಣವೆಂದರೆ ಒಂದು ಗಳಿಗೆ, ಇಷ್ಟು ಗಳಿಗೆಗಳೆಂದರೆ ಒಂದು ಪ್ರಹರ, ಇಷ್ಟು ಪ್ರಹರಗಳೆಂದರೆ ಒಂದು ದಿನ ಎಂಬ ಕೋಷ್ಟಕದಂತೆ, ಇಷ್ಟು ಅಧರ್ಮವೆಂದರೆ ಅದು ಧರ್ಮದ ಗ್ಲಾನಿ- ಆಗ ಪರಮಾತ್ಮ ತನ್ನ ಅವತಾರವನ್ನೆತ್ತುತ್ತಾನೆ ಎಂದರ್ಥವಲ್ಲವೆ? ಹಾಗಿದ್ದರೆ ಪರಮಾತ್ಮನ ಅವತಾರವಾಗುವವರೆಗೂ ನಡೆದ ಅನ್ಯಾಯಗಳಿಗೆಲ್ಲ ಪರಿಹಾರವೇ ಇಲ್ಲ ಎಂದಾಯಿತಲ್ಲವೆ?

ದುಷ್ಟ ಶಕ್ತಿಗಳನ್ನು ಅಲ್ಲಿಗಲ್ಲಿಗೇ ನಿಗ್ರಹಿಸುವ, ಚಿವುಟಿ ಹಾಕುವ ಶಕ್ತಿ ಪರಮಾತ್ಮನೆನ್ನಿಸಿಕೊಳ್ಳುವ ಭಗವಂತನಿಗೆ ಇಲ್ಲವೆಂದಾಯಿತಲ್ಲ. ಕೃಷ್ಣನಂತಹ ಅವತಾರಿಗಳಂತೂ ಬೇಡವೇ ಬೇಡ. ಒಬ್ಬ

ದುರ್ಯೋಧನ, ಒಬ್ಬ ದುಃಶಾಸನ ಇವರನ್ನು ಹೊಸಕಿ ಹಾಕಲು ಎಷ್ಟೊಂದು ತ್ಯಾಗ ಮಾಡಬೇಕು? ಭೀಷ್ಮ ದ್ರೋಣ, ಕರ್ಣ, ಅಭಿಮನ್ಯು, ಉಪಪಾಂಡವರು ಈ ಎಲ್ಲ ನಿಷ್ಕಲಂಕರು ಹತರಾಗಬೇಕೆ? ಘಟೋದ್ಗಜ, ಬಬ್ರುವಾಹನರು ಯುದ್ಧದಲ್ಲಿ ತಂದೆಗೆ ನೆರವಾಗಿ ಹೆಣವಾಗಲಿಕ್ಕೇ ಹುಟ್ಟಬೇಕೆ? ಎಂದು ಪುನೀತರು ದೀರ್ಘವಾದ ಪ್ರವಚನ ಹೇಳಿದರು.

ಕೀರ್ತಿಶರ್ಮರು ಈಗ ತಮ್ಮ ಬಾರಿಯನ್ನು ಆರಂಭಿಸಿದರು. ಸತ್ಯಾಶ್ರಯನಿಗೆ ಕುತೂಹಲದ ಸಂಭ್ರಮ. ಉತ್ತರಾದೇವಿಗೆ ಉತ್ಸಾಹ-ಜೊತೆಗೇ ಅಳುಕು. ತಮ್ಮ ಕುಲಪತಿ ಪುನೀತರ ವಾದವನ್ನು ಸದೆಬಡಿಯುವ ವಿಶ್ವಾಸವಿದ್ದರೂ, ತಪ್ಪಿ ಅವರೇ ಸೋಲನ್ನೊಪ್ಪಿದರೆ? ಎಂಬ ದುಗುಡ.

"ಪುನೀತರೇ, ಮಹಾಭಾರತದ ಕತೆಯನ್ನು ನೀವು ಹೇಳುವಂತೆ ನಾವು ಕುಳಿತು ಕೇಳಿಕೊಂಡಿದ್ದೇವೆ. ಗೀತೆಯ ಮಾತು ಬಂದಾಗ ಅದು ತತ್ವಜ್ಞಾನದ ಚರ್ಚೆಯಲ್ಲಿ ಪರ್ಯವಸಾನಗೊಳ್ಳುವುದೂ ಸ್ವಾಭಾವಿಕವೇ. ಆದ್ದರಿಂದ ಚರ್ಚೆಗೆ ಅವಕಾಶ ಕೊಡುವ ಸಮಯ ಇನ್ನೂ ಬಂದಿಲ್ಲವಾದ್ದರಿಂದ ಗೀತೆಯ ಕುರಿತು ನಿಮ್ಮಲ್ಲುಂಟಾಗಿರುವ ಅಭಿಪ್ರಾಯದ ಬಗ್ಗೆ ನಾನು ಪ್ರತಿಕ್ರಿಯಿಸುವದಿಲ್ಲ.

ಎಲ್ಲ ತಂತ್ರಗಳನ್ನು ಬಳಸಿ ಗದ್ದುಗೆ ಏರಿದ ರಾಜರನ್ನು ಭೂಲೋಕದಿಂದ ದೇವರೆಂದು ಕರೆಯಲಾಗದು. ಅವರು ತಮ್ಮ ಸಾರ್ವಭೌಮತ್ವವನ್ನು, 'ದೈವತ್ವ'ವನ್ನು ಉಳಿಸಿಕೊಳ್ಳಲು ವೈಚಾರಿಕ ಉನ್ನತಿಗೆ ಅಡ್ಡಗಾಲು ಆದಾರು,' ಎಂಬ ನಿಲುವು ನಿಮ್ಮದು. ಆದ್ದರಿಂದ ಮಹಾಭಾರತದ ಐತಿಹಾಸಿಕ ಅಂಶಗಳನ್ನು ಇನ್ನೊಮ್ಮೆ ಪರಿಶೀಲಿಸೋಣ. ಕುರುಕ್ಷೇತ್ರ ಯುದ್ಧದ ತಾಪದಿಂದ ಪೆಟ್ಟುತಿಂದು ನಲುಗುತ್ತಿರುವ ಜೀವಗಳು ಇನ್ನೂ ಅಲ್ಲಲ್ಲಿ ಉಸಿರು ಹಿಡಿದು ಜೀವಿಸುತ್ತಿವೆ. ಅವರನ್ನು ಕಂಡು ಬರುವಾ. ಆಗಿನ ಜನಸಾಮಾನ್ಯರಿಗೆ ಕೃಷ್ಣ ದೇವರಾಗಿ ಕಂಡಿದ್ದನೋ? ಕೇವಲ ಕಾರಸ್ಥಾನಿ ಎನಿಸಿದ್ದನೊ? ಪಾಂಡವರೇನೋ ಗೆದ್ದು ರಾಜ್ಯವಾಳತೊಡಗಿದರು. ಪ್ರಕೃತ ದುರ್ಯೋಧನನ



ಅವನತಿಯನ್ನು ಸಹಿಸದ ಕೆಲವರಾದರೂ ಪರೀಕ್ಷಿತನ ನಾಶಕ್ಕೆ ಯತ್ನಿಸುತ್ತಿದ್ದಾರೆಯೆ? ಈ ಪ್ರತೀಕಾರದ ಕಿಡಿ ಮುಂದೊಮ್ಮೆ ಭುಗಿಲೆದ್ದು ಇನ್ನೊಂದು ಮಹಾಯುದ್ಧಕ್ಕೆ ಎಡೆಮಾಡಿಕೊಟ್ಟೀತೆ? ಈ ನಮ್ಮ ಅನ್ವೇಷಣೆಯಿಂದ ನಿಷ್ಪನ್ನಗೊಳ್ಳುವ ಫಲಶ್ರುತಿ ವೈಚಾರಿಕ ಮುನ್ನಡೆಗೆ ಸಹಾಯವಾದೀತು" ಎಂದು ನುಡಿದು ಕೀರ್ತಿಶರ್ಮರು ಚರ್ಚೆಗೆ ಮುಕ್ತಾಯ ಹೇಳಿದರು.

ಆ ಶುಕ್ರವಾರದಂದು ಸೂರ್ಯನ ಅಪರಾಹ್ನದ ಬಿಸಿಲು ಬೀಳತೊಡಗಿದಾಗ ಕೀರ್ತಿಶರ್ಮರು ಯಾತ್ರೆಗೆ ಹೊರಡಲನುವಾದರು. ಅವರ ಹಿಂದಿನಿಂದ ಕುಶಲಮತಿ ಹಾಗೂ ತೀವ್ರಗ್ರಾಹಿ ಎಂಬಿಬ್ಬ ಶಿಷ್ಯರು ಬಂದರು. ಪುನೀತರು ತಮ್ಮ ಶಿಷ್ಯವೃಂದದೊಡನೆ ಕೈಕಟ್ಟಿಕೊಂಡು ನಿಂತು, ಅಗಲಿಕೆ ಅನಿವಾರ್ಯವೆಂಬಂತೆ ಗೋಣು ಹಾಕಿದರು. ಆಶ್ರಮದಿಂದ ತುಸು ದೂರದಲ್ಲಿರುವ ಪುಷ್ಕರಣಿಯ ವರೆಗೂ ಹೋಗಿ ಬೀಳ್ಕೊಟ್ಟರು.

ಇಳಿಹೊತ್ತಿನ ಸಮಯದಲ್ಲಿ ಕುಲಪತಿಗಳ ಪರಿವಾರವು ಪರೀಕ್ಷಿತರಾಜನು ನೆಲೆಗೊಳಿಸಿದ್ದ ಒಂದು ಚಿಕ್ಕ ಧರ್ಮಶಾಲೆಯನ್ನು ಸೇರಿತು.

ಕೀರ್ತಿಶರ್ಮರು ಸಾಯಂ ಸಂಧ್ಯಾವಂದನೆಯನ್ನು ಏಕಚಿತ್ತದಿಂದ ಮಾಡಲು ಕಷ್ಟವಾಯಿತು. 'ಸರ್ವ ದೇವ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ' ಎಂದು ಹೇಳುವಾಗ ಪುನೀತರು ಕೇಳಿದ್ದ ಪ್ರಶ್ನೆ ಇದಿರಾಗತೊಡಗಿತು. ಕೇಶವ ಅಂದರೆ ಯಾವ ಕೇಶವ? ಬ್ರಹ್ಮಾಂಡಕ್ಕೆಲ್ಲ ಒಬ್ಬನೇ ಕೇಶವ ಸರಿ. ಆದರೆ ಒಂದಕ್ಕಿಂತ ಹೆಚ್ಚು ಬ್ರಹ್ಮಾಂಡಗಳಿವೆ ಎಂದಾದರೆ, ಅಲ್ಲೆಲ್ಲ ಒಬ್ಬೊಬ್ಬ ಕೇಶವ ಇರಬಹುದೆ? ಅಂದಾಗ ಏಕೋ ದೇವಃ ಕೇಶವಃ- ಎನ್ನುವುದು ಎಷ್ಟರ ಮಟ್ಟಿಗೆ ಸರಿ? ಅಂತೂ ಈ ನಿತ್ಯ ಸ್ತುತಿ ಅಷ್ಟೊಂದು ಪ್ರಸ್ತುತ ಅಲ್ಲವೇನೋ? ಎಂಬೆಲ್ಲ ವಿಚಾರ ಸುಳಿದು ಹೋಯಿತು.

**

ಉತ್ತರಾದೇವಿ ಸತ್ಯಾಶ್ರಯರೊಡನೆ ರಾಜಧಾನಿಗೆ ಮರಳುವಾಗ ಒಣಗಿದ ಕಬ್ಬಿನಂತಾಗಿದ್ದಳು. ಉದ್ವಿಗ್ನತೆ ಕಡಿಮೆಯಾಗಿ ನಿರ್ವಿಕಾರಚಿತ್ತದ ಆಲೋಚನೆ ಅವಳ ಸ್ವಭಾವವಾಗತೊಡಗಿತ್ತು. ಪುನೀತರ ಬಗ್ಗೆ ದ್ವೇಷ ಈಗ ಉಳಿದಂತಿರಲಿಲ್ಲ. ಅದರ ಬದಲು ಜಿಜ್ಞಾಸೆ ಮೂಡತೊಡಗಿತ್ತು. ಪುನೀತರು ಪಾಂಡವರ ಬಗ್ಗೆ ತೃಣೀಕರಿಸಿ ಹೇಳುವಷ್ಟು ಹೀನತೆ ಇರಲಿಕ್ಕಿಲ್ಲ. ಆದರೆ ಮಹಾಭಾರತದಲ್ಲಿಯ ನಿರೂಪಣೆಯಲ್ಲಿ ಅತಿವೃಷ್ಟಿ ಅನಾವೃಷ್ಟಿ ನಡೆದಿದೆ ಎಂದವಳಿಗೆ ಮನದಟ್ಟಾಯಿತು. ತನಗೆ ಗುರುಸ್ಥಾನದಲ್ಲಿದ್ದ ಕುಲಪತಿಗಳಿಗೆ ಈ ವಿಷಯ ಅಷ್ಟಿಷ್ಟು ಗೊತ್ತೂ ಇದೆ ಎಂಬ ಗುಮಾನಿಯೂ ಅವಳಿಗಾಯಿತು.

ವಿಷಯವನ್ನು ಆಮೂಲಾಗ್ರವಾಗಿ ಶೋಧಿಸಿ ಸಂಗ್ರಹಿಸಿ ಇದಮಿತ್ಥಂ ಎಂದು ಇದ್ದಕ್ಕಿದ್ದಂತೆ ಹೇಳುವದೇ ಒಂದು ವಿಶಿಷ್ಟ ನ್ಯಾಯ. ಅದನ್ನು ಹಿಂದಿನವರು ಮಾಡಿಸದಿದ್ದರೆ ತಾನು ಮಾಡಬೇಕು ಎಂದೂ ರಾಜಮಾತೆಗೆ ಹಟ ಹುಟ್ಟಿಕೊಳ್ಳತೊಡಗಿತು. ರಾಜರೆಂದರೆ, ರಾಜಮನೆತನದವರೆಂದರೆ ಕೇವಲ ಹೊಗಳುಭಟ್ಟಂಗಿಗಳ ಮಾತುಗಳಿಗೆ ಮುಖದಗಲ ತುಟಿ ಹಿಗ್ಗಿಸಿ ಹೆಮ್ಮೆ ಪಡುವವರಲ್ಲ. ಜ್ಞಾನಿ ವಿಜ್ಞಾನಿಗಳು ಸತ್ಯ ಸಂಶೋಧನೆಯ ಮಾರ್ಗದಲ್ಲಿದ್ದರೆ ಅವರಿಗೂ ಕುಮ್ಮಕ್ಕು ಕೊಡುವ ಉದಾರಿಗಳು ಎಂದು ಸಿದ್ಧ ಮಾಡಿಕೊಡಬೇಕೆಂದು ಅವಳು ಸ್ವಯಂಪ್ರೇರಿತಗೊಂಡಳು. ಕೀರ್ತಿ, ಸಂಪತ್ತು, ಶೌರ್ಯಗಳೆಂಬ ವಜ್ರವೈಢೂರ್ಯಗಳನ್ನು ಸಂಪೂರ್ಣ ಸತ್ಯ ಎನ್ನುವ ಅಪರಂಜಿಯಲ್ಲಿ ಎರಕ ಹೊಯ್ದಾಗಲೇ ಅದು ದಿವ್ಯ ಕಲಾಕೃತಿಯಾಗುತ್ತದೆ. ನ್ಯಾಯ, ಧರ್ಮ ಎನ್ನುವ ಕಿರಣಗಳು ಅಂತಹ

ಒಡವೆಯಿಂದಲೇ ಮಿನುಗಬಲ್ಲವು ಎಂದುಕೊಂಡಳು, ಆ ಕುರುವಂಶದ ಕೊಂಡಿಯಾಗಿ ಇನ್ನೂ ಕಳಚದೇ ಉಳಿದಿದ್ದ ಮನೆತನದ ಸೊಸೆ.

ಪುನೀತರು ನಿರೀಶ್ವರವಾದಿಯೇನೊ ನಿಜ. ಆದರೆ, ಅವರೂ ಪ್ರಾಮಾಣಿಕವಾಗಿ ಸತ್ಯಶೋಧನೆಯಲ್ಲಿ ತೊಡಗಿದ್ದವರು ಎಂದವಳಿಗೆ ಅನಿಸಿತು. ಕುಲಪತಿ ಕೀರ್ತಿಶರ್ಮರೂ ಸತ್ಯಶೋಧಕರೇ, ಈ ಸತ್ಯಶೋಧನೆಯ ಅಸಾಧಾರಣ ಸಮಾನತೆಯೇ ಅವರಿಬ್ಬರನ್ನು ಹೀಗೆ ಸ್ನೇಹದಲ್ಲಿ ಬೆಸೆದಿದೆ ಎನ್ನುವುದು ಆಕೆಗೆ ಹೊಳೆಯಿತು.

ಮುಂದಿನ ಕೆಲ ದಶಕಗಳಲ್ಲಿ ಧಾತ್ರಿಯ ಮೇಲೆ ಧರ್ಮದ ಅಭಾವ ಉಂಟಾಗುವುದೆಂದು ಇಟ್ಟುಕೊಳ್ಳೋಣ. ಹಾಗಾದಾಗ ಶ್ರೀಕೃಷ್ಣ ಪರಮಾತ್ಮ ಉದ್ಧರಿಸಲೆಂದು ಪುನಃ ಅವತಾರವನ್ನೆತ್ತಬಹುದೇ? ಹಾಗಿದ್ದರೆ ತನ್ನ ಮಾವ ಅರ್ಜುನ ಹುಟ್ಟಿದಾಗಲೇ ಅಲ್ಲವೆ ಅಲ್ಲಿ ಕಂಸನ ಕಾರಾಗೃಹದಲ್ಲಿ ಕೃಷ್ಣನ ಜನ್ಮವಾದದ್ದು. ಆಗ ಯಾವ ಅಧರ್ಮ ಉಂಟಾಗಿದ್ದಿತು? ಅರ್ಜುನಾದಿ ಪಾಂಡವರ ಜನ್ಮಧಾರಣೆಯೇ ಅಧರ್ಮದ ಅತಿರೇಕವಾಗಿತ್ತೆನ್ನಬೇಕೆ? ಛೇ, ಪುನೀತರ ಧರತಿಯಲ್ಲಿಯೆ ನನ್ನ ಯೋಚನೆ ಹರಿಯುತ್ತಿದೆಯಲ್ಲ ಎಂದು ಆಕೆ ವಿಹ್ವಲಗೊಂಡಳು.

ಅದೇ ವಿಚಾರಧಾರೆಯಿಂದ ಪ್ರೇರಿತಳಾಗಿ ಸತ್ಯಾಶ್ರಯರನ್ನುದ್ದೇಶಿಸಿ ಕೇಳಿದಳು:

"ಸತ್ಯಾಶ್ರಯರೇ, ಜನಮೇಜಯ ಹಾಗೂ ಉಳಿದ ರಾಜಕುಮಾರರಿಗೆ ಇತಿಹಾಸದ ಪಾಠವಾಗಿ ಮಹಾಭಾರತವನ್ನು ಹೇಳಬೇಕಾಗುವದೇ?"

"ರಘುವಂಶವನ್ನು ವಿವರಿಸಿದ ಬಳಿಕ ಕುರುವಂಶದ ಇತಿಹಾಸವೇ ಪ್ರಸ್ತುತವಾಗುತ್ತದೆ ದೇವಿ. ಆದರೂ ರಘುವಂಶವನ್ನು ವಿಶಾಲವಾಗಿ, ವಿಸ್ತಾರವಾಗಿ ಹೇಳುತ್ತೇವೆ. ಕುರುವಂಶದ ವಂಶಾವಳಿಯನ್ನು ಸಂಕ್ಷಿಪ್ತವಾಗಿ ವಿವರಿಸಿ 'ರಾಜಾ ಪ್ರತ್ಯಕ್ಷ ದೇವತಾ' ಎಂದು ಪರೀಕ್ಷಿತ ಮಹಾರಾಜನನ್ನು ಬಣ್ಣಿಸಿ ಅಲ್ಲಿಗೆ ವಿರಾಮ ಕೊಡುವುದು ಪದ್ಧತಿ. ಸಣ್ಣ ಮಕ್ಕಳು ಬುದ್ಧಿ ಬೆಳೆದಂತೆ ಇತೀಚಿನ ಇತಿಹಾಸವನ್ನು ತಂತಾನೆ ತಿಳಿದುಕೊಳ್ಳುತ್ತಾರೆ. ಅಲ್ಲದೆ ತಮ್ಮ ವಂಶದವರೇ ಆದ ಅನೇಕಾನೇಕ ಹಿರಿಯರು ಕ್ಷುದ್ರ ಕೆಲಸಗಳನ್ನು ಮಾಡಿದರು ಮತ್ತು ಆ ತಪ್ಪಿಗಾಗಿ ಶಿಕ್ಷೆಯನ್ನು ಪಡೆದರು ಎನ್ನುವ ಪಾಠ ಈಗೇನೂ ಬೇಕಾಗಿಲ್ಲ."

"ಆದರೆ ಮಕ್ಕಳಿಗೆ ವಂಶಾವಳಿಯನ್ನು ವಿವರಿಸುವಾಗ ನಿಮಗೆ ತೊಡಕಾಗುವದಿಲ್ಲವೆ?"

"ತೊಡಕೆಂದರೆ ತೊಡಕು. ಅವನ್ನು ನವಿರಾಗಿ ಬಿಡಿಸಿಕೊಂಡು ಮುಂದೆ ಸಾಗಬೇಕಾಗುತ್ತದೆ."

"ಆದರೂ ಕುರುಕ್ಷೇತ್ರದ ಯುದ್ಧ ಮೊದಲಾದವುಗಳನ್ನು ಅದೆಂತು ವಿವರಿಸುತ್ತೀರಿ?"

"ಭರತವಂಶದ ಮಹತಿಯನ್ನು ಹಾಡುತ್ತ ಭೀಷ್ಮನ ತ್ಯಾಗವನ್ನು ಬಣ್ಣಿಸುತ್ತ ಪಾಂಡು ರಾಜನ ಬಗ್ಗೆ ವಿವರಿಸುವದು. ತಪಸ್ಸು ಮಾಡಿ ಆತ ಪಡೆದ ಐವರು ಮಕ್ಕಳು ಯಾರು ಎಂದು ಹೇಳಿ ಅವರೇ ಪಾಂಡವರು ಎನ್ನುವದು. ಪಾಂಡವರಲ್ಲಿ ರಾಣಿ ಎಂದರೆ ದ್ರೌಪದಿ. ಅವಳನ್ನು ಮತ್ಸ್ಯಯಂತ್ರ ಪರೀಕ್ಷೆಯಲ್ಲಿ ಗೆದ್ದು ತಂದವನೇ ಸಹಜ ರಾಜ ಅರ್ಜುನ. ಅರ್ಜುನನ ಮಗ ಅಭಿಮನ್ಯು. ಅವನ ಮಗ ಪರೀಕ್ಷಿತ ಈಗ ರಾಜ್ಯವಾಳುತ್ತಿದ್ದಾನೆ ಎಂದು ತೇಲಿಸಿಬಿಡಬೇಕಾಗುತ್ತದೆ. ಮಕ್ಕಳಿಗಾದರೂ ಈ ಗೊಡ್ಡು ಇತಿಹಾಸದಲ್ಲಿ ಆಸ್ಥೆ ಅಷ್ಟಕಷ್ಟೇ."

ಉತ್ತರೆಗೆ ಉತ್ತರ ದೊರಕಿತು. ಘರ್ಷಣೆಯ ಮುಂಚೂಣಿಯಲ್ಲಿದ್ದವರಿಗೆ ಮಾತ್ರ ಇತಿಹಾಸದಲ್ಲಿ ಸ್ಥಾನವಿದೆ. ಘರ್ಷಣೆಯ ನೋವುಂಡುವರು ಆ ಪ್ರಸಿದ್ಧಿಗೆ ಪಾತ್ರರಲ್ಲ. ಸೀತೆಗೆ ಇದ್ದ ಪ್ರಾಮುಖ್ಯ ಊರ್ಮಿಳೆಗೆ ಇಲ್ಲ. ಭರತನಿಗಿದ್ದ ಸ್ಥಾನ ಶತ್ರುಘ್ನನಿಗೆ ಇಲ್ಲ. ರಾಮ, ಲಕ್ಷ್ಮಣರು ಕಾಡಿಗೆ ಹೊರಟು ಹೋದಾಗ, ಭರತ ತನಗೆ ರಾಜ್ಯ ಬೇಡ ಎಂದಾಗ ಶತ್ರುಘ್ನನನ್ನು ಯಾರೂ ಯಾಕೆ ಕೇಳಲಿಲ್ಲ?

ಕುರುಕ್ಷೇತ್ರದಲ್ಲಿ ನಡೆದ ಮಾರಣ ಹೋಮ ತೀರ ಅನವಶ್ಯಕವಾಗಿತ್ತೆ? ಆ ನರಮೇಧದಲ್ಲಿ ಉಳಿದುಕೊಂಡವರು ಪಾಂಡವರಷ್ಟೆ. ಅವರಿಗಿಂತ ಹಿರಿಯರು ಹೋದರೂ: ಅವರ ಕಿರಿಯರ ಮಡಿದರು. ಅಭಿಮನ್ಯು, ಬಭ್ರುವಾಹನ, ಘಟೋತ್ಕಚ, ಉಪಪಾಂಡವರು ಎಲ್ಲರೂ ಹೆಣವಾಗಿ ಕುರುಕ್ಷೇತ್ರದ ಕೀರ್ತಿಯನ್ನು ಹೆಚ್ಚಿಸಿದರೆ? ನಾನೊಬ್ಬಳು ಆ ಕಾಲಕ್ಕೆ ಗರ್ಭವತಿಯಾಗಿರದಿದ್ದರೆ ಕುರುವಂಶವೇ ಕುರುಹಿಲ್ಲದೆ ಹೋಗುತ್ತಿತ್ತಲ್ಲವೆ? ಎಂದು ಅವಳ ಆಲೋಚನೆ ಸಾಗುತ್ತಿತ್ತು.

ಎಲ್ಲಿಯ ಕುರುವಂಶ? ಶಂತನು ಮಹಾರಾಜ, ಅಲ್ಲಲ್ಲ ವಿಚಿತ್ರವೀರ್ಯನೇ ಕುರುವಂಶದ ನಿಜವಾದ ಕೊನೆಯವನಲ್ಲವೇ? ಮುಂದಿನದೆಲ್ಲ ಯಡವಟ್ಟು. ಪಟ್ಟಕ್ಕೆ ಬರಬೇಕಾದದ್ದು ದುರ್ಯೋಧನನೇ ಅಥವಾ ಧರ್ಮರಾಜನೇ? ಧರ್ಮರಾಜ ಪಟ್ಟದ ನಿಜವಾದ ಅಧಿಕಾರಿಯೆಂದಿದ್ದರೆ ಕರ್ಣನೇಕೆ ಅಲ್ಲ?

ಈ ಅರ್ಜುನ ಎಲ್ಲಿಯೋ ನಡುವಿನವನು. ಹಾಗೆಯೆ ಸುಭದ್ರೆಯ ಮಗ ಅಭಿಮನ್ಯು ಕೂಡ ಅವನ ಮೊದಲ ಮಗನಲ್ಲ. ಸುಭದ್ರೆ ಕ್ಷತ್ರಾಣಿ ಎನ್ನುವದು ಸರಿಯಾದರೂ ಅರ್ಜುನನ ಕುಲ ಯಾವುದು? ಅಂದರೆ ಪರೀಕ್ಷಿತ ಕ್ಷತ್ರಿಯನೆಂದು ಆಣೆ ಇಟ್ಟು ಹೇಳಬಹುದೆ? ಅವಳಿಗೆ ಈ ಎಲ್ಲ ವಿವರಗಳ ಕಲಸುಮೇಲೋಗರ ತಲೆನೋವು ತರುತ್ತಿತ್ತು. ಅವಳಿಗರಿಯದಂತೆಯೇ ಅವಳು ಬದಲಾದವಳಾದಳು.

ಪರಂಪರೆ, ವಂಶದ ಕೀರ್ತಿ, ಆರ್ಯಧರ್ಮ, ನೀತಿ, ನಿಯತ್ತು ಇವೆಲ್ಲ ಕೇವಲ ತಾತ್ಪೂರ್ತಿಕ ಹಾಗೂ ತತ್ಕಾಲಿಕ ಅವಶ್ಯಕತೆಗಳೇ ಹೊರತು ಅದಕ್ಕೆ ಹೆಚ್ಚಿನ ಅರ್ಥವೇ ಇಲ್ಲ ಎಂದವಳಿಗೆ ವೇದ್ಯವಾಯಿತು.

ಹಾಗಾದರೆ ಸರ್ವಕಾಲೀನ ಸತ್ಯ ಯಾವುದು? ಇದೊಂದು ಅತಿ ಗಹನ ಪ್ರಶ್ನೆ. "ಜನಿಸುವ ಉದ್ದೇಶವಿಲ್ಲದೆ ಹುಟ್ಟುವುದು ಸ್ವಂತಿಕೆಯನ್ನು ಮರೆಯುವದಕ್ಕೋಸ್ಕರ ಏನು ಬೇಕಾದರೂ ಮಾಡು ವದು. ಮಾನವ ಕುಲಕ್ಕೆ ಯಾವ ಹೆಚ್ಚಿನ ಹಿತವನ್ನೂ ಮಾಡದೇ ಕೊನೆಗೊಮ್ಮೆ ಸತ್ತು ಹೋಗುವದು. ಇದಿಷ್ಟೆ ಸತ್ಯವೆಂದು ತೋರುತ್ತದೆ," ಎಂದುಕೊಂಡಳು. ರಾಜನಿರಲಿ, ದಾಸನಿರಲಿ ಇಬ್ಬರೂ ಅಂಥದೇ ಯೋನಿಗಳೊಳಗಿಂದ ಪ್ರಪಂಚದೊಳಗೆ ತಲೆ ತೂರಬೇಕು. ಕೊನೆಗೆ ಅಂತಸ್ತಿನ ಹೊರೆ ಇಳಿಸಿ ಅದೇ ಅಗ್ನಿಗೆ ಆಹಾರವಾಗಬೇಕು. ಈ ಮುಗಿಯದ ಚಕ್ರದ ಅರ್ಥವೇನು? ಇದಕ್ಕೆ ಕೊನೆ ಮೊದಲಿಲ್ಲವೇ? ಅವಳ ಆಲೋಚನೆಗಳು ಹೀಗೆ ಸಾಗುತ್ತಿದ್ದುದರಿಂದ ಒಂದು ವಿಧದ ಮಂಕು ಅವಳಿಗೆ ಕವಿದಿದೆ ಎಂದು ಮಗ ಪರೀಕ್ಷಿತ ರಾಜ ಖಿನ್ನಗೊಂಡ.

ತನ್ನ ತಾಯಿಗೆ ಮಂಕು ಬಂದದ್ದು ಆಕೆ ಪುನೀತರ ಆಶ್ರಮಕ್ಕೆ ಹೋಗಿ ಬಂದ ನಂತರವೇ ಎಂದೂ ಅವನು ಗುರುತಿಸಿದ್ದ. ಇದರಿಂದಾಗಿ ಕಲ್ಪನೆ ಇಲ್ಲದೇ ಪುನೀತರ ಬಗ್ಗೆ ಇನ್ನಷ್ಟು ಅಸಹ್ಯ ಹುಟ್ಟಿತು. ಯಾವದೇ ಕ್ರಮ ಕೈಕೊಳ್ಳುವ ಮುನ್ನ ಆಶ್ರಮದಲ್ಲಿ ನಡೆದದ್ದಾದರೂ ಏನು ಎನ್ನುವದನ್ನ ರಿಯಲು ರಾಜಪುರೋಹಿತ ಸತ್ಯಾಶ್ರಯರನ್ನು ಕರೆಕಳುಹಿಸಿದ.

ಸತ್ಯಾಶ್ರಯರು ಸ್ಥೂಲವಾಗಿ ನಡೆದದ್ದನ್ನೆಲ್ಲ ವಿವರಿಸಿದರು. "ಸತ್ಯಶೋಧನೆಗೆ ತೊಡಗಲಿರುವ ಕುಲಪತಿ ಹಾಗೂ ಅವರ ಶಿಷ್ಯರು ತಿರುಗಿ ಬಂದು ಪುನೀತರ ವಾದವನ್ನು ಧ್ವಂಸಗೊಳಿಸುವದು ನಿಶ್ಚಿತ. ಆಗ ರಾಜಮಾತೆಯವರು ಸಮಾಧಾನ ಪಡೆಯುತ್ತಾರೆ," ಎಂದು ರಾಜಪುರೋಹಿತರು ಆಶೆಯನ್ನು ವ್ಯಕ್ತಪಡಿಸಿದರು.

"ಒಂದು ವೇಳೆ ಕೀರ್ತಿಶರ್ಮ ಹಾಗೂ ಅವರ ಶಿಷ್ಯರಿಗೆ ಅಪ್ರಿಯ ಸಾಕ್ಷಿಗಳೇನಾದರೂ ದೊರಕಿದರೆ? ದೊಡ್ಡಜ್ಜ ದುರ್ಯೋಧನ, ಕರ್ಣ ಮೊದಲಾದವರ ಕೆಲವು ಆಶ್ರಿತರು ಈಗಲೂ ಅಲ್ಲಲ್ಲಿ ಇರಬಹುದಲ್ಲವೆ? ಅವರು ತಮ್ಮೊಳಗಿನ ಸಂಕಟವನ್ನು ತೋಡಿಕೊಳ್ಳುವ ಭರದಲ್ಲಿ ಪವಿತ್ರ

ಪಾಂಡವರ ಕುರಿತು ವಿಷಪೂರಿತ ಭಾವನೆಗಳನ್ನು ಪುಷ್ಟಗೊಳಿಸುವ ಸಾಧ್ಯತೆ ಇದ್ದೇ ಇದೆಯಲ್ಲ!" ಎಂದು ಕುರುಚಕ್ರವರ್ತಿ ಪರೀಕ್ಷಿತ ಕೇಳಿದ.

ಸತ್ಯಾಶ್ರಯರಿಗೆ ಈ ಸಾಧ್ಯತೆಯ ಅಂಜಿಕೆ ಇದ್ದೇ ಇತ್ತು. ಅವರು ರಾಜನ ಧಾಟಿಗೆ ರಾಗ ಸೇರಿಸಿದಂತೆ, "ಈ ಪುನೀತರ ಪ್ರಚೋದನೆ ಇರದಿದ್ದರೆ ಇಂತಹ ಒಂದು ಸಂಶೋಧನಾ ಕಾರ್ಯಕ್ರಮವೇ ಹುಟ್ಟಿಕೊಳ್ಳುತ್ತಿರಲಿಲ್ಲ. ಈಗಿನದು ಹೆಸರಿಗಷ್ಟೆ ಸಂಶೋಧನೆ. ಒಂದರ್ಥದಲ್ಲಿ ತನಿಖೆಯೇ ಆಗುವದಿದೆ," ಎಂದರು.

"ಹಾಗಾದರೆ ಇದಕ್ಕೆಲ್ಲ ಮೂಲ ಕಾರಣವೆಂದರೆ ಪುನೀತರು ತಾನೆ?" ಅರಸ ಕೇಳಿದ.

"ಸಂದೇಹವೇ ಇಲ್ಲ. ಈ ಬಗೆಯ ವ್ಯಕ್ತಿಗಳ ಅಸ್ತಿತ್ವವನ್ನು ಕೂಡ ಶಾಸನವು ಸಹಿಸಬಾರದು" ಎಂದು ರಾಜಪುರೋಹಿತರು ಸಲಹೆ ನೀಡಿದರು.

"ಛೇ, ಛೇ, ಸತ್ಯಾಶ್ರಯರೇ ಇದೇನು ಹೇಳುತ್ತೀರಿ? ಅವಿವೇಕಿಗಳಿದ್ದರೂ ಅವರ ಬಾಯಿಕಟ್ಟಿ ಹಾಕುವ ದೋಷ-ನಮಗೆ ಬರುವದು ಬೇಡ" ಎಂದು ಆತ ರಾಜಕೀಯವನ್ನು ನುಡಿದ.

ಸತ್ಯಾಶ್ರಯರು ಇನ್ನೊಂದಿಷ್ಟು ಮುಂದುವರೆದು, "ದೇವರೆಂದರೆ ಯಾರು? ದೇವಾಂಶ ಸಂಭೂತ ಚಕ್ರವರ್ತಿಗಳೂ ದೇವರ ಪ್ರತಿನಿಧಿಯೇ ಆಗಿರುತ್ತಾರೆ. ಅವರೂ ದುಷ್ಟರನ್ನು ಶಿಕ್ಷಿಸುವ ಅಧಿಕಾರವನ್ನು ಪಡೆದೇ ಇರುತ್ತಾರೆ," ಎಂದರು.

"ಇರಲಿ, ಅಂತಹ ಪ್ರಸಂಗಗಳು ಬಂದಾಗ ನೋಡೋಣವಂತೆ. ನದೀತೀರ ದೊರೆತಲ್ಲೆಲ್ಲ ತಮ್ಮ ಒಂದು 'ಆಶ್ರಮ' ಹಾಕಿಕೊಂಡು ಸ್ವಯಂಘೋಷಿತ ಗುರುಗಳು ಕ್ರಮವಾದ ಶಿಕ್ಷಣ ನೀಡುವದು ಸರಿಯಾದ ಮಾರ್ಗವಲ್ಲ ಎಂದಾಯಿತು.

ಇನ್ನು ಮೇಲೆ ಜನಹಿತ ದೃಷ್ಟಿಯಿಂದ ಅರಮನೆಯ ಆಡಳಿತದಿಂದಲೇ ಅಲ್ಲಲ್ಲಿ ಬೋಧನಾ ಕೇಂದ್ರಗಳನ್ನು ತೆರೆಯಬೇಕು. ಹಾಗೆ ತೆರೆದ ಕೇಂದ್ರೀಯ ಶಾಲೆಗಳಲ್ಲಿ ಬೋಧನೆ ಮಾಡಬೇಕಾದವರಿಗೆ ತರಬೇತಿ ಕೇಂದ್ರವೊಂದನ್ನು ಆರಂಭಿಸಬೇಕು. ಸಿದ್ಧಗೊಳ್ಳಬೇಕಾದ ಶಿಕ್ಷಕರ ಮೊದಲ ತಂಡವನ್ನು ನೀವೇ ತರಬೇತುಗೊಳಿಸಬೇಕು." ಎಂದು ಚಕ್ರವರ್ತಿ ಅಪ್ಪಣೆಕೊಡಿಸಿದರು.

**

ಆಶ್ರಮದ ಜವಾಬ್ದಾರಿಯನ್ನು ಕೇಶವನಿಗೆ ಒಪ್ಪಿಸಿದ ಬಳಿಕ ಪುನೀತರಿಗೆ ಎರಡು ಬಗೆಯ ಸ್ವಾತಂತ್ರ್ಯ ದೊರಕಿತ್ತು. ಒಂದೆಡೆ ಆಶ್ರಮದಲ್ಲಿ ಅವರು ಮಾಡಬೇಕಾದ ಕ್ರಮವಾದ ಬೋಧನೆಯ ಅವಶ್ಯಕತೆ ಈಗ ಉಳಿದಿರಲಿಲ್ಲ. ಇನ್ನೊಂದೆಡೆ ಆಶ್ರಮದ ಅಗತ್ಯಗಳನ್ನು ಜೋಡಿಸಿಕೊಳ್ಳುವ ಪ್ರಯಾಸವೂ ಅವರಿಂದ ದೂರವಾಯಿತು. ಇದೇ ಕಾಲಕ್ಕೆ ಅವರು ವೇದವತಿಯನ್ನೂ ಕಳೆದುಕೊಂಡು ಒಂದು ಬಗೆಯ ನಿರ್ಲಿಪ್ತತೆಯನ್ನು ಪಡೆದಿದ್ದರು.

ಪರಿಣಾಮವಾಗಿ ಅವರು ಇನ್ನೂ ಗಹನವಾಗಿ ವಿಚಾರವನ್ನು ಮಾಡಲು ಶಕ್ತರಾದರು. ಅವರ ವಿಚಾರಧಾರೆ ಎಷ್ಟೊಂದು ಆಕೃತಿಗಳನ್ನು ಪಡೆಯುತ್ತಿತ್ತೆಂದರೆ ಕೇಶವನಿಗೂ ಒಮ್ಮೊಮ್ಮೆ ಪುನೀತರು ವಿಕ್ಷಿಪ್ತರಾಗಿ ಕಂಡು ಬಂದರು.

ಪುನೀತರಿಗೆ ಇಡೀ ಜಗತ್ತೇ ಶೋಷಣೆಗಳ ಆಗರ ಎನಿಸತೊಡಗಿತ್ತು. ಕ್ಷತ್ರಿಯರು ಬೇಟೆಯಾಡಿ ಮೊಲ, ನವಿಲು ಹಾಗೂ ಚಿಗರೆಗಳ ಮಾಂಸವನ್ನು ರುಚಿಮಾಡಿಕೊಂಡು ತಿನ್ನುವುದು ತಪ್ಪು ಎಂದು ಅವರಿಗೆ ಭಾಸವಾಗತೊಡಗಿತು. ಅಂತಹ ಕ್ಷತ್ರಿಯರ ಕೈಯಲ್ಲಿ ಜನಸ್ತೋಮದ ಆಡಳಿತ ಸಾಧುವೇ ಎಂದು ಸಂದೇಹ ಮೂಡಿತು. ಗೋವಿನ ಹಾಲು ಸೇವಿಸಲಿಕ್ಕೆ ಬಳಸಬೇಕು. ಯಜ್ಞದ ಸಲುವಾಗಿ

ಅಗ್ನಿಗರ್ಪಣ ಮಾಡಬಾರದೆಂದು ತಾವೇ ನೀಡುತ್ತಿದ್ದ ಉಪದೇಶವೂ ಈಗ ಅವರಿಗೆ ಅರ್ಥಹೀನವೆನ್ನಿಸತೊಡಗಿತು.

ಗೋವು ಕ್ಷೀರವನ್ನು ಕೊಡುವದು ತನ್ನ ಕರು ಉಣ್ಣಲೆಂಬ ಉದ್ದೇಶದಿಂದ. ಕರುವನ್ನು ಬಲಾತ್ಕಾರದಿಂದ ಬೇರ್ಪಡಿಸಿ ಆ ಕ್ಷೀರವನ್ನು ಮನುಷ್ಯ ಪಡೆದುಕೊಳ್ಳುವದು ಯಾವ ನ್ಯಾಯ? ಇಷ್ಟೊಂದು ದವಸ ಧಾನ್ಯಗಳನ್ನು, ಹಣ್ಣು ಹಂಪಲಗಳನ್ನು, ಎಣ್ಣೆ ಬೀಜಗಳನ್ನು ಪ್ರಕೃತಿ ನೀಡುತ್ತಿರುವಾಗ ಮೂಕಪ್ರಾಣಿಗಳನ್ನು ಹೀಗೆ ಶೋಷಿಸಬಹುದೇ ಎಂದು ಚಿಂತೆಗೀಡಾದರು. ತನ್ನ ಕರುವಿನ ಗ್ರಾಸ ಇನ್ನಾರೋ ಹಿಂಡುತ್ತಿದ್ದಾರೆ ಎಂದು ಆ ಪ್ರಾಣಿಗೆ ಗೊತ್ತಾಗುವದು ಖಚಿತವಲ್ಲವೇ? ಹಾಗೆ ಉಂಟಾದ ಅರಿವಿನಿಂದ ಗೋವಿಗೆ ಮನುಷ್ಯನ ಬಗ್ಗೆ ಯಾವ ಭಾವನೆ ಉಂಟಾಗುತ್ತಿರಬೇಕು? ಹಾಗಿದ್ದರೆ ಗೋವು ತನ್ನ ಕರು ಅಲ್ಲ ಎಂದು ಗೊತ್ತಾದೊಡನೆ ಹಾಲು ಸ್ರವಿಸುವದನ್ನು ನಿಲ್ಲಿಸಿಬಿಡಬೇಕು; ಅದು ಹಾಗೇಕೆ ಮಾಡುವುದಿಲ್ಲ ಎಂದು ಗೋವಿನ ಹೆಡ್ಡತನಕ್ಕೆ ಸಿಡಿಮಿಡಿಗೊಂಡರು. ಅದು ತಲೆಯಿಲ್ಲದ ಪ್ರಾಣಿ. ಅದೇ ಅದರ ದೋಷ ಎಂದಾಯಿತು. ಹಾಗಾದರೆ ಕಡಿಮೆ ತಲೆ ಇದ್ದವರನ್ನು ಹೆಚ್ಚಿನ ಮಿದುಳು ಹೊಂದಿದವರು ಶೋಷಿಸುವದೇ ನಿಯಮವೇ? ಅಂದ ಮೇಲೆ ಕಡಿಮೆ ಶಕ್ತಿ ಇದ್ದವನ ಮೇಲೆ ಹೆಚ್ಚು ಶಕ್ತಿ ಇದ್ದವ ಅಧಿಕಾರ ಚಲಾಯಿಸುವದೂ ನ್ಯಾಯವೇ ಎಂದಾಯಿತಲ್ಲ. ಶಕ್ತಿಗಿಂತ ಯುಕ್ತಿ ಹೆಚ್ಚು ಬಲವುಳ್ಳದ್ದು ಆಗಿದ್ದರೆ ಹೆಚ್ಚು ಜಾಣನಿದ್ದವನೇ ಅತಿ ಹೆಚ್ಚಿನ ಅಧಿಕಾರ ಚಲಾಯಿಸಬಲ್ಲವನಾಗುತ್ತಾನೆ. ಹಾಗೆಂದರೆ ಹೆಚ್ಚಿನ ಚಿಂತನೆ, ಹೆಚ್ಚಿನ ಜ್ಞಾನಾರ್ಜನೆ, ಜ್ಞಾನದಾಹ ಎಲ್ಲವೂ ಅತಿ ಹೆಚ್ಚಿನ ಶೋಷಣಾ ಶಕ್ತಿಯನ್ನು ಪಡೆಯುವದಕ್ಕೇ ಎಂದರ್ಥವೇ? ಶೋಷಣೆಯನ್ನು ತಪ್ಪಿಸಬೇಕು. ಗೋಕ್ಷೀರದ ಬದಲು ಅದೇ ಗುಣಗಳಿದ್ದ ಯಾವುದೋ ಬೀಜದ ಸಾರ ತೆಗೆಯಬಹುದಲ್ಲವೆ? ಅಥವಾ ಕ್ಷೀರದಂತಹ ರಸವನ್ನು, ಅರೆದಾಗ, ಒಂದು ಮೂಲಿಕೆ ಕೊಡಬಹುದೇ? ಇನ್ನಾವುದೋ ಕಾಳನ್ನು ಹುಡಿ ಮಾಡಿ ನೀರಿನಲ್ಲಿ ಬೆರಸಿದರೆ ಅದು ಹಾಲು ಆಗುವ ಸೂತ್ರವನ್ನು ಕಂಡು ಹಿಡಿದರೆ ಹೇಗೆ ಎಂದುಕೊಂಡು ಕಾಡಿನಲ್ಲಿ ಅವರು ಅಲೆದದ್ದೂ ಅಲೆದದ್ದೇ.

ಮತ್ತೊಂದು ಪ್ರಸಂಗದಲ್ಲಿ ಹೆಚ್ಚಿನ ಜ್ಞಾನವನ್ನೇ ಬಯಸಬಾರದು, ಜ್ಞಾನವಂತನೇ ಶೋಷಕನಾಗುತ್ತಾನೆ ಎಂದು ಭಯಪಟ್ಟದ್ದೂ ಉಂಟು.

ಹೀಗೆ ಅವರ ತಲೆಯಲ್ಲಿ ಕುರುಕ್ಷೇತ್ರಕ್ಕಿಂತ ದೊಡ್ಡ ತುಮುಲವೇ ಆರಂಭವಾಯಿತು. ತಮ್ಮ ಗುರುಗಳಾದ ವ್ಯಾಸ ಮಹರ್ಷಿಗಳ ಪುತ್ರ ಶುಕಮುನಿಗಳೂ ಇದೇ ದ್ವಂದ್ವಕ್ಕೆ ಸಿಲುಕಿದ್ದರೇ? ಅವರೇಕೆ ಆತ್ಮಹತ್ಯೆ ಮಾಡಿಕೊಂಡರು? ಅವರ ಅತಿ ಜ್ಞಾನ ಅವರಿಗೆ ಮುಳುವಾಯಿತು ಅಲ್ಲವೇ? ಅಯ್ಯೋ ಇದೆಂತಹ ಅವಸ್ಥೆ!

ಪುನೀತರ ಈ ವಿಲಕ್ಷಣ ಆಲೋಚನೆಗಳಿಂದಾಗಿ ಅವರ ದಿನಚರಿಯೂ ಅಸ್ತವ್ಯಸ್ತಗೊಂಡಿತು. ಕಾಡಿನಲ್ಲಿ ಅಲೆಯುವದು, ಗುಡ್ಡದ ತುತ್ತ-ತುದಿಯನ್ನೇರಿ ಸೂರ್ಯ ಮಂಡಲವನ್ನು ವೀಕ್ಷಿಸುವದು, ನದೀ ತೀರಕ್ಕೆ ಹೋಗಿ ತಪ್ಪದೇ ಹರಿದು ಹೋಗುತ್ತಿರುವ ಜಲರಾಶಿಯ ನಿಯಮಿತತನವನ್ನು ನೋಡಿ ಆಶ್ಚರ್ಯಪಡುವದು. ನಿತ್ಯ ಕರ್ಮಗಳನ್ನು ಮರೆಯುವದು, ತೊರೆಯುವದು ಪುನೀತರ ಸ್ವಾಭಾವಿಕ ಸ್ವಭಾವವಾಗತೊಡಗಿತು.

**

ರಾಜಧಾನಿಯಲ್ಲಿ ಸತ್ಯಾಶ್ರಯರು, ವಶಿಷ್ಠಾಶ್ರಮದಲ್ಲಿ ಸತ್ಯಬೋಧರು, ಪುನೀತರ ಆಶ್ರಮದಲ್ಲಿ ಕೇಶವಾಚಾರ್ಯರು ನೂತನ ಕುಲಪತಿಗಳಾಗಿ ಕಾರ್ಯಾರಂಭ ಮಾಡಿದ ಕೆಲವೇ ದಿನಗಳಲ್ಲಿ ದೊಡ್ಡ

ದೊಂದು ಅನಾಹುತ ಜರುಗಿಬಿಟ್ಟಿತು.

ಗುಡ್ಡಗಾಡು ಪ್ರದೇಶದಲ್ಲಿ ತಿರುಗುತ್ತಿರುವ ಒಂದು ಎತ್ತರದ ಹಿಮಬಂಡೆಯ ಮೇಲೆ ಇಟ್ಟ ಬಲಗಾಲು ಜಾರಿ, ಕುಲಪತಿ ಕೀರ್ತಿಶರ್ಮರು ಗುಡಗುಡನೆ ಉರುಳಿ ಕೆಳಗೆ ಹರಿಯುತ್ತಿದ್ದ ಅಲಕನಂದಾ ನದಿಯಲ್ಲಿ ಬಿಟ್ಟುಬಿಟ್ಟರು. ಆ ನಿರ್ಜನ ಪ್ರದೇಶದಲ್ಲಿ ಅವರು ಹೇಗೆ ಬಿದ್ದರು, ಕೂಗಿಕೊಂಡರೊ ಇಲ್ಲವೊ, ಅವರು ಕೂಗಿದ್ದು ಯಾರಿಗಾದರೂ ಕೇಳಿಸಿತೋ ಇಲ್ಲವೋ ಯಾವದೂ ತಿಳಿಯಲಿಲ್ಲ.

ಕೀರ್ತಿಶರ್ಮರ ನಿಧನದ ವಾರ್ತೆಯ ಕಲ್ಪನೆಯಿಲ್ಲದೇ ಶಿಷ್ಯ ಕುಶಲಮತಿಯು ಗಾಂಧಾರ ದೇಶದ ಗಡಿಯನ್ನು ಪ್ರವೇಶಿಸಿ ಆ ನಾಡಿನ ಜನರೊಡನೆ ಮಾತನಾಡಲು ಪ್ರಾರಂಭಿಸಿದ್ದ. ಅಲ್ಲಿದ್ದ ರಾಜನಾರು ಎನ್ನುವದೇ ಗಡಿ ಭಾಗದಲ್ಲಿದ್ದ ಎಷ್ಟೋ ಪ್ರಜೆಗಳಿಗೆ ಗೊತ್ತಿರಲಿಲ್ಲ. ನಿಮ್ಮ ರಾಜರಾರು ಎಂದು ಕೇಳಿದರೆ ಅನೇಕ ಸಾಮಾನ್ಯರು ಸ್ಥಳೀಯ ಜಮೀನ್ದಾರನ ಹೆಸರು ಹೇಳುತ್ತಿದ್ದರು. ಶೂರ ಸೈನಿಕ ವರ್ಗಕ್ಕೆ ಸೇರಿದ ಆ ಜನ ತಮ್ಮ ತಮ್ಮ ಗ್ರಾಮಗಳನ್ನು ರಕ್ಷಿಸಿಕೊಳ್ಳುವ ಸಾಮರ್ಥ್ಯ ಹಾಗೂ ಸಿದ್ಧತೆಗಳನ್ನು ಹೊಂದಿದ್ದರು.

ಕುಶಲಮತಿ ಇನ್ನಷ್ಟು ಒಳಗೆ ಹೋದ ಬಳಿಕ ಕೆಲ ಪುರೋಹಿತವರ್ಗದವರು ಇದ್ದ ವಿಷಯವನ್ನು ಹೇಳಿದರು. "ಈಗ ಸಿಂಹಾಸನದಲ್ಲಿದ್ದವ ಶಕುನಿಯ ಮೊಮ್ಮಗ. ಆದರೆ ಮೊದಲಿನ ರಾಜ್ಯದ ವಿಸ್ತಾರ ಈಗಿಲ್ಲ. ಅಲ್ಲಲ್ಲಿಯ ಸರದಾರರು ಸ್ವತಂತ್ರರಾಗಿದ್ದಾರೆ. ಹೆಸರಿಗೆ ಅವರು ಸಾಮಂತರಾಗಿದ್ದರೂ ಪರಸ್ಪರ ಸಂಬಂಧವೇ ಇಲ್ಲವಾಗಿ ಅವರು ಸ್ವತಂತ್ರರೇ ಆಗಿದ್ದಾರೆ. ಸರದಾರರ ಪಾಳೆಯಗಳು ನಿರ್ಮಾಣ



ಗೊಂಡಿವೆ. ಒಬ್ಬರ ಮೇಲೆ ಇನ್ನೊಬ್ಬರು ದಾಳಿ ಮಾಡಿ ಕುರಿಗಳನ್ನೂ ಅಬಲೆಯನ್ನೂ ಲೂಟಿ ಮಾಡಿ ಓಡಿ ಹೋಗುವ ಪ್ರಥೆ ಬೆಳೆದಿದೆ. ಚಳಿಗಾಲ ಆರಂಭಗೊಳ್ಳುವ ಮುನ್ನ ಇಂಥ ದಾಳಿಗಳು ಹೆಚ್ಚಾಗಿ ನಡೆಯುತ್ತವೆ. ಒಮ್ಮೆ ಚಳಿಗಾಲ ಆರಂಭಗೊಂಡಿತೆಂದರೆ ಇಲ್ಲಿ ಯಾವ ಚಟುವಟಿಕೆಗಳೂ ಸಾಧ್ಯವಾಗುವದಿಲ್ಲ ಎಂಬ ವಿವರಣೆ ದೊರೆಯಿತು.

ಗಾಂಧಾರವೆನ್ನಿಸಿಕೊಳ್ಳುವ ದೇಶದ ಈ ಜನರ ಸಂಸ್ಕೃತಿ ಸಂಸ್ಕಾರಗಳು ಒಳನಾಡಿನ ಜನರಿಗಿಂತಲೂ ತೀರಾ ಭಿನ್ನ. ಇವರೊಡನೆ ಹಸ್ತಿನಾವತಿಯ ರಾಜ್ಯದ ಬೀಗತನ ಆಯಿತಾದರೂ ಹೇಗೆ? ಎಂದು ಕುಶಲಮತಿ ಸೋಜಿಗಪಟ್ಟ. ಇವರಿಗೆ ಶಕುನಿಯಂತಹ ಚಾಣಾಕ್ಷಮತಿ ರಾಜ ದೊರಕಿದ್ದಾದರೂ ಹೇಗೆ? ಈ ಸರಳ ಸ್ವಭಾವದ ಶೂರರು ಯುದ್ಧ ಮಾಡಬಲ್ಲರು. ಉದ್ದುದ್ದಾಗಿ ಬೆಳೆಯಬಲ್ಲರು. ಆದರೆ ಕಾರಸ್ಥಾನ ಎನ್ನುವದು ಏಕೋ ನಂಬಲಾರದ ವಿಷಯವೆಂದು ಕುಶಲಮತಿಗೆ ಭಾಸವಾಯಿತು. ಪಗಡೆ ಆಟ ವಿಸ್ತಾರಗೊಂಡು ವ್ಯಾಪಕ ಜನಪ್ರಿಯತೆಯನ್ನು ಪಡೆದದ್ದು ಹಸ್ತಿನಾವತಿಯಂತಹ ಸಮೃದ್ಧ ಬಯಲು ಸೀಮೆಯಲ್ಲಿ. ಈ ಹಿಮ ಪರ್ವತಗಳ ಭಾಗಗಳಲ್ಲಿ ಅಂಥದೇನೂ ಕಾಣುವದಿಲ್ಲವಲ್ಲ ಎಂದಾತ ಅಂದುಕೊಂಡ. ಆದರೂ ಶಕುನಿಯ ವಂಶಜನನ್ನು ಕಂಡು ಸ್ಪಷ್ಟ ವಿಷಯವನ್ನು ಸಂಗ್ರಹಿಸಬೇಕು ಎಂದು ಮುಂದೆ ಸಾಗತೊಡಗಿದ.

ಇದೇ ಸುಮಾರಿಗೆ ಪರೀಕ್ಷಿತ ರಾಜ ವಶಿಷ್ಠಾಶ್ರಮಕ್ಕೆ ನೆರವು ಎಂದು ಹನ್ನೆರಡು ಅಶ್ವಾರೋಹಿಗಳ ತಂಡವನ್ನು ಕಳಿಸಿದ್ದ. ಅವರು ಕುಶಲಮತಿ ಹಾಗೂ ತೀವ್ರಗ್ರಾಹಿಗಳನ್ನು ಕಂಡು ಹಿಡಿಯಲು ನೆರವಾಗಲಿ ಎಂದಾತ ಬಯಸಿದ್ದ.

ಅಶ್ವಾರೋಹಿಗಳು ಕುಶಲಮತಿಯನ್ನು ಮೊದಲು ತಲುಪಿರಬೇಕು. ಏಕೆಂದರೆ ಅವನೂ ಗುರುಗಳ ದಾರಿಯನ್ನೆ ಹಿಡಿದ ಹತಭಾಗ್ಯನಾಗಿದ್ದ. ಹಿಮಾಚ್ಛಾದಿತ ಬಂಡೆಯೊಂದರ ಮೇಲೆ ಶವವಾಗಿ ಬಿದ್ದಿದ್ದ ಆತನನ್ನು ಪರೀಕ್ಷಿತನ ಸೈನಿಕರು ಸುಲಭವಾಗಿ ಪತ್ತೆ ಹಚ್ಚಿದರು. ಓರ್ವ ಅಶ್ವಾರೋಹಿ ಸೈನಿಕ ಹಸ್ತಿನಾವತಿಗೆ ಹೋಗಿ ವಶಿಷ್ಠಾಶ್ರಮಕ್ಕೆ ತಗುಲಿದ ಅನಿಷ್ಟದ ವಾರ್ತೆಯನ್ನು ಕೊಟ್ಟ. ಪರೀಕ್ಷಿತನ ತಲೆ ಕೆಟ್ಟಿತು. ಈ ಪುನೀತರ ಹಟದಿಂದಾಗಿ ಎಂಥೆಂಥ ಪಂಡಿತವರೇಣ್ಯರು ಬಲಿಯಾಗುತ್ತಿದ್ದಾರಲ್ಲ ಎಂದಾತ ಚಿಂತಿಸಿದ.

ದಕ್ಷಿಣದ ಸಂಚಾರ ಮಾಡುವಾಗ ತೀವ್ರಗ್ರಾಹಿಯೂ ಸತ್ತು ಹೋದದ್ದು ಸ್ವಾಭಾವಿಕವೇ ಎನ್ನುವಷ್ಟು ಚಮತ್ಕಾರಿಕವಾಗಿ ನಡೆಯಿತು.

ಬಟ್ಟಬಯಲು ಪ್ರದೇಶದಲ್ಲಿ ಆತ ಸಂಚಾರ ಮಾಡುತ್ತಿದ್ದ. ಯಾದವರೆಂದೆನಿಸಿಕೊಳ್ಳುತ್ತಿದ್ದ ರಾಜ್ಯದ ಸೀಮೆಯಲ್ಲಿ ಆತ ಕಾಲಿಟ್ಟು ೬-೮ ಹರದಾರಿ ಆಗಿರಬಹುದು. ಇನ್ನೂ ಅಷ್ಟೊಂದು ಪಾತ್ರವನ್ನು ಪಡೆಯದ ನರ್ಮದಾ ನದಿ ಅಡ್ಡ ಬಂದಿತು. ನದಿ ತೀರದಲ್ಲಿದ್ದ ಓರ್ವ ಋಷಿಗಳ ಆಶ್ರಮದಲ್ಲಿ ಆತ ತಂಗಿದ.

ಸ್ತ್ರೀ ಪುರುಷರಿಬ್ಬರೂ ಜಟೆಗಳನ್ನು ಬಿಟ್ಟು ನದಿಯಲ್ಲಿ ಮಿಂದು ಒಟ್ಟಾಗಿ ನಿಂತು ದೇವರಿಗೆ ಪ್ರಾರ್ಥನೆಗಳನ್ನು ಸಲ್ಲಿಸುತ್ತಿದ್ದಾಗ ಯಾರು ಗಂಡು ಯಾರು ಹೆಣ್ಣು ಕೂಡ ತಿಳಿಯುವದು ಕಷ್ಟವಾಗಿತ್ತು. ಸ್ವತಃ ಗುರುಗಳು ಮಹರ್ಷಿ ಸ್ಥಾನದಲ್ಲಿದ್ದರೂ ಬ್ರಹ್ಮಚರ್ಯ ವ್ರತಕ್ಕೆ ಮಹತ್ವ ನೀಡುತ್ತಿರಲಿಲ್ಲ. ಅವರ ವಾದ ಬೇರೆಯೇ ಆಗಿತ್ತು. ದೇಹವು ಸ್ವೀಕರಿಸಿದ ಆಹಾರವು ವಿವಿಧ ರೀತಿಯ ಶಕ್ತಿಯನ್ನು ಉತ್ಪಾದಿಸುತ್ತದೆ. ಆ ಶಕ್ತಿಯನ್ನೆಲ್ಲ ಶಕ್ತಿ ಸ್ವರೂಪವಾಗಿಯೇ ಸ್ವೀಕರಿಸಿ ಚರ್ವಿತಚರ್ವಣಗಳನ್ನು ಪಂಚೇಂದ್ರಿಯಗಳ ಮೂಲಕ ಹೊರ ಹಾಕಿ ದೇಹವನ್ನು ನಿರ್ಮಲಗೊಳಿಸಬೇಕು ಎಂದವರು ಹೇಳುತ್ತಿದ್ದರು. "ತಾಯಿ ನರ್ಮದೆಯ ಮಡಲಿಗೆ ಏನನ್ನಾದರೂ ಬೀಸಾಕಿರಿ, ಅವಳದನ್ನು ಆಸ್ಥೆಯಿಂದ

ಸ್ವೀಕರಿಸಿ, ತನ್ನ ಮಡುವುಗಳಲ್ಲಿ ಮಥಿಸಿ, ಜನಕಲ್ಯಾಣಕ್ಕೆ ಬೇಡವಾದದ್ದನ್ನು ದಂಡೆಗೆ ತರುತ್ತಾಳೆ. ಮತ್ತೆ ಜನಕೋಟಿಗೆ ಗ್ರಾಹ್ಯ ಜಲವನ್ನು ಉಣಬಡಿಸುತ್ತಾಳೆ!

"ಹಾಗೆಯೇ, ದೇಹದೊಳಗಿನ ವ್ಯಾಪಾರವನ್ನು ತಡೆಯುವ ಶಕ್ತಿಯನ್ನಾಗಲೀ ಸ್ವಾತಂತ್ರ್ಯವನ್ನಾಗಲೀ ಶ್ರೀಮನ್ನಾರಾಯಣ ನಮಗೆ ಕೊಟ್ಟಿಲ್ಲ. ನಾವು ಅರಗಿಸಿದ ಆಹಾರ ಶಕ್ತಿಯಾಗಿ ಹೇಗೆ ಮೇಲೆ ಮಿದುಳಿಗೆ ತಲುಪುತ್ತದೆಯೋ ಹಾಗೆ ಅಧೋಮುಖವಾಗಿ ಗುಪ್ತಾಂಗಗಳ ಮೂಲಕ ಹೊರಬಂದು ಹಿತವಾದ ಉಷ್ಣದ ಸ್ವರ್ಗಸುಖವನ್ನು ತೋರಿಸಿ ಅಂಥ ಸುಖ ಸದಾಕಾಲ ದೊರಕುವ ಹಂಬಲ ಹುಟ್ಟಿಸುವ ಮೂಲಕ ನಿತ್ಯಾನಂದದ ಸೊಬಗನ್ನು ತೋರುತ್ತದೆ," ಎಂದು ಅವರ ತತ್ವವಾಗಿದ್ದಿತು.

ಸೃಷ್ಟಿಯ ಅಖಿಲ ಮೃಗಚರಗಳನ್ನು ನೋಡಿದರೆ ಅಲ್ಲೆಲ್ಲೂ ವಿವಾಹವೆಂಬ ಸಂಸ್ಥೆ ಕಂಡು ಬರುವದಿಲ್ಲ. ಮನುಷ್ಯರಲ್ಲಷ್ಟೇ ಏಕಿರಬೇಕು ಈ ವ್ಯವಸ್ಥೆ ಎನ್ನುವ ವಾದವೂ ಮಹರ್ಷಿಗಳ ಮುಖದಿಂದಲೇ ಬಂದಿತ್ತು.

ಅವರ ಆಶ್ರಮದಲ್ಲಿ ಕೆಲವೊಂದು ಕಾಷ್ಠೌಷಧಿಗಳನ್ನೂ ಲೇಹಗಳನ್ನೂ ಉತ್ಪಾದಿಸಿ ಸಂಜೆಯ ಇಳಿಹೊತ್ತಿಗೆ ಅವುಗಳನ್ನು ಸಾಮೂಹಿಕವಾಗಿ ಸ್ವೀಕರಿಸುವ ಒಂದು ಪದ್ಧತಿ ಇತ್ತು. ಅಂಥ ಪ್ರೇರಕಗಳನ್ನು ಸೇವಿಸಿದ ವ್ಯಕ್ತಿಗಳು ಬಹುಭಕ್ತಿಯಿಂದ ದೇವರ ನಾಮಸ್ಮರಣೆಯನ್ನು ಮಾಡುತ್ತಿದ್ದರೇನೋ ಸರಿ. ಆದರೆ ಅದರ ನಂತರ ಸ್ವಚ್ಛಂದ ವಿಹಾರದಲ್ಲಿ ತೊಡಗಲು ಆಶ್ರಮದಲ್ಲಿ ಮರೆಯಾಗಬಲ್ಲ ಮೂಲೆ, ಮೂಲೆಗಳನ್ನು ಸೇರಿಕೊಳ್ಳುತ್ತಿದ್ದರು. ತೀವ್ರ ಸುಖದ ಪರಮಾನಂದದಲ್ಲಿ ಪರಮಾತ್ಮ ಹೇಗೆ ಗೋಚರಿಸುತ್ತಾನೆ ಎಂಬ ಸಂಶೋಧನೆ ನಡೆಸುತ್ತಿದ್ದರು.

**

ತೀವ್ರಗ್ರಾಹಿಗೆ ಇದೆಲ್ಲ ಹೊಸದು. ಅನೇಕಾನೇಕ ಹಿರಿಯರು, ವರ್ತಕರು ಕೂಡ ಸಮಯ ದೊರೆತಾಗಲೆಲ್ಲ ಮಹರ್ಷಿಗಳ ಆಶ್ರಮಕ್ಕೆ ಭೇಟಿ ಕೊಡುತ್ತಿದ್ದರೆಂಬುದನ್ನು ಆತ ಕೇಳಿ ಬಲ್ಲ. ಆದರೆ ಅಲ್ಲಿ ಪ್ರಮಾಣಗಳ ಬದಲು ಪ್ರಣಯದ ಪ್ರಯೋಗದಿಂದ ಜ್ಞಾನಾರ್ಜನೆಯ ಯತ್ನ ನಡೆದದ್ದು ಆತನಿಗೆ ತಿಳಿದಿರಲಿಲ್ಲ. ಪರೀಕ್ಷಿತ ಮಹಾರಾಜನ ಅನೇಕ ಸರದಾರರು ಕೂಡ ತಮ್ಮ ರಜೆಯನ್ನು ಇಲ್ಲಿ ಕಳೆಯುತ್ತಿರುವುದನ್ನು ತೀವ್ರಗ್ರಾಹಿ ಗಮನಿಸಿದ. ಅಂದೇ ಅದನ್ನು ಹಲವರೊಡನೆ ಚರ್ಚಿಸಲು ಯತ್ನ ಮಾಡಿದ. ಸಾರ್ವಜನಿಕರು ಇಂತಹ ವ್ಯವಸ್ಥೆಯನ್ನು ಒಪ್ಪುತ್ತಾರೆಯೆ? ಈ ವ್ಯವಸ್ಥೆ ಇದ್ದ ಆವರಣಕ್ಕೆ 'ಆಶ್ರಮ' ಎನ್ನುವುದೇಕೆ? ಎಂದೂ ಕೆಲವರೊಡನೆ ವಾದಿಸಿದ. "ಇಲ್ಲ, ನಾನಿದನ್ನು ಒಪ್ಪಲಾರೆ. ನಾನು ಹತ್ತು ಜನರಿಗೆ ಹೇಳುವವನೇ."

"ಬೆಳಿಗ್ಗೆ ತೀವ್ರಗ್ರಾಹಿಯ ಶವ ನರ್ಮದೆಯಲ್ಲಿ ತೇಲುತ್ತಿತ್ತು."

**

ಪುನೀತರ ಆಶ್ರಮದಲ್ಲಿಯ ಹೊಸ ಪಠ್ಯ ಕ್ರಮವು ಒಂದು ದಿಬ್ಬವನ್ನು ಏರಿ ಇಳಿಯುವ ಸಾಹಸದಂತಿತ್ತು. ಎಲ್ಲ ಕಡೆಗಳಂತೆ ಸಾಮಾನ್ಯ ಜ್ಞಾನದ ಪಾಠಗಳನ್ನು ಕಲಿಸುವುದು. ದೇವರು ಸರ್ವಶಕ್ತ, ಸರ್ವಾಂತರ್ಯಾಮಿ ಎನ್ನುವುದನ್ನು ಚೆನ್ನಾಗಿ ಬೋಧಿಸುವುದು. ಮಾಮೂಲು ವಿದ್ಯಾರ್ಥಿಗಳ ವಿದ್ಯಾರ್ಜನೆ ಅಲ್ಲಿಗೆ ಕೊನೆಗೊಳ್ಳುತ್ತಿತ್ತು.

ದಿಬ್ಬವನ್ನು ಏರುವದೆಂದರೆ ಹೀಗೆ ಸನಾತನ ವಿದ್ಯೆಯನ್ನು ಕರಗತಗೊಳಿಸಿಕೊಳ್ಳುವುದು. ಅದು ಪ್ರಯಾಸದ ಕೆಲಸ. ಇಲ್ಲದ ಶಕ್ತಿಯ ಪ್ರಭಾವವನ್ನು ಎಲ್ಲದರಲ್ಲೂ ಕಾಣಬೇಕಾದ ವಿಷಯ.

ಗೋಚರವಾಗದ್ದನ್ನು ಕಲ್ಪಿಸಿಕೊಳ್ಳುವ ಕಷ್ಟ. ಆದ್ದರಿಂದಲೇ ಚಿಕ್ಕ ವಯಸ್ಸಿನಿಂದಲೇ ದೇವರ ಕಲ್ಪನೆಯನ್ನು ಮನಸ್ಸಿನಲ್ಲಿ ಬಿತ್ತಬೇಕಾಗುತ್ತಿತ್ತು. ಅಂದರೆ ಆತ ತರುಣನಾಗಿ ತನ್ನ ಸ್ವಶಕ್ತಿಯಲ್ಲಿ ವಿಶ್ವಾಸ ತಾಳುವ ಕಾಲ ಬಂದಾಗ ಶಕ್ತಿಯುತ ಹೋರಿಯನ್ನು ಮದಗೊಳಿಸಿ ಕೃಷಿಯೋಗ್ಯ ಎತ್ತು ಮಾಡಿದಂತೆ ಆಗುತ್ತಿತ್ತು. ಸ್ವಚ್ಛಂದವಾಗಿ ಗುಟುರಬೇಕಾದ ಗೂಳಿ ಶಾಶ್ವತ ಗುಲಾಮನಾಗುವ ತರಬೇತಿ ಇದಾಗಿತ್ತು.

ಎರಡನೆಯ ಹಂತವೇ ಏರಿದ ದಿಬ್ಬವನ್ನು ಇಳಿಯುವದು. ಶಿಕ್ಷಣ ಎಂದು ಪಡೆದದ್ದೆಲ್ಲ ಹೇಗೆ ತಪ್ಪು ಕಲ್ಪನೆಗಳ ಗೋಪುರ ಎನ್ನುವುದನ್ನು ಅರಿತುಕೊಳ್ಳುವುದು. ಅದು ಸುಲಭದ ಕೆಲಸವಾಗಿತ್ತು. ಪ್ರಬುದ್ಧ ವಯಸ್ಸಿಗೆ ಬಂದ ಮೇಲೆ ಈ ಶಿಕ್ಷಣ ಆರಂಭವಾಗುತ್ತಿದ್ದುದರಿಂದ ತಲೆಯ ಮೇಲಿನ ಭಾರವನ್ನು ಇಳಿಸುತ್ತ ಹೋಗುವ ಕ್ರಮವು ಸುಲಭವೆನಿಸುತ್ತಿತ್ತು. ದಿಬ್ಬವನ್ನು ಪೂರ್ತಿ ಇಳಿದು ನೆಲದ ಮೇಲೆ ನಿಂತವನಿಗೂ, ದಿಬ್ಬವನ್ನೆ ಏರದೆ ಹಾಗೆಯೆ ಸಮಪಾತಳಿಯಲ್ಲಿದ್ದವನಿಗೂ ದೊಡ್ಡ ಅಂತರವಿತ್ತು. ಏರಿ ಇಳಿದವನಿಗೆ ಏರುವದೂ ಗೊತ್ತು. ಇಳಿಯುವದೂ ಗೊತ್ತು. ಆದ್ದರಿಂದ ಏರಿದವ ಈ ರೀತಿ ಏರಿ ಇಳಿದವನನ್ನು ಕೀಳಾಗಿ ಕಾಣುವದು ಸಾಧ್ಯವಿರಲಿಲ್ಲ.

ಇಳಿದವನಿಗೆ ಮುಂದೆಲ್ಲ ಸುಗಮ ಮಾರ್ಗ. ಅಡ್ಡ ಬರುವ ದಿಬ್ಬದ ತಡೆಯಿಲ್ಲ. ದೃಷ್ಟಿಕೋನದ ಮಿತಿಯನ್ನು ಬದಿಗೆ ಸರಿಸಿ ಅನಂತವೆನಿಸುವ ಮಾರ್ಗವನ್ನು ಕ್ರಮಿಸಿ ಅಂತವೆಲ್ಲಿದೆ ಎನ್ನುವದನ್ನು ಇಂದಿಲ್ಲ ನಾಳೆ ಅರಿಯಬಲ್ಲ. ಇದೇ ಪುನೀತರ ವಿಶ್ವಾಸವಾಗಿತ್ತು. ದಿಬ್ಬವನ್ನು ಏರಿ ಇಳಿಯುವುದರಲ್ಲೆ ತಮ್ಮ ಜೀವನದ ಮುಖ್ಯ ಭಾಗ ಸರಿದು ಹೋಗಿದೆ. ಇನ್ನು ಮುಂದೆ ಉಳಿದ ಆಯುವಿನಲ್ಲಿ ತಾವು ಕ್ರಮಿಸಬಹುದಾದ ಅಂತರವಾದರೂ ಎಷ್ಟು ಎಂದು ದಿಗಿಲು ಪಡುತ್ತಿದ್ದರು. ಹೀಗೆಯೇ ಅವರು ಆಲೋಚಿಸುತ್ತ ಆ ದಿನ ಪ್ರಾತರ್ವಿಧಿಗಾಗಿ ಹೊಳೆಯಲ್ಲಿ ಇಳಿದರು. ಆದರೆ ಅವರನ್ನೆ ಯಾರೋ ಮುಂದಕ್ಕೆ ತಳ್ಳಿದಂತಾಯಿತು.

ಯಾರೆಂದು ನೋಡುವದೂ ಅವರಿಗೆ ಸಾಧ್ಯವಿರಲಿಲ್ಲ. ಅಥವಾ ಅವರ ವಿಚಾರದ ಸೆಳವಿನಲ್ಲಿ ಪಾಚಿ ರಾಚಿದ ಕಲ್ಲಿನ ಮೇಲೆ ಕಾಲೂರಿ ಅವರೇ ತೋಲವನ್ನು ಕಳೆದುಕೊಂಡರೋ ಯಾರು ಬಲ್ಲರು?

ಪುನೀತರ ಶವ ಇದನ್ನು ಹೇಗೆ ವಿವರಿಸೀತು?

**

ರಾಜಮಾತೆ ಉತ್ತರಾದೇವಿ ವಿಹ್ವಲಗೊಂಡಳು. ಕೀರ್ತಿಶರ್ಮರು, ಅವರಿಬ್ಬರು ಶಿಷ್ಯರು, ಈಗ ಪುನೀತರು! ಎಲ್ಲರೂ ಒಂದೇ ವರ್ಷ ಕಳೆಯುವದರೊಳಗೇ ದುರ್ಮರಣಕ್ಕೀಡಾಗಬೇಕಾದರೆ ಅದು ಕೇವಲ ವಿಧಿಯ ಕೈವಾಡವೇ- ಅಥವಾ ಮತ್ತಾವುದೋ ಮಸಲತ್ತು ಇರಬಹುದೋ? ಅವಳಿಗೆ ಬೆದರಿಕೆಯಾಯಿತು.

ಜೀವನದಲ್ಲಿ ಅವಳಿಗೆ ಇರುವ ಎರಡೇ ಪ್ರಿಯ ವಸ್ತುಗಳಲ್ಲಿ ಒಂದನ್ನು ಕುರುಕ್ಷೇತ್ರದ ಮಹಾಯುದ್ಧದಲ್ಲಿ ಕಳೆದುಕೊಂಡಿದ್ದಳು. ಅದೆಂದರೆ ಅಭಿಮನ್ಯುವಿನ ಪ್ರಾಣ. ಇನ್ನುಳಿದದ್ದು ಸ್ವಂತದ ಜೀವ. ತನ್ನ ಹೊರಗೆ ಆಗ ನಡೆದ ಮಹಾಯುದ್ಧ ಈಗ ತನ್ನಲ್ಲೇ, ತನ್ನದೇ ಮಿದುಳಿನಲ್ಲೆ ನಡೆಯುತ್ತಿದ್ದಂತೆ ಭಾಸವಾಯಿತು. ಈ ಸಾವುಗಳು ಕೊಲೆಗಳಾಗಿದ್ದರೆ? ಅವಳ ಇಡೀ ಮೈ ನಡುಗಿತು. ಹಾಗಿದ್ದರೆ, ಅಲ್ಲಿ ಪುನೀತರ ಆಶ್ರಮದಲ್ಲಿ ನಡೆದ ಚರ್ಚೆಯಲ್ಲಿ ಭಾಗವಹಿಸಿದವರಿಗೆಲ್ಲ ಇದೇ ಗತಿಯೆ?

ಇನ್ನು ಆ ಲೆಕ್ಕದ ಪ್ರಕಾರ. ಉಳಿದವರೆಂದರೆ ಸತ್ಯಾಶ್ರಯರು ಮತ್ತು ತಾನು ಎಂದುಕೊಂಡಳು ರಾಜಮಾತೆ- ಪರೀಕ್ಷಿತ ಮಹಾರಾಜನ ತಾಯಿ. ಅವಳ ವರ್ಣನೆ ಇಷ್ಟಕ್ಕೇ ಮುಗಿದೀತೆ? ಅವಳು

ಪಾಂಡವರ, ಅದರಲ್ಲೂ ಅರ್ಜುನನ ಸೊಸೆ. ಶ್ರೀಕೃಷ್ಣನ ಸೋದರಳಿಯನ ಬೆಡಗಿನ ಮಡದಿ.

ಶ್ರೀಕೃಷ್ಣನ ಹೆಸರು ಲಕ್ಷ್ಯಕ್ಕೆ ಬಂದೊಡನೆ ಅವಳು ಬೆಚ್ಚಿದಳು. ಅಂದು ಅಭಿಮನ್ಯುವನ್ನು ಶ್ರೀಕೃಷ್ಣನೇ ಕೊಂದಿರಲಿಕ್ಕಿಲ್ಲ ನಿಜ. ಆದರೆ ಗೊತ್ತಿದ್ದೂ ಅವನ ಸಾವು ನಡೆದು ಹೋಗಲು ಉದ್ದೇಶ ಪೂರ್ವಕ ಯೋಜನೆಯನ್ನೇ ಮಾಡಿದ್ದೇನೂ ಸುಳ್ಳಲ್ಲ ತಾನೇ! ಮತ್ತು ಆ ಕೃಷ್ಣ! ತಾನು ಯಾರಿಗೆ ಸೋದರಳಿಯನಾಗಿದ್ದನೋ ಆ ಕಂಸನನ್ನು ಪ್ರತ್ಯಕ್ಷವಾಗಿಯೇ ಕೊಂದು ಹಾಕಿದವನು. ಅದೇ ಕಂಸ ಕ್ರೂರಿ ಎನ್ನಿಸಿಕೊಂಡಿದ್ದರೂ ತನ್ನ ತಂಗಿ ಹಾಗೂ ತಂಗಿಯ ಗಂಡನನ್ನು ಸೆರೆಮನೆಯಲ್ಲಿ ಕೂಡಿಹಾಕಿಟ್ಟ. ಅವರನ್ನು ಕೊಲ್ಲಲಿಲ್ಲ.

# ಭುಜಗಳು

ಆಳುವವರ ಆಸರೆಯ ಕೆಳಗಿರುವ
ಪುಟ್ಟ ಗೂಡಿನ ಹಕ್ಕಿ ಚೀತ್ಕರಿಸಿ
ಕರೆದಾಗ, ರಾತ್ರಿ ಬೆಳಗುವ ಕ್ಯಾಂಡಲ್ಲು
ಗಕ್ಕನೆ ಆರಿದೆ!

ನಡುರಾತ್ರಿಯಲ್ಲಿ ಜೋಪಡಿಗಳ
ತುಂಬೆಲ್ಲ ಸಾವಿರಾರು ಚಕ್ಕೆಗಳು ಸೂರು
ಹರಿದು ಜಾರುತ್ತವೆ.
ಮತ್ತೆ ಮತ್ತೆ ಅಲ್ಲಿ
ಕಾಮನಬಿಲ್ಲೂ ಮೂಡುತ್ತದೆ!

ಸ್ವಚ್ಛ ಭುಜಗಳ ಹಿಂದಿನ
ರಕ್ತದ ಕೆನ್ನಾಲಿಗೆಯ ನಡು ಬಂದು
ಏನೊಳಗೊಂದು ನಕ್ಷತ್ರ
ಮೂಡುತ್ತಲೇ ಇರುತ್ತದೆ!

• ಕೆ.ಎ. ನಾಗವಂದ



ಅಂದರೆ ರಾಜಕಾರಣದಲ್ಲಿ ಯಾರಿಗೆ ಯಾರೂ ಅಲ್ಲ. ಅರ್ಜುನ ಕರ್ಣನನ್ನು ಕೊಂದ, ಎಲ್ಲವೂ ಬಗೆಹರಿದು ಹೋದ ಬಳಿಕವೂ ಧೃತರಾಷ್ಟ್ರ ಭೀಮನ ಕೊಲೆಗೆ ಯತ್ನಿಸಿದ. ಅದಕ್ಕಿಂತ ಹೆಚ್ಚಾಗಿ ಅವನು ಹಾಗೆ ಪ್ರಯತ್ನಿಸುತ್ತಾನೆ ಎಂದು ಕೃಷ್ಣ ಊಹಿಸಿದ್ದ. ಒಟ್ಟಿನಲ್ಲಿ ಅಧಿಕಾರಕ್ಕಾಗಿ, ಎಷ್ಟು ಜನರನ್ನೂ, ಅವರು ತೀರ ಸನಿಹದವರೇ ಇರಲಿ, ಮುಗಿಸಿಬಿಡಬಹುದು.

ಸತ್ಯಾಶ್ರಯರು, ಪುನೀತರಂತಹ ವಿಷಸರ್ಪಗಳನ್ನು ಹೊಸಕಿ ಹಾಕಬೇಕೆಂಬ ತಮ್ಮ ಅಭಿಪ್ರಾಯ ವನ್ನು ನನಗೆ ಆಗಲೇ ಹೇಳಿದ್ದರು. ಅದೇ ಉಪದೇಶವನ್ನು ಮಹಾರಾಜನಿಗೂ ಕೊಟ್ಟಿದ್ದರೆ? ಸರ್ಪಯಜ್ಞದ ಆರಂಭವೇ ಇದು ಎನ್ನಬೇಕೆ? ಯಾಕಾಗಿರಬಾರದು? ಸತ್ಯಾಶ್ರಯರು ಈಗ ರಾಜನಿಗೆ ಪ್ರಿಯವಾದ ವ್ಯಕ್ತಿ, ತನ್ನ ಮಹತ್ವವನ್ನು ಸಿದ್ಧಮಾಡಿಕೊಟ್ಟ ವೀರ ಸಿಪಾಯಿ. ಅವರ ಅಭಿಪ್ರಾಯ ಪರೀಕ್ಷಿತನಿಗೆ ಗ್ರಾಹ್ಯವಾಗಿರಬೇಕಲ್ಲವೇ?

ತವರು ಮನೆಯ ಕಾಲದಿಂದ ಉತ್ತರೆಯ ಸಖಿಯಾಗಿದ್ದು ಈಗ ಪಾಲಕ ದಾಸಿಯಾಗಿದ್ದ ಪ್ರೀತಿ ಬಾಲೆ ನಿಂತದ್ದು ಕಂಡಿತು.

"ನೀನೇಕೆ ಇಲ್ಲಿ ನಿಂತಿರುವಿ?" ಎಂದು ಸಿಟ್ಟು ಮಾಡಿದಳು.

ಪ್ರೀತಿಬಾಲೆ ನಗುತ್ತ "ದೇವಿಯವರೇ, ನೀವು ಆಲೋಚಿಸಿದ ರೀತಿಯಲ್ಲೇ ಸತ್ಯಾಶ್ರಯರೂ ಯೋಚಿಸುತ್ತಿರಬಹುದಲ್ಲವೆ?"

"ನಾನು ಏನೇನು ಆಲೋಚಿಸುತ್ತಿದ್ದೇನೆಂದು ನಿನಗೇನು ಗೊತ್ತು?"

"ಅಯ್ಯೋ, ಅಷ್ಟೆಲ್ಲ ವಿಚಾರ ಮಾಡಲು ಹೇಗೆ ಸಾಧ್ಯ? ಆದರೆ ಮೊದಲಿನಿಂದ ನಿಮ್ಮೊಡನೆಯೇ ಬೆಳೆದು ಓಡಾಡಿದವಳಲ್ಲವೆ? ಅಂತಾಗಿ ನಿಮ್ಮ ದುಗುಡ ಅರ್ಥವಾಗುತ್ತದೆ." ಎಂದು ಹೇಳಿದವಳೇ ಕೈಯಲ್ಲಿದ್ದ ಬೆಳ್ಳಿಗಿನ ಹಾಲನ್ನು ಕುಡಿಯಲು ಕೊಟ್ಟು ಹೊರಟು ಹೋದಳು.

ಉತ್ತರೆಗೆ ಸಮಸ್ಯೆಗಳು ಹೆಚ್ಚಾದಂತೆ ತೋರಿತು. ಉತ್ತರ ದೊರಕುವ ಲಕ್ಷಣಗಳೇ ಕಾಣಲಿಲ್ಲ. ಮಹಾಭಾರತದಲ್ಲಿಯ ವಿವಿಧ ಪಾತ್ರಗಳು ಕಣ್ಮುಂದೆ ಬರತೊಡಗಿದವು. ಪೂರ್ವಜರಲ್ಲಿ ಯಾರು ಒಬ್ಬರು ಹೇಳಿಕೊಳ್ಳುವಂಥ ಆದರ್ಶವನ್ನು ಪಾಲಿಸಿದಂತೆ ಅವಳಿಗೆ ತೋರಲಿಲ್ಲ. ಹಾಗಿದ್ದಲ್ಲಿ ಆ ಪರಂಪರೆಯ ಮುಂದಿನವರಾದರೂ ಏಕೆ ಒಳ್ಳೆಯವರಾಗಿರಬೇಕು? ತಾನೋ ಬೇರೆ ಮನೆತನದಿಂದ ಬಂದವಳು. ಆದರೆ ಪರೀಕ್ಷಿತ ಇದೇ ಜನರ ರಕ್ತ ಸಂಬಂಧಿಯಲ್ಲವೇ? ಅವನೇಕೆ ಬೇರೆ ಇರಬೇಕು? ಅವನು ಪುನೀತರನ್ನೂ ಪುನೀತರ ಸಹವರ್ತಿಗಳನ್ನೂ ಸಹಿಸುವ ಅವಶ್ಯಕತೆ ಎಲ್ಲಿದೆ?

ಅಸಹಾಯಕತೆ ಅವಳಿಗೆ ತನ್ನದೂ ಕತೆ ಎಂದು ಹೇಳಿತು. ಆಗ ವಿರಾಟ ನಗರದಲ್ಲಿ ನಡೆದ ಒಂದು ಗುಪ್ತ ಹತ್ಯೆಯನ್ನು ಅವಳು ಈಗ ವಿಮರ್ಶಿಸತೊಡಗಿದಳು. ಅದು ಅವಳ ಸೋದರ ಮಾವ ಕೀಚಕನ ವಧೆಯ ವಿಷಯ. ದ್ರೌಪದಿಯ ಮಾನಹರಣಕ್ಕೆ ಯತ್ನಿಸಿದಾತ ಎಂಬ ತಲೆಪಟ್ಟಿ ಆತನಿಗೆ ದೊರಕಿತ್ತಾಗಿ ಉತ್ತರೆ ಅವನ ಸಾವನ್ನು ಕೊಲೆ ಎಂದು ಪರಿಗಣಿಸದೇ ವಧೆ ಎಂದು ಈ ವರೆಗೂ ಗಟ್ಟಿಯಾಗಿ ನಂಬಿದ್ದಳು. ಆದರೆ ಏಕೋ ಈಗ ಅವಳ ಆ ನಂಬಿಕೆ ಒಮ್ಮೆಲೆ ಶಿಥಿಲಗೊಂಡಿತು. ವಿರಾಟನಗರದಲ್ಲಿ ಒಬ್ಬನೇ ವೀರಪುರುಷನಿದ್ದ. ಅವನು ಇರುವವರೆಗೆ ವಿರಾಟರಾಜನಿಗೆ ಪಾಂಡವ ರಿಂದ ರಕ್ಷಣೆ ಇತ್ತು. ಆದ್ದರಿಂದ ಆ ರಕ್ಷಣಾಕವಚವನ್ನು ಕಳಚಿಹಾಕುವ ಯೋಜನೆಯನ್ನೆ ಹಾಕಲಾಗಿತ್ತೇ?

ಬಹಿರಂಗವಾಗಿ ಯಾವ ಕಾದಾಟದಲ್ಲೂ ಕೀಚಕ ಮಣಿಯುವವನಲ್ಲ. ಆದ್ದರಿಂದ ಪಾಂಚಾ ಲಿಯೇ ಸೆರಗು ತೋರಿಸಿ ಆತನನ್ನು ನಿರ್ಜನ ಸ್ಥಳಕ್ಕೆ ಕತ್ತಲೆಯಲ್ಲಿ ತರಬೇಕು. ಅಲ್ಲಿ ಹೊಂಚು ಹಾಕಿ

ಆತನನ್ನು ಮುಗಿಸಿಬಿಡುವುದು. ನಂತರ ಅವನ ಚಾರಿತ್ರ್ಯ ವಧೆ ನಡೆಸಿದರೆ ಅವನ ವಧೆ ನ್ಯಾಯವಾಗಿ ಕಂಡು ಬರಬಹುದು. ಅನ್ಯಾಯವಾಗಿ ತೋರಿದರೂ, ಪಾಂಡವರ ಭಯಕ್ಕೆ ಭಯಾವಹ ಕೃತ್ಯಕ್ಕೆ ತಲ್ಲಣಗೊಂಡ ವಿರಾಟ ನಗರದ ಅರಮನೆ ಬಾಯಲ್ಲಿ ನಾಲಿಗೆ ಹಾಕಿಕೊಂಡು ತೆಪ್ಪಗಾದೀತು ಎಂದು ಪಾಂಡವರು ಲೆಕ್ಕ ಹಾಕಿರಬಹುದೇ? ಪೂರ್ವ ನಿಯೋಜಿತ ಕೊಲೆಗಳಲ್ಲಿ ಹಾಗೂ ನಿಯೋಜಿತ ಕೊಲೆಗಳನ್ನು ತಪ್ಪಿಸುವಲ್ಲಿ ಕುರುವಂಶದ ಇಡೀ ಇತಿಹಾಸವೇ ಅಡಗಿದೆಯಲ್ಲ.

ಬಾಲ ಕೃಷ್ಣನ ಕೊಲೆಯನ್ನು ತಪ್ಪಿಸಲಾಯಿತು. ಕಂಸನ ವಧೆಯನ್ನು ಯೋಜಿಸಲಾಯಿತು. ಅಲ್ಲಿಂದ ಆರಂಭಗೊಂಡ ಸರಣಿ ಎಲ್ಲಿಯವರೆಗೆ ಮುಂದುವರೆದಿದೆಯಲ್ಲ, ಎಂದು ಉತ್ತರೆ ಕನಲಿದಳು.

ಅರಗಿನ ಮನೆಯ ಪ್ರಕರಣ, ಕರ್ಣನ ಕವಚ ಕುಂಡಲಗಳ ಭಿಕ್ಷೆ, ಅಭಿಮನ್ಯುವಿನ ವೀರಮರಣ, ಜಯದ್ರಥನ ಶಿರಚ್ಛೇದನ, ಭೀಷ್ಮನ ಇಚ್ಛಾಮರಣ, ದ್ರೋಣನಲ್ಲಿ ಸುಳ್ಳುಗಾರಿಕೆ, ಮಲಗಿ ನಿದ್ದೆ ಮಾಡುತ್ತಿದ್ದ ಉಪಪಾಂಡವರ ಸಾಮೂಹಿಕ ಕೊಲೆ, ಧೃತರಾಷ್ಟ್ರನ ಕೊನೆಯ ಯತ್ನ! ಎಲ್ಲಕ್ಕೂ ಹೆಸರು ಮಾತ್ರ ಬೇರೆ ಬೇರೆ. ನಡೆದದ್ದು ಮಾತ್ರ ಪೂರ್ವಯೋಜಿತ ಹತ್ಯೆ ಅಥವಾ ಅದರ ಯತ್ನ.

ಆ ಕುರುವಂಶದ ಕುರುಹು ಪರೀಕ್ಷಿತ, ತಂದೆಯ ಕಡೆಯಿಂದ ಕುರುವಂಶದವನೋ ಅಲ್ಲವೋ! ಆ ಸಂಸ್ಕೃತಿಯಲ್ಲಿ, ಆ ವಾತಾವರಣದಲ್ಲಿ ಉಳಿದು ಬೆಳೆದವ. ತಾಯಿಯ ಕಡೆಯಿಂದಂತೂ ಕೃಷ್ಣನ ಸೋದರ ಸಂಬಂಧಿ, ಸಾಕಲ್ಲ ಎಂದುಕೊಂಡಳು.

ಎಷ್ಟು ಹೇಗೆ ಯೋಚಿಸಿದರೂ ಅವಳಿಗೆ ತರ್ಕ ಆತಂಕವನ್ನೆ ತಂದಿತು. ಕುಳಿತಲ್ಲೆ ಅವಳ ಸುತ್ತ ದಟ್ಟನೆಯ ಬಲೆಯನ್ನು ಹೆಣೆಯಲಾಗುತ್ತಿದೆ ಎಂದು ಭಾಸವಾಗತೊಡಗಿತು. ತನ್ನ ತರ್ಕ ಸರಿ ಇದ್ದರೆ ಇದೀಗ ಸತ್ಯಾಶ್ರಯರದೇ ಸರದಿ. ಅವರಿಗೆ ಮರಣ ಬಂದರೆ ಮುಂದಿನ ಗುರಿ ತನ್ನದೇ ಕತ್ತು ಎಂದಾಕೆ ನಿರ್ಧರಿಸಿಬಿಟ್ಟಳು.

ಪ್ರೀತಿಬಾಲೆ ಹೊರಾಂಗಣದಲ್ಲಿ ಅಡ್ಡಾಡುವುದು ಕಂಡಿತು. ಒಳಗೆ ಬರುವ ವಿಚಾರವಿದ್ದಂತೆ



ಕಾಣಲಿಲ್ಲ. ಇನ್ನೊಬ್ಬ ವೃದ್ಧ ದಾಸಿ ಒಳಗೆ ಬಂದು- "ಪ್ರೀತಿಬಾಲೆ ಅರಮನೆ ತೊರೆದು ವಿರಾಟ ನಗರಕ್ಕೆ ಮರಳುವ ಸಿದ್ಧತೆಯಲ್ಲಿದ್ದಾಳೆ. ಅವಳಿಗೆ ತಾವು ಶುಭ ಕೋರಬೇಕು ಎಂದು ಬೇಡಿದ್ದಾಳೆ."

ಉತ್ತರೆಯ ತಲೆಯ ತುಂಬ ಗಿರಿಗಿರಿ ಬುಗುರೆ ಆಡಿತು. ಬಹಳ ತಿರುಗಿ, ವೇಗ ಅತಿಯಾಗಿ ತಿರುಗುವ ಬುಗುರೆ ನಿದ್ದೆ ಮಾಡಿತು. ಉತ್ತರೆಯ ವಿಚಾರ ಶಕ್ತಿ ಒಂದು ಗಳಿಗೆ ಸ್ತಬ್ಧವಾದಂತಾಗಿ ಮತ್ತೆ ಮರಕಳಿಸಿತು.

"ತೊಲಗಿ ಹೋಗುವುದಾದರೆ ಹೋಗಲಿ. ಆದರೆ ಭೆಟ್ಟಿಯಾಗಿಯೂ ಹೋಗದಿರಲು ನನಗೇನು ಕುಷ್ಠರೋಗವೇ?" ಎಂದು ಉತ್ತರೆ ಸಿಡಿಮಿಡಿಗೊಂಡಳು. ಈ ಮಾತನ್ನು ಎಲ್ಲಿಂದಲೋ ಕೇಳಿಸಿಕೊಂಡ ಪ್ರೀತಿಬಾಲೆ ಓಡುತ್ತ ಬಂದು ರಾಜಮಾತೆಯ ಕಾಲಿಗೆರಗಿದಳು.

"ದೇವಿ ಹೂವಿನೊಡನೆ ನಾರು ದೇವರ ತಲೆಗೇರುವದಿಲ್ಲವೇ? ಹಾಗೇ ನಾನೂ. ನಿಮ್ಮ ಪ್ರಬುದ್ಧತೆ ನನ್ನಲ್ಲೂ ಬುದ್ಧಿಯ ಎಳೆಗಳನ್ನು ನುಸುಳಿಸಿದೆ. ಅದರ ಪರಿಣಾಮವೇ ಈ ಕೊನೆಗಳಿಗೆಯ ಹುಚ್ಚಾಟ. ನಾನು ಊರು ಸೇರಲು ಬಿಡಿ. ಕೀಚಕನ ಮೊಮ್ಮಗ ಈಗ ಪಟ್ಟಕ್ಕೆ ಬಂದಿದ್ದಾನು," ಎಂದಳು.

"ಸರಿ, ಹೋಗು ಪ್ರೀತಿಬಾಲೇ ಹೋಗು. ನೀನು ಅಲ್ಲಿಯವರೆಗೂ ಹೋಗಲೇಬೇಕು. ನೀನೇ ಹೋಗುವದು ಸಾಧ್ಯ," ಎಂದು ಹೇಳಿದ ಉತ್ತರೆ ಭಾವಪರವಶಳಾಗಿ ತನ್ನ ಅಂತಸ್ತನ್ನು ಮರೆತೂ, ತೊರೆದೂ ಪ್ರೀತಿಬಾಲೆಯನ್ನು ಎಳೆದು ಅಪ್ಪಿಕೊಂಡಳು.

ಪ್ರೀತಿಬಾಲೆಯ ಬಾಯಿ ರಾಜಮಾತೆಯ ಕಿವಿಯ ಬಳಿ ಬಂದಾಗ ಅವಳು ಮೆಲ್ಲಗೆ ರಾಣಿಯ ತಲೆ ನೇವರಿಸುತ್ತ ನುಡಿದಳು,

"ಸತ್ಯಾಶ್ರಯರದು ವ್ಯರ್ಥ ಪ್ರಯತ್ನವಾಯಿತು. ಕುರುರಾಜ್ಯದ ಮೇರೆ ಇನ್ನೂ ಎರಡು ಹರದಾರಿ ಇರುವಾಗಲೇ ಅವರ ಬೆನ್ನಲ್ಲಿ ಮರಣಾಂತಿಕ ಬಾಣಗಳು ನಟ್ಟಿವೆ. ಅವರ ಕುದುರೆ ಶವವನ್ನು ಮೈಯಿಂದ ಕೆಳಗೆ ಕೊಡಹಿ ಮರಳಿ ಬಂದಿದೆ."

ಈ ವಾರ್ತೆಯಿಂದ ಉತ್ತರಾದೇವಿ ಸ್ಫೋಟಗೊಳ್ಳುವಳೆಂದು ಪ್ರೀತಿಬಾಲೆ ಊಹಿಸಿದ್ದಳು. ಆದರೆ ಹಾಗೇನೂ ಆಗಲಿಲ್ಲ. ಬದಲಾಗಿ, ತನ್ನ ಎದೆಗೆ ತಾಗಿದ್ದ ಅವರ ಹೃದಯದ ಬಡಿತ ಸ್ತಬ್ಧಗೊಂಡಂತೆ ಅವಳಿಗೆ ಅನಿಸಿತು. ಏಕೆಂದರೆ ಉತ್ತರೆಯ ನಿರ್ಜೀವ ಕುತ್ತಿಗೆ ಪ್ರೀತಿಬಾಲೆಯ ಹೆಗಲ ಮೇಲೆ ಹೇಗೋ ನಿಂತುಕೊಂಡದ್ದು ಮರುಕ್ಷಣದಲ್ಲೆ ಅವಳಿಗೆ ಗೊತ್ತಾಯಿತು.

---

## ಅಹಿಂಸಾವಾದಿ ಪಾದರಕ್ಷೆ!

ಇಂಗ್ಲಂಡಿನ ದಕ್ಷಿಣ ಭಾಗದಲ್ಲಿ ಬ್ರಿಂಗ್ಟನ್ ಎಂಬ ಶಹರವೊಂದಿದೆ. ರಾಬಿನ್ ಎಂಬ ತರುಣನೊಬ್ಬ ಈಗ ಆ ಊರಿನಲ್ಲೂ ಸುತ್ತಮುತ್ತಲಿನ ಪ್ರದೇಶದಲ್ಲೂ ಜನಪ್ರಿಯನಾಗಿದ್ದಾನೆ. ಆತ 'ಅಹಿಂಸಾವಾದಿ ಪಾದರಕ್ಷೆ'ಗಳನ್ನು ತಯಾರಿಸುವ ಏಕಮಾತ್ರ ವ್ಯಕ್ತಿಯಂತೆ. ಈ ಪಾದರಕ್ಷೆಗಳು ಚರ್ಮದಿಂದ ಮಾಡಿದಂಥವಲ್ಲ. ಬದಲಾಗಿ ಅಷ್ಟೇ ತಾಳಿಕೆ ಹಾಗೂ ಸಾಮರ್ಥ್ಯವುಳ್ಳ ಬೇರೆ ಹಲವು ಸಾಮಗ್ರಿ ಬಳಸಿ ತಯಾರಿಸಿದಂಥವು. ನೀರಿನಲ್ಲಿ ನೆನೆದರೂ ಕೆಡದಂಥವು. 'ಡಾ. ಮಾರ್ಟಿನ್ ಬೂಟ್' ಎಂದು ಇವುಗಳಿಗೆ ರಾಬಿನ್ ಹೆಸರಿಟ್ಟಿದ್ದಾನೆ. ಹಲವು ಡಿಜೈನ್‌ಗಳಲ್ಲಿ ಈ ಪಾದರಕ್ಷೆಗಳು ಲಭ್ಯವಂತೆ. ಮಾಂಸಾಹಾರ ತ್ಯಜಿಸಿರುವ, ತ್ಯಜಿಸುತ್ತಿರುವ ಜನ ಈಗ ಅಲ್ಲಿ ಈ ಅಹಿಂಸಾವಾದಿ ಚಪ್ಪಲಿ ಮತ್ತು ಬೂಟುಗಳನ್ನೇ ಹೆಚ್ಚಾಗಿ ಕೊಳ್ಳುತ್ತಿದ್ದಾರಂತೆ.

# ಜೀವ ಜಾಲಾಡುವ ಜಾಂಡೀಸ್



• ಡಾ. ಡಿ.ಕೆ. ಮಹಾಬಲರಾಜು
ಸಹಪ್ರಾಧ್ಯಾಪಕ, ಸಮುದಾಯ ಆರೋಗ್ಯ
ವಿಭಾಗ,
ಜೆ.ಜೆ.ಎಂ. ಮೆಡಿಕಲ್ ಕಾಲೇಜು,
ದಾವಣಗೆರೆ.

ಆರೋಗ್ಯದಂಗಳ

# ಜೀವ ಜಾಲಾಡುವ

# ಜಾಂಡೀಸ್

ಮಾನವನಿಗೆ ಭೀತಿಯನ್ನುಂಟುಮಾಡುವ ಕಾಯಿಲೆಗಳಲ್ಲಿ ಕಾಮಾಲೆಗೆ ಮೊದಲಸ್ಥಾನ. ಹಾಗೆ ನೋಡಿದರೆ ಇದು ಒಂದು ಕಾಯಿಲೆಯೇ ಅಲ್ಲ; ನಮ್ಮ ದೇಹದ ಭೌತ-ರಾಸಾಯನಿಕ ಕ್ರಿಯೆಯಲ್ಲಿ ಉಂಟಾದ ಊನತೆಯನ್ನು ಬಹಿರಂಗಪಡಿಸುವ ವಿಶಿಷ್ಟ ಚಿಹ್ನೆ.

ಬಿಲುರಿಬಿನ್ ಎಂಬುದು ನಮ್ಮ ದೇಹದಲ್ಲಿ ನಿರಂತರವಾಗಿ ಉತ್ಪಾದನೆಯಾಗುವ ಹಳದಿವರ್ಣದ ಕಲ್ಮಷ ಪದಾರ್ಥ. ಇದನ್ನು ದೇಹದಿಂದ ಹೊರಹಾಕುವ ಹೊಣೆ ಯಕೃತ್ತಿನದು. ಈ ವ್ಯವಸ್ಥಿತ ಕಾರ್ಯದಲ್ಲಿ ತೊಡಕುಂಟಾದರೆ, ಬಿಲುರಿಬಿನ್ ಸಮರ್ಪಕವಾಗಿ ವಿಸರ್ಜನೆಗೊಳ್ಳದೆ ರಕ್ತದಲ್ಲಿ ಕಲೆತು, ದೇಹದ ಅಂಗಾಂಗಗಳಿಗೆ ಹಳದಿ ರಂಗನ್ನು ತಂದುಕೊಡುತ್ತಾ ರೋಗಿಯ ಸ್ಥಿತಿಯನ್ನು ವಿಷಮಗೊಳಿಸುತ್ತದೆ. ಈ ಪರಿಸ್ಥಿತಿಯನ್ನೇ ನಾವು ಕಾಮಾಲೆ, ಕಾಮಣಿ, ಅರಿಶಿನ ಮುಂಡಿಗೆ, ಜಾಂಡೀಸ್ ಇತ್ಯಾದಿ ಹೆಸರುಗಳಿಂದ ಕರೆಯುತ್ತೇವೆ. ಗ್ರೀಕ್ ಭಾಷೆಯಲ್ಲಿ ಹಳದಿ ವರ್ಣದ ಒಂದು ಪಕ್ಷಿಗೆ 'ಜಾಂಡೀಸ್' ಎನ್ನುತ್ತಾರೆ. ಮಾನವ ದೇಹವನ್ನು ಹಳದಿ ಬಣ್ಣವಾಗಿಸುವ ಕಾಮಾಲೆಗೂ ಇದೇ ಹೆಸರನ್ನು ಉಳಿಸಿಕೊಳ್ಳಲಾಗಿದೆ.

ಪುರಾತನ ಕಾಲದಿಂದಲೂ ಮಾನವನಿಗೆ ಭೀತಿಯನ್ನುಂಟುಮಾಡುತ್ತಿರುವ ಕಾಮಾಲೆ ಇಂದಿಗೂ ಒಂದು ಅಪಾಯಕಾರಿ ರೋಗದ ಚಿಹ್ನೆಯಾಗಿಯೇ ಉಳಿದಿದೆ. ಹೀಗಾಗಿ ಕಾಮಾಲೆ ರೋಗಕ್ಕೆ ತುತ್ತಾದವರು ಬೇರೆ ಬೇರೆ ವೈದ್ಯಕೀಯ ಪದ್ಧತಿಗಳನ್ನನುಸರಿಸುವವರನ್ನು ಕಾಣುವುದಲ್ಲದೆ, ನಾಟಿ ಮದ್ದನ್ನೂ ಮರೆಯುವುದಿಲ್ಲ. ಮೂತ್ರಪಿಂಡ ತನ್ನ ಕಾರ್ಯನಿರ್ವಹಿಸದಂತಾದಾಗ ದೇಹದಲ್ಲಿ ಕಲ್ಮಷ ಪದಾರ್ಥ ಉಳಿದು ರೋಗಿಯ ಸ್ಥಿತಿ ಚಿಂತಾಜನಕವಾಗುವಂತೆಯೇ ಜಾಂಡೀಸ್‌ನಲ್ಲಿಯೂ 'ಬಿಲುರಿಬಿನ್' ಎಂಬ ಹಳದಿ ವರ್ಣದ ಕಲ್ಮಷ ವಿಸರ್ಜಿತಗೊಳ್ಳದೇ ದೇಹದಲ್ಲಿ ಉಳಿದು ರೋಗಿಯ ಸ್ಥಿತಿಯನ್ನು ಗಂಭೀರವಾಗಿಸುತ್ತದೆ.

'ಜಾಂಡೀಸ್' ಏಕೆ ಬರುತ್ತದೆ? ಜಾಂಡೀಸ್ ಬಂದಾಗ ದೇಹವೇಕೆ ಹಳದಿಯಾಗುತ್ತದೆ? ಇದರ ಚಿಕಿತ್ಸೆ ಏನು? ನಿವಾರಣೋಪಾಯ ಹೇಗೆ ಎಂಬ ಪ್ರಶ್ನೆಗಳಿಗೆ ಉತ್ತರವನ್ನು ತಿಳಿಯೋಣ.

## ಆರೋಗ್ಯದಂಗಳ

ಆರೋಗ್ಯವಂತ ವಯಸ್ಕರ ದೇಹದಲ್ಲಿ ಸುಮಾರು ಐದು ಲೀಟರುಗಳಷ್ಟು ರಕ್ತವಿರುತ್ತದೆ. ಸರಾಸರಿ ಒಂದು ಘನ ಮಿಲಿಲೀಟರ್ ರಕ್ತದಲ್ಲಿ ೭.೨ ಮೈಕ್ರಾನ್ (೧ ಮೈಕ್ರಾನ್ = ೧ ಮಿ.ಮೀ.ನ ೧೦೦೦ದ ಒಂದು ಭಾಗ) ವ್ಯಾಸವುಳ್ಳ ಗೋಲಾಕಾರದ ೫೦ ಲಕ್ಷ ಕೆಂಪು ರಕ್ತಕಣಗಳಿರುತ್ತವೆ. ರಕ್ತ ಕೆಂಪಾಗಿರುವುದಕ್ಕೆ ರಕ್ತಕಣಗಳಲ್ಲಿ ಅಡಕವಾಗಿರುವ ಹೀಮೋಗ್ಲೋಬಿನ್ ಎಂಬ ವಸ್ತುವೇ ಕಾರಣ. ಪ್ರತಿ ನೂರು ಮಿಲಿಲೀಟರ್ ರಕ್ತದಲ್ಲಿ ೧೪.೬ ಗ್ರ್ಯಾಂ ಹೀಮೋಗ್ಲೋಬಿನ್ ಇದ್ದರೆ ರಕ್ತದಲ್ಲಿ ಶೇಕಡ ೧೦೦ ಹೀಮೋಗ್ಲೋಬಿನ್ ಇದೆ ಎನ್ನುತ್ತೇವೆ. ಒಟ್ಟಾರೆ ನಮ್ಮ ದೇಹದಲ್ಲಿ ೭೫೦ ಗ್ರಾಂ ಹೀಮೋಗ್ಲೋಬಿನ್ ಇದೆ.

ಕೆಂಪು ರಕ್ತಕಣಗಳ ಆಯುರ್ಮಾನ ೧೨೦ ದಿನ ಮಾತ್ರ. ಆಯುಷ್ಯ ಮುಗಿದ ರಕ್ತಕಣಗಳು ಗತಿಸುವುದು, ಆ ಕಣಗಳ ಸ್ಥಾನ ತುಂಬಲು ಹೊಸಕಣಗಳು ಉದ್ಭವಗೊಳ್ಳುವುದು ದೇಹದಲ್ಲಿ ನಿರಂತರವಾಗಿ ನಡೆಯುವ ಕ್ರಿಯೆ.

ಪ್ರತಿ ನಿತ್ಯ ನಾಶವಾಗಿ ಒಡೆವ ರಕ್ತಕಣಗಳಿಂದ ೬.೨೫ ಗ್ರಾಮ್‌ಗಳಷ್ಟು ಹೀಮೋಗ್ಲೋಬಿನ್ ಹೊರಬರುತ್ತದೆ. ಇದು ಕಬ್ಬಿಣ, ಗ್ಲೋಬ್ಯುಲಿನ್ ಮತ್ತು ಬಿಲುರಿಬಿನ್ ಎಂಬ ಪದಾರ್ಥಗಳಾಗಿ ವಿಭಜನೆಗೊಳ್ಳುತ್ತದೆ. ದೇಹದಲ್ಲಿ ಕಬ್ಬಿಣ ಮತ್ತು ಗ್ಲೋಬ್ಯುಲಿನ್‌ಗಳ ಮರು ಬಳಕೆಯಾದರೆ ಬಿಲುರಿಬಿನ್ ತ್ಯಾಜ್ಯವಸ್ತುವಾಗಿದ್ದು ದೇಹದಿಂದ ವಿಸರ್ಜಿಸಲ್ಪಡುತ್ತದೆ.

ರಕ್ತಕಣಗಳಿಂದ ಹೊರಹೊಮ್ಮಿದ್ದ, ನೀರಿನಲ್ಲಿ ಕರಗದ ಹಳದಿ ಬಣ್ಣದ ಬಿಲುರಿಬಿನ್‌ಅನ್ನು ಪಿತ್ತ ಎನ್ನಬಹುದು. ಇದು ಆಲ್ಬುಮಿನ್ ಜೊತೆ ಸಂಯೋಜನೆಗೊಂಡು ಯಕೃತ್ತನ್ನು ತಲುಪುತ್ತದೆ. ಯಕೃತ್ತು ನೀರಿನಲ್ಲಿ ಕರಗದ ಬಿಲುರಿಬಿನ್‌ಅನ್ನು ನೀರಿನಲ್ಲಿ ಕರಗುವ ಬಿಲುರಿಬಿನ್ ಆಗಿ ಮಾರ್ಪಡಿಸುತ್ತದೆ. ಆಗ ಬಿಲುರಿಬಿನ್ ಸರಾಗವಾಗಿ ವಿಸರ್ಜಿತವಾಗುತ್ತದೆ. ಯಕೃತ್ತಿನಲ್ಲಿ ಪರಿವರ್ತನೆಗೊಂಡ ಬಿಲುರಿಬಿನ್ ಪಿತ್ತನಾಳಗಳಲ್ಲಿ ಸಾಗಿ ಕರುಳನ್ನು ಸೇರುತ್ತದೆ. ಅಲ್ಲಿಂದ ಬಹುಪಾಲಂಶದ ಬಿಲುರಿಬಿನ್ ಮಲದೊಂದಿಗೆ ವಿಸರ್ಜಿತವಾಗುತ್ತದೆ. ಹೀಗಾಗಿ

ಡಾ. ಡಿ.ಕೆ. ಮಹಾಬಲರಾಜು

ಈಗಾಗಲೇ 'ಕಸ್ತೂರಿ'ಯ ಓದುಗರಿಗೆ ಇದೇ ಅಂಕಣದ ಮೂಲಕ ಪರಿಚಿತರಾದ ಡಾ. ಡಿ.ಕೆ. ಮಹಾಬಲರಾಜು ಅವರು ವೈದ್ಯವೃತ್ತಿಯ ಜತೆಗೆ ಲೇಖನ ವೃತ್ತಿಯನ್ನೂ ಮುಂದುವರಿಸಿಕೊಂಡು ಬಂದವರು. ಕನ್ನಡದಲ್ಲಿ ವೈದ್ಯಕೀಯ ಲೇಖನಗಳನ್ನು ಬರೆಯುವ ಒಳ್ಳೆಯ ಲೇಖಕರಲ್ಲಿ ಡಾ. ಮಹಾಬಲರಾಜು ಕೂಡ ಒಬ್ಬರು. ಅವರ ನಿರೂಪಣೆ ಮಾಹಿತಿಪೂರ್ಣವಾಗಿರುವಂತೆಯೆ ಸುಭಗ ಶೈಲಿಯನ್ನೂ ಉಳ್ಳಂಥದು.




ಹಳದಿ ಪಿತ್ತ ಉತ್ಪತ್ತಿ ಮತ್ತು ವಿಸರ್ಜನೆ

ಮಲದ ಬಣ್ಣ ಹಳದಿಯಾಗಿರುತ್ತದೆ. ಕರುಳಿನಿಂದ ಹೀರಲ್ಪಟ್ಟ ಅತ್ಯಲ್ಪ ಬಿಲುರಿಬಿನ್ ಮೂತ್ರದ ಮೂಲಕ ವಿಸರ್ಜಿತವಾಗುತ್ತದೆ.

ಆರೋಗ್ಯವಂತರ ದೇಹದಲ್ಲಿ ಪ್ರತಿ ನಿತ್ಯ ಉತ್ಪತ್ತಿಯಾಗುವ ಬಿಲುರಿಬಿನ್ನಿನ ಪ್ರಮಾಣ ೨೫೦ ಮಿಲಿ ಗ್ರಾಂ ಮೀರದಾದರೂ ಇದರ ಹತ್ತರಷ್ಟನ್ನು (೨೫೦೦ ಮಿ.ಗ್ರಾಂ.) ಮಾರ್ಪಡಿಸಿ ವಿಸರ್ಜಿಸುವ ಸಾಮರ್ಥ್ಯ ಯಕೃತ್ತಿಗಿದೆ. ಹೀಗಾಗಿ ಆರೋಗ್ಯದಿಂದಿರುವವರ ೧೦೦ ಮಿಲಿಲೀಟರಿನಷ್ಟು ರಕ್ತದಲ್ಲಿ ಹೆಚ್ಚೆಂದರೆ ೦.೮ ಮಿಲಿ ಗ್ರಾಂ ಪ್ರಮಾಣದ ಬಿಲುರಿಬಿನ್ ಮಾತ್ರ ಇರುತ್ತದೆ. ಬಿಲುರಿಬಿನ್ನಿನ ವಿಸರ್ಜನೆಯಲ್ಲಿ ಅಡ್ಡಿಯುಂಟಾದರೆ ರಕ್ತದಲ್ಲಿ ನಿರುಪಯುಕ್ತವಾದ ಹಳದಿ ಪಿತ್ತ ಸಂಗ್ರಹಗೊಳ್ಳುತ್ತಾ ಹೋಗುತ್ತದೆ. ೧೦೦ ಮಿ.ಲೀ. ರಕ್ತದಲ್ಲಿ ಬಿಲುರಿಬಿನ್ ಪ್ರಮಾಣ ೩ ಮಿಲಿಗ್ರಾಮುಗಳಿಗಿಂತ ಹೆಚ್ಚಾದರೆ ಇದು ಕಣ್ಣಿನ ಗುಡ್ಡೆ, ಚರ್ಮ, ಮುಂತಾದ ಅವಯವಗಳ (ಮಿದುಳನ್ನು ಬಿಟ್ಟು) ಬಣ್ಣವನ್ನು ಹಳದಿಯಾಗಿಸುತ್ತದೆ.

### ಕಾಮಾಲೆ ಉಂಟಾಗುವ ಮೂರು ಮುಖ್ಯ ಸಂದರ್ಭಗಳು:

೧. ರಕ್ತಕಣಗಳಲ್ಲಿ ಜನ್ಮ ಸಂಜಾತ ನ್ಯೂನತೆಗಳಿದ್ದರೆ, ಹೊಂದದ ರಕ್ತದ ಪೂರೈಕೆಯಾದರೆ, ರಕ್ತದ ಕ್ಯಾನ್ಸರ್ ಉಂಟಾದರೆ, ಹಾವು ಕಚ್ಚಿದ್ದರೆ, ವಿಷ

ಸೇವನೆಯಾಗಿದ್ದರೆ, ಸುಟ್ಟಗಾಯಗಳಾಗಿದ್ದರೆ, ಭೀಕರ ಮಲೇರಿಯ ರೋಗವಿದ್ದರೆ ಮತ್ತು ಕೆಲ ಔಷಧಿಗಳ ಸೇವನೆಯಿಂದ ರಕ್ತಕಣಗಳ ನಾಶದ ಪ್ರಮಾಣ ಒಮ್ಮೆಲೆ ಹೆಚ್ಚಾಗಿ ಬಿಲುರಿಬಿನ್ ವಿಸರ್ಜಿಸುವಲ್ಲಿ ಯಕೃತ್ತಿಗಿರುವ ಸಾಮರ್ಥ್ಯಕ್ಕಿಂತ ಹೆಚ್ಚು ಪ್ರಮಾಣದ ಬಿಲುರಿಬಿನ್ ಬಿಡುಗಡೆಯಾಗುತ್ತದೆ.

೨. ಕೆಲ ರೋಗಾಣುಗಳ ಸೋಂಕು- ಅದರಲ್ಲೂ ಮುಖ್ಯವಾಗಿ ವೈರಸ್, ಹಾಗೂ ಮದ್ಯಪಾನ, ವಿಷ ಸೇವನೆ, ಕೆಲ ಔಷಧಿಗಳ ಬಳಕೆಯಿಂದ- ಯಕೃತ್ತು ಹಾಳಾಗಿ ತತ್ಪರಿಣಾಮವಾಗಿ ಅದು ಬಿಲುರಿಬಿನ್‌ಅನ್ನು ಮಾರ್ಪಡಿಸಿ ವಿಸರ್ಜಿಸುವ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತದೆ. ಇದು ಕಾಮಾಲೆಯುಂಟಾಗಲು ಕಾರಣವಾಗುತ್ತದೆ.

೩. ಕೆಲವೊಮ್ಮೆ ಪಿತ್ತರಸ ಸಾಗುವ ನಾಳದಲ್ಲಿ ಕಲ್ಲು, ಜಂತುಹುಳ ಅಥವಾ ಕ್ಯಾನ್ಸರ್‌ಗಡ್ಡೆ ಇದ್ದು ಪಿತ್ತರಸದ ವಿಸರ್ಜನೆಗೆ ಅಡ್ಡಿಯಾಗುತ್ತದೆ.

ಒಟ್ಟಿನಲ್ಲಿ ೧) ರಕ್ತಕಣಗಳಲ್ಲಿನ ದೋಷ ೨) ಯಕೃತ್ತಿನ ದೋಷ ೩) ಪಿತ್ತನಾಳದಲ್ಲಿನ ಅಡೆತಡೆ ಈ ಮೂರು ರೀತಿಯ ಪ್ರಸಂಗಗಳಲ್ಲಿ ಬಿಲುರಿಬಿನ್ನಿನ ಪ್ರಮಾಣ ಹೆಚ್ಚಿ ಅದರ ಫಲವಾಗಿ ಜಾಂಡೀಸ್ ಕಾಣಿಸಿಕೊಳ್ಳುತ್ತದೆ.




ಜಾಂಡೀಸ್ ಉಂಟಾಗುವ ರೀತಿ

## ಆರೋಗ್ಯದಂಗಳ

### ಕಂದಮ್ಮಗಳನ್ನೂ ಬಿಡುವುದಿಲ್ಲ

ಶೇಕಡಾ ೫೦ಕ್ಕಿಂತ ಹೆಚ್ಚು ನವಜಾತ ಶಿಶುಗಳಲ್ಲಿ ಹುಟ್ಟಿದ ೨ನೇ ದಿನವೇ ಕಾಮಾಲೆರೋಗ ಕಾಣಿಸಿಕೊಂಡು ೫ನೇ ದಿನ ಪರಕಾಷ್ಠೆ ತಲುಪಿ, ೭ನೇ ದಿನಕ್ಕೆ ತಂತಾನೆ ಮಾಯವಾಗುತ್ತದೆ. ಕರಗದ ಬಿಲುರಿಬಿನ್‌ಅನ್ನು ನೀರಿನಲ್ಲಿ ಕರಗುವ ಬಿಲುರಿಬಿನ್ ಆಗಿ ಪರಿವರ್ತನೆಗೊಳಿಸುವ ಕಿಣ್ವಗಳು ಯಕೃತ್ತಿನಲ್ಲಿ ಪೂರ್ಣವಾಗಿ ರೂಪಗೊಂಡಿರದೆ ಎಸಳಾಗಿರುವುದೇ ಕಂದಮ್ಮಗಳ ಕಾಮಾಲೆಗೆ ಮುಖ್ಯ ಕಾರಣ. ಸಹಜವಾಗಿ ತಲೆದೋರುವ ಈ ಕಾಮಾಲೆಯಿಂದ ಕಂದಮ್ಮಗಳಿಗೇನೂ ತೊಂದರೆಯಾಗದು. ೧೦೦ ಮಿಲಿ ಲೀಟರ್ ರಕ್ತದಲ್ಲಿ ಬಿಲುರಿಬಿನ್ ಪ್ರಮಾಣ ೧.೮ ಮಿಲಿಗ್ರಾಮುಗಳಿಗಿಂತ ಹೆಚ್ಚಾಗುವುದಿಲ್ಲವಾದ್ದರಿಂದ ಬಹಳಷ್ಟು ಮಕ್ಕಳಿಗೆ ಚಿಕಿತ್ಸೆಯ ಅಗತ್ಯವೇ ಬೀಳುವುದಿಲ್ಲ. ಆದರೆ ದಿನತುಂಬುವ ಮೊದಲೇ ಜನಿಸಿದ ಮಕ್ಕಳಲ್ಲಿ ಜಾಂಡೀಸ್ ಪ್ರಕಟವಾಗಿ ಎರಡುವಾರಗಳ ಅನಂತರವೂ ಮುಂದುವರೆದರೆ ಇಂತಹ ಮಕ್ಕಳನ್ನು ನಗ್ನಸ್ಥಿತಿಯಲ್ಲಿ ನೈಸರ್ಗಿಕ ಅಥವಾ ಕೃತಕವಾದ ನೀಲಿ, ಬಿಳಿ, ಅಥವಾ ಹಸಿರು ವರ್ಣದ ಬೆಳಕಿಗೊಡ್ಡಿದರೆ ಚರ್ಮದಡಿ ಕಲೆತ ಬಿಲುರಿಬಿನ್ ಕರಗಿ ವಿಸರ್ಜನೆಗೊಳ್ಳುವುದರಿಂದ ಜಾಂಡೀಸ್ ನಿವಾರಣೆಯಾಗುತ್ತದೆ. ನಿದ್ದೆ ಮಾತ್ರೆಯಾದ ಫಿನೋಬಾರ್ಬಿಟೋನ್ ಸಹ ಶಿಶುವಿನಲ್ಲಿ ಜಾಂಡೀಸ್‌ನ ತೀವ್ರತೆಯನ್ನು ತಗ್ಗಿಸುತ್ತದೆ. ಅಪರೂಪಕ್ಕೊಂಬಂತೆ ಮಗುವಿನ ೧೦೦ ಮಿ.ಲೀ. ರಕ್ತದಲ್ಲಿ ಬಿಲುರಿಬಿನ್ ಪ್ರಮಾಣ ೧೮ ಮಿಲಿಗ್ರಾಂಗಳಿಗಿಂತ ಹೆಚ್ಚಾದಲ್ಲಿ, ಮಗುವಿನ ರಕ್ತತೆಗೆದು ದಾನಿಗಳಿಂದ ಪಡೆದ ರಕ್ತವನ್ನು ಪೂರೈಸಬೇಕಾಗುತ್ತವೆ.

### ಜನ್ಮತಃ ಉಂಟಾದ ಊನಗಳಿಂದ ಬರುವ ಜಾಂಡೀಸ್

ಗ್ಯಾಲಕ್ಟೋಸೀಮಿಯ, ಗಿಲ್ಬರ್ಟ್ ಕಾಯಿಲೆ, ಕ್ರಿಗ್ಲರ್ ನೀಜರ್ ಕಾಯಿಲೆ, ಡುಬಿನ್ ಜಾನ್ಸನ್ ಕಾಯಿಲೆ, ಗ್ಲುಕೋಸ್- ೬ ಪಾಸ್ಫೇಟ್-ಡಿ-ಹೈಡ್ರಿನೇಸ್ ಅಭಾವ ಮುಂತಾದ ಜನ್ಮ ಸಂಜಾತ ಪಚನಕ್ರಿಯೆಯ ಲೋಪದೊಂದಿಗೆ ಜನಿಸಿದ ಮಕ್ಕಳನ್ನು ಕಾಮಾಲೆರೋಗ ಪದೇ ಪದೇ ಕಾಡುತ್ತದೆ. ಹೀಗಾದಾಗ ಇಂತಹ ಮಕ್ಕಳಿಗೆ ಸೂಕ್ತವಲ್ಲದ ಆಹಾರ (ಹಾಲು, ಗೋದಿ ಇತ್ಯಾದಿ)ಗಳನ್ನು ವೈದ್ಯರಿಂದ ತಿಳಿದು, ಜೀವನ ಪರ್ಯಂತ ವರ್ಜಿಸಬೇಕಾಗುತ್ತದೆ. ಈ ಬಗೆಯ ಕಾಯಿಲೆಗಳು ಕಂಡುಬರುವುದು ಬಹಳ ಅಪರೂಪವಾಗಿ. ಕ್ರಿಗ್ಲರ್ ನೀಜರ್ ಕಾಯಿಲೆಯ ಮಕ್ಕಳು ಮಾತ್ರ ಹೆಚ್ಚೆಂದರೆ ಒಂದು ವರ್ಷ ಜೀವಿಸಬಹುದು. ಗಿಲ್ಬರ್ಟ್ ಕಾಯಿಲೆಯ ಮಕ್ಕಳು ಆಜೀವಪರ್ಯಂತ ಮದ್ಯಾರ್ಕ ಹಾಗೂ ಕೆಲ ಔಷಧಿಗಳನ್ನು ತ್ಯಜಿಸಿ ಸಹಜ ಜೀವನ ನಡೆಸಬಹುದು. ಗ್ಯಾಲಕ್ಟೋಸೀಮಿಯ ಬಂದ

## ಆರೋಗ್ಯದಂಗಳ

ಮಕ್ಕಳು ಕೊನೆಯವರೆಗೂ ಹಾಲನ್ನು ಸೇವಿಸುವಂತಿಲ್ಲ.

### ರಕ್ತ ಹೊಂದಾಣಿಕೆಯಾಗದೆ ಉಂಟಾಗುವ ಜಾಂಡೀಸ್

ತಾಯಿಯ ರಕ್ತದಲ್ಲಿ ಆರ್.ಹೆಚ್. ಅಂಶ ಇಲ್ಲದೆ, ತಂದೆಯಿಂದ ಆರ್.ಎಚ್. ಅಂಶ ಬಂದಿದ್ದಾಗಿದ್ದರೆ, ತಾಯಿ-ಮಗುವಿನ ರಕ್ತದಲ್ಲಿ ಹೊಂದಾಣಿಕೆಯಾಗದೆ, ಮಗುವಿನ ರಕ್ತಕಣಗಳು ಹೆಚ್ಚಿನ ಪ್ರಮಾಣದಲ್ಲಿ ಅಳಿಯುತ್ತವೆ. ಹೀಗೆ ನಾಶವಾದ ರಕ್ತಕಣಗಳಿಂದ ಹೊರಬಂದ ಬಿಲುರಿಬಿನ್ನಿನಿಂದ ಮಗು ಹುಟ್ಟುವಾಗಲೇ ಹಳದಿವರ್ಣವನ್ನು ಪಡೆದಿರುತ್ತದೆ. ಸೂಕ್ತ ಚಿಕಿತ್ಸೆ ದೊರೆಯದಿದ್ದಲ್ಲಿ, ಇಂತಹ ಶೇಕಡಾ ೭೦ ರಷ್ಟು ಮಕ್ಕಳು ಹುಟ್ಟಿದ ಒಂದು ವಾರದೊಳಗೇ ಆಸುನೀಗುತ್ತವೆಯಾದುದರಿಂದ ಸ್ವಲ್ಪವೂ ಅಲಕ್ಷ್ಯ ಸಲ್ಲದು. ನಮ್ಮ ದೇಶದಲ್ಲಿ ಜನಿಸುವ ಪ್ರತಿಸಾವಿರದಲ್ಲಿ ಎರಡು ಮಕ್ಕಳು ಈ ರೀತಿಯ ತೊಂದರೆಯನ್ನು ಅನುಭವಿಸುತ್ತಿವೆ. ತಾಯಂದಿರು ಗರ್ಭಿಣಿಯಾಗಿರುವಾಗ ತಮ್ಮ ರಕ್ತವನ್ನು ಪರೀಕ್ಷಿಸಿಕೊಂಡು, ಆರ್.ಹೆಚ್. ಅಂಶದ ತೊಡಕಿದ್ದಲ್ಲಿ ೭ ಮತ್ತು ೯ನೇ ತಿಂಗಳಲ್ಲಿ ಮತ್ತು ಹೆರಿಗೆಯಾದ ಅನಂತರ ಆರ್.ಹೆಚ್.ಇಮ್ಯುನೋಗ್ಲೋಬ್ಯುಲಿನ್ ಚುಚ್ಚುಮದ್ದನ್ನು ಪಡೆದು ಮಗುವಿಗುಂಟಾಗುವ ತೊಂದರೆಯನ್ನು ತಪ್ಪಿಸಬಹುದು.

### ವೈರಸ್‌ಗಳಿಂದ ಉಂಟಾಗುವ ಜಾಂಡೀಸ್

ಮಾನವನಿಗೆ ಉಂಟಾಗುವ ಬಹುಪಾಲು ಜಾಂಡೀಸ್ ಪ್ರಕರಣಗಳಿಗೆ ಒಂದು ಡಜನ್‌ಗಿಂತ ಹೆಚ್ಚು ವಿಧದ ವೈರಸ್‌ಗಳು ಮುಖ್ಯ ಕಾರಣವಾಗಿವೆ.

**ಜಾಂಡೀಸ್‌ಕಾರಕ ಹೆಪಟೈಟಿಸ್ ವೈರಸ್‌ಗಳು**

| ವೈರಸ್ | ಶೇಕಡಾವಾರು ಜಾಂಡೀಸ್ ಪ್ರಮಾಣ | |
|---|---|---|
| | ವಯಸ್ಕರಲ್ಲಿ | ಮಕ್ಕಳಲ್ಲಿ |
| ಹೆಪಟೈಟಿಸ್-ಎ | ೧೦ | ೫೦ |
| ಹೆಪಟೈಟಿಸ್-ಬಿ | ೪೦ | ೨೦ |
| ಹೆಪಟೈಟಿಸ್- 'ಎ' ಅಲ್ಲದ್ದು<br>ಹೆಪಟೈಟಿಸ್- 'ಬಿ' ಅಲ್ಲದ್ದು<br>ಡೆಲ್ಟಾ ಹೆಪಟೈಟಿಸ್ | ೫೦ | ೩೦ |

## ಆರೋಗ್ಯದಂಗಳ

ಯಕೃತ್ತಿನ ಜೀವಕಣಗಳ ಮೇಲೆ ಆಕ್ರಮಣ ನಡೆಸುವ 'ಹೆಪಟೈಟಿಸ್' ವೈರಸ್ಸುಗಳ ಸೋಂಕಿನಿಂದ ನಮ್ಮ ದೇಶದಲ್ಲಿ ಪ್ರತಿವರ್ಷ ೪೦ ಲಕ್ಷ ಜನರು ಜಾಂಡೀಸ್ ತೊಂದರೆಯನ್ನನುಭವಿಸುತ್ತಾರೆ.

ಯಕೃತ್ತಿನ ಜೀವಕಣಗಳಲ್ಲಿ ನೆಲಸಿ, ಅದರ ಕಾರ್ಯಕ್ಷಮತೆಯನ್ನು ಕುಗ್ಗಿಸಿ ಜಾಂಡೀಸ್‌ಅನ್ನು ಉಂಟುಮಾಡುವ ಹೆಪಟೈಟಿಸ್ ವೈರಸ್‌ಗಳಲ್ಲಿ ಐದು ವಿಧ.

### 'ಹೆಪಟೈಟಿಸ್-ಎ' ವೈರಸ್

ಸಾಮಾನ್ಯವಾಗಿ ಮಕ್ಕಳನ್ನೇ ಹೆಚ್ಚಾಗಿ ಕಾಡುವ ಈ ಸೋಂಕಿನಿಂದುಂಟಾಗುವ ಜಾಂಡೀಸ್ ಸೌಮ್ಯವಾಗಿಯೇ ಇದ್ದು, ಒಂದೆರಡು ವಾರಗಳಲ್ಲಿ ತಂತಾನೇ ಮಾಯವಾಗುವುದಾದರೂ, ಸಾವಿರದಲ್ಲಿ ಒಂದೆರಡು ಮಕ್ಕಳು ಅಸುನೀಗುವ ಸಾಧ್ಯತೆಯೂ ಇಲ್ಲದಿಲ್ಲ.

ಡೆಮನ್ ಎಂಬುವನು, ೨೭ ಮಿಲಿ ಮೈಕ್ರಾನ್ (೧ ಮಿಲಿ ಮೀಟರಿನ ಮೈಕ್ರಾನ್ = ೧ ಮಿಲಿ ಮೀಟರಿನ ೧೦ ಲಕ್ಷದಲ್ಲೊಂದು ಪಾಲು) ಗಾತ್ರದ ಹೆಪಟೈಟಿಸ್ ವೈರಸ್‌ಗಳನ್ನು ೧೯೭೩ರಲ್ಲಿ ಪತ್ತೆಹಚ್ಚಿದಾಗ ಈ ವೈರಸ್ಸಿನ ದಾಳಿಗೆ ಒಳಗಾದ ಮಕ್ಕಳ ಮಲದಲ್ಲಿ ಅಸಂಖ್ಯಾತ ವೈರಸ್‌ಗಳು ಇರುವುದು ಕಂಡುಬಂದಿತು. ನಮ್ಮ ದೇಶದಲ್ಲಿ ಬಯಲಿನಲ್ಲಿ ಮಲ ವಿಸರ್ಜಿಸುವ ಪದ್ಧತಿ ಇರುವುದರಿಂದ ಮಲದಲ್ಲಿನ ರೋಗಾಣುಗಳು, ನೊಣದ ಮೂಲಕ ನಮ್ಮ ಆಹಾರವನ್ನು ಸೇರಬಲ್ಲವು. ಮಲವನ್ನು ಗೊಬ್ಬರವಾಗಿ ಬಳಸುವುದರಿಂದ ಸೊಪ್ಪು, ತರಕಾರಿ, ಹಣ್ಣುಗಳಲ್ಲೂ ವೈರಸ್ ಸೇರುತ್ತವೆ. ದಿಲ್ಲಿಯಲ್ಲಿ ೧೯೫೫ರಲ್ಲಿ ಕುಡಿಯುವ ನೀರಿಗೆ ಒಳಚರಂಡಿ ನೀರು ಬೆರತ ಕಾರಣದಿಂದಾಗಿ ಒಮ್ಮೆಲೆ ೩೦,೦೦೦ ಕ್ಕಿಂತ ಹೆಚ್ಚು ಜನರು ಹೆಪಟೈಟಿಸ್-ಎ ವೈರಸ್ ಸೋಂಕಿಗೊಳಗಾಗಿ ತತ್ಫಲವಾಗಿ ಜಾಂಡೀಸ್ ಅನುಭವಿಸಬೇಕಾಯಿತು. ಒಟ್ಟಿನಲ್ಲಿ ರೋಗಾಣುಗಳು ಆಹಾರ, ನೀರಿನ ಮೂಲಕ ಆರೋಗ್ಯವಂತನ ದೇಹ ತಲುಪಿ, ೨ ರಿಂದ ೬ ವಾರಗಳ ಅನಂತರ ಜಾಂಡೀಸ್‌ಅನ್ನು ಉಂಟುಮಾಡುತ್ತವೆ. ವೈರಸ್‌ಗಳನ್ನು ಕೊಲ್ಲಬಲ್ಲ ಔಷಧಿ ಇಲ್ಲವಾದರೂ ಸೂಕ್ತ ಚಿಕಿತ್ಸೆಯಿಂದ ಬಹುಪಾಲು ರೋಗಿಗಳು ಒಂದೆರಡು ವಾರದಲ್ಲಿ ಗುಣಮುಖರಾಗಲು ಸಾಧ್ಯ. ಒಮ್ಮೆ ಈ ಸೋಂಕು ತಗಲಿತೆಂದರೆ ದೇಹದಲ್ಲಿ ರೋಗ ನಿರೋಧಕಶಕ್ತಿ ಬೆಳೆಯುವುದರಿಂದ ಜೀವಮಾನವಿಡಿ ಈ ಬಗೆಯ ಸೋಂಕು ಇನ್ನೊಮ್ಮೆ ಬಾರದು. ಕೆಲ ಮುನ್ನೆಚ್ಚರಿಕೆ ಕ್ರಮಗಳಿಂದ ನಾವು ಈ ರೀತಿಯ ಜಾಂಡೀಸ್ ಬಾರದಂತೆ ನೋಡಿಕೊಳ್ಳಬಹುದು.

### ಪ್ರತಿಬಂಧಕ ಕ್ರಮಗಳು

ಬಯಲಿನಲ್ಲಿ ಮಲ ವಿಸರ್ಜಿಸುವ ಪದ್ಧತಿಯನ್ನು ಬಿಟ್ಟುಬಿಡುವುದು.



ಪಿತ್ತನಾಳದಲ್ಲಿ ಕಾಣುವ ಅಡೆತಡೆಗಳು

ಆಹಾರ ಮತ್ತು ನೀರಿನ ಸ್ವಚ್ಛತೆಗೆ ಹೆಚ್ಚಿನ ಗಮನ ನೀಡುವುದು.

ಊಟಮಾಡುವ ಮುನ್ನ ಮತ್ತು ಮಲವಿಸರ್ಜಿಸಿದ ಅನಂತರ ಕೈಗಳನ್ನು ಸೋಪಿನಿಂದ ತೊಳೆಯುವುದು.

ಜಾಂಡೀಸ್ ಪಿಡುಗಿರುವ ದಿನಗಳಲ್ಲಿ ಅಧಿಕ ಪ್ರಮಾಣದಲ್ಲಿ ಕ್ಲೋರಿನ್ ಬೆರೆತ ನೀರನ್ನು ಕುಡಿಯುವುದು ಇಲ್ಲವೆ ಕಾಯಿಸಿ ಆರಿಸಿದ ನೀರನ್ನು ಬಳಸುವುದು.

ಹಸಿ ತರಕಾರಿ, ಹಣ್ಣುಗಳನ್ನು ಚೆನ್ನಾಗಿ ತೊಳೆದ ನಂತರವೇ ಸೇವಿಸುವುದು ಹಾಗೂ ಹಾಲನ್ನು ಕಾಯಿಸಿಯೇ ಉಪಯೋಗಿಸುವುದು.

ಪರಿಸರವನ್ನು ಸ್ವಚ್ಛವಾಗಿರಿಸಿಕೊಳ್ಳುವುದು.

ಕುಡಿಯುವ ನೀರಿನ ಸರಬರಾಜು, ಮತ್ತು ಒಳಚರಂಡಿಗಳು ಸಮರ್ಪಕವಾಗಿರುವಂತೆ ನೋಡಿಕೊಳ್ಳುವುದು.

### ಹೆಪಟೈಟಿಸ್-ಬಿ ವೈರಸ್

ಮಕ್ಕಳಿಗಿಂತ ವಯಸ್ಕರನ್ನು, ಹಳ್ಳಿಯವರಿಗಿಂತ ಪಟ್ಟಣದ ಕೊಳಗೇರಿ

ವಾಸಿಗಳನ್ನು ಹೆಚ್ಚಾಗಿ ಕಾಡುವ ಹೆಪಟೈಟಿಸ್-ಬಿ ವೈರಸ್ ಸೋಂಕಿನಿಂದಾದ ಜಾಂಡೀಸ್ ಅಪಾಯಕಾರಿಯಾಗಿದ್ದು, ಶೇಕಡಾ ಹದಿನೈದರಷ್ಟು ಜನರನ್ನು ಬಲಿತೆಗೆದುಕೊಳ್ಳುವಷ್ಟು ಉಗ್ರವಾಗಿದೆ. ನಮ್ಮ ದೇಶದಲ್ಲಿ ಪ್ರತಿವರ್ಷ ಲಕ್ಷಾಂತರ ಜನರು ಈ ರೀತಿಯ ಜಾಂಡೀಸ್‌ನಿಂದ ತೊಂದರೆಗೊಳಗಾಗುತ್ತಾರಲ್ಲದೆ ಸಾವಿರಾರು ಜನರು ಸಾವನ್ನಪ್ಪುತ್ತಿದ್ದಾರೆ.

ಹೆಪಟೈಟಿಸ್-ಬಿ ಸೋಂಕಿಗೊಳಗಾದವರ ರಕ್ತವನ್ನು ಪರೀಕ್ಷಿಸಿದಾಗ ಮೂರು ರೀತಿಯ ವಿಶಿಷ್ಟ ಕಣಗಳು ಕಾಣಸಿಗುತ್ತವೆ: ೧) ೨೨ ನ್ಯಾನೋ ಮೀಟರ್ (೧ ನ್ಯಾನೋಮೀಟರ್ = ೧ ಮಿಲಿಮೈಕ್ರಾನ್‌ಗೆ ಸಮ) ಗಾತ್ರದ ಗೋಲಾಕಾರದ ಕಣ ೨) ೨೨ ನ್ಯಾನೋ ಮೀಟರ್ ಗಾತ್ರದ ಉದ್ದನೆಯ ಕಣ ೩) ಕವಚ ಹೊಂದಿದ ೪೨ ನ್ಯಾನೋ ಮೀಟರ್ ಗಾತ್ರದ ವೈರಸ್ ಕಣ.

೧೯೭೦ರಲ್ಲಿ ಡೇನ್ ಎಂಬುವವನು ಈ ವೈರಸ್‌ಗಳನ್ನು ಗುರುತಿಸಿದನಾದುದರಿಂದ ಇವಕ್ಕೆ ಡೇನ್ ಕಣಗಳೆಂದೂ ಕರೆಯಲಾಗುತ್ತಿದೆ. ರೋಗಾಣುಗಳು ರೋಗಿಯ ದೇಹದಲ್ಲಿ ಉಂಟುಮಾಡುವ ಪ್ರತಿವಿಷವಸ್ತುವನ್ನು ಆಸ್ಟ್ರೇಲಿಯದಲ್ಲಿ ಬ್ಲೂಮರ್ಗ್ ಎಂಬಾತ ಶೋಧಿಸಿ, ಇದಕ್ಕೆ ಆಸ್ಟ್ರೇಲಿಯ ಆ್ಯಂಟಿಜನ್ ಎಂದು ಹೆಸರಿಸಿದ್ದಾನೆ.

ರೋಗಾಣುಗಳು ದೇಹಸೇರಿದ ೩ ರಿಂದ ೬ ತಿಂಗಳ ಅನಂತರ ಜಾಂಡೀಸ್ ಕಾಣಿಸುವ ಈ ವ್ಯಾಧಿಗೆ ತನ್ನದೇ ಆದ ಕೆಲವು ವೈಶಿಷ್ಟ್ಯಗಳಿವೆ;

೧) ಏಡ್ಸ್‌ನಂತೆ ರಕ್ತ ಮತ್ತು ಲೈಂಗಿಕ ಸಂಪರ್ಕದಿಂದ ರೋಗ ಪ್ರಸಾರವಾಗುವುದು.

೨) ರೋಗದಿಂದ ಚೇತರಿಸಿಕೊಂಡವರ ಪೈಕಿ ಶೇಕಡಾ ೧೦ ಜನರು ರೋಗವಾಹಕರಾಗುವುದು

೩) ರೋಗ ಅನುಭವಿಸಿದ ಕೆಲವರಲ್ಲಿ ಯಕೃತ್ತಿನ ಕ್ಯಾನ್ಸರ್ ಬೆಳೆಯುವುದು.

೪) ರೋಗಪೀಡಿತ ತಾಯಿಯಿಂದ ಮಗುವಿಗೆ ರೋಗ ರವಾನಿಸಲ್ಪಡುವುದು.

ರೋಗಾಣುಗಳು ಹೇರಳವಾಗಿ ರೋಗಿಯ ಜೊಲ್ಲು, ಮೂತ್ರ, ವೀರ್ಯ ಎದೆಹಾಲುಗಳಲ್ಲಿರುತ್ತವೆ. ಲೈಂಗಿಕ ಸಂಪರ್ಕದಿಂದ, ಮುತ್ತಿಡುವುದರಿಂದ ರೋಗಿ ಬಳಸಿದ ಇನ್‌ಜೆಕ್ಷನ್‌ಅನ್ನು ಸಂಸ್ಕರಿಸದೆ ಬಳಸುವುದರಿಂದ ಹಾಗೂ ಮೂಗು ಚುಚ್ಚಲು, ಅಚ್ಚೆ ಹಾಕಲು, ಕ್ಷೌರಮಾಡಲು, ಹಲ್ಲುಕೀಳಲು, ಶಸ್ತ್ರ ಚಿಕಿತ್ಸೆ ಮಾಡಲು ಉಪಯೋಗಿಸುವ ಉಪಕರಣಗಳನ್ನು ಶುಚಿಗೊಳಿಸದೆ ಬಳಸುವುದರಿಂದ ರೋಗಾಣುಗಳು ಒಬ್ಬರಿಂದ ಇನ್ನೊಬ್ಬರಿಗೆ ಹಬ್ಬುತ್ತವೆ. ಹೀಗಾಗಿ ಮಾದಕ

## ಆರೋಗ್ಯದಂಗಳ

ಔಷಧಗಳನ್ನು ಇಂಜೆಕ್ಷನ್ ಮೂಲಕ ತೆಗೆದುಕೊಳ್ಳುವ ಚಟವಿರುವವರು, ವ್ಯಭಿಚಾರಿಗಳು, ಸಲಿಂಗಕಾಮಿಗಳು, ಪದೇ ಪದೇ ರಕ್ತದಾನ ಮಾಡುವವರು ಅಥವಾ ಸ್ವೀಕರಿಸುವವರು, ಮದ್ಯ ವ್ಯಸನಿಗಳು, ಡಯಾಲಿಸಿಸ್‌ಗೆ ಒಳಗಾಗುವವರು ಈ ಕಾಯಿಲೆಗೆ ಸುಲಭವಾಗಿ ಬಲಿಯಾಗುತ್ತಾರೆ.

ರೋಗಿಯ ರಕ್ತ ಸಂಪರ್ಕಕ್ಕೆ ಬರುವ ವೈದ್ಯರು, ದಾದಿಯರು, ಶಸ್ತ್ರ ಚಿಕಿತ್ಸೆಯ ತಜ್ಞರು, ಪ್ರಯೋಗಾಲಯದವರು ಮತ್ತಿತರ ಆಸ್ಪತ್ರೆ ಸಿಬ್ಬಂದಿಗಳು ವಿಶೇಷವಾಗಿ

### ಏಡ್ಸ್ ಮತ್ತು ಹೆಪಟೈಟಿಸ್-'ಬಿ'ಗಳ ಹೋಲಿಕೆ

| | ಏಡ್ಸ್ | ಹೆಪಟೈಟಿಸ್-ಬಿ |
|---|---|---|
| ಕಾರಣ ವೈರಸ್ | ಎಚ್.ಐ.ವಿ. | ಹೆಪಟೈಟಿಸ್-ಬಿ |
| ಹರಡುವ ವಿಧಾನ | ರಕ್ತ ಮತ್ತು ಲೈಂಗಿಕ ಸಂಪರ್ಕ | ರಕ್ತ ಮತ್ತು ಲೈಂಗಿಕ ಸಂಪರ್ಕ |
| ಸೋಂಕು ತಗಲಿದವರು (ಪ್ರಪಂಚದಲ್ಲಿ) | ೧ ರಿಂದ ೧.೨ ಕೋಟಿ | ೨೦೦ ಕೋಟಿ |
| ರೋಗಿಗಳ ಸಂಖ್ಯೆ ± | ೨೦ ಲಕ್ಷ | ನಿಖರವಾಗಿ ಗೊತ್ತಾಗಿಲ್ಲ |
| ರೋಗವಾಹಕರು * | ಇಲ್ಲ | ೩೫ ಕೋಟಿ |
| ರೋಗ ತಗಲಲುಬೇಕಾದ ಕನಿಷ್ಟ ರಕ್ತ | ೦.೧ ಮಿ.ಲೀಟರ್ | ೦.೦೦೦೦೧ ಮಿ.ಲೀ. |
| ಆಕಸ್ಮಿಕವಾಗಿ ಚುಚ್ಚಿದ ಸೂಜಿಯಿಂದ ರೋಗ ತಗಲುವ ಸಾಧ್ಯತೆ | ಶೇ. ೦.೫ | ಶೇ. ೭.೩೦ |
| ಸಾವಿನ ಸಾಧ್ಯತೆ | ನೂರಕ್ಕೆ ನೂರರಷ್ಟು | ಶೇ. ೧೫–೨೦ರಷ್ಟು |
| ತಡೆಗಟ್ಟುವ ಲಸಿಕೆ | ಇಲ್ಲ | ಇದೆ |

* ರೋಗವಾಹಕರು ಸೋಂಕಿಗೊಳಗಾಗಿದ್ದರೂ ತಾವು ಮಾತ್ರ ಆರೋಗ್ಯವಾಗಿದ್ದು, ಹೆಪಟೈಟಿಸ್ ವೈರಸ್‌ಗಳನ್ನು ದೇಹದಿಂದ ಹೊರಹಾಕುತ್ತ ಇತರರಿಗೆ ರೋಗ ಹರಡುತ್ತಿರುತ್ತಾರೆ.

ಈ ರೋಗಕ್ಕೆ ತುತ್ತಾಗುತ್ತಾರೆ. ಆಕಸ್ಮಿಕವಾಗಿ ತಗಲಿದ ಸೂಜಿಯಿಂದಲೂ ರೋಗ ತಗಲಬಹುದಾಗಿದೆ. ಏಡ್ಸ್ ಮತ್ತು ಹೆಪಟೈಟಿಸ್-ಬಿ ರೋಗದ ಹೋಲಿಕೆಗಳನ್ನು ತಿಳಿದಾಗ ಹಿಪಟೈಟಿಸ್-ಬಿಯ ಸೋಂಕೇ ಹೆಚ್ಚು ವ್ಯಾಪಕವಾಗಿರುವ ರೋಗ ವೆಂದು ಅರಿವಾಗುತ್ತದೆ.

ವಾಸ್ತವವಾಗಿ ಹೆಪಟೈಟಿಸ್ ರೋಗಾಣುಗಳನ್ನು ಕೊಲ್ಲಬಲ್ಲ ಯಾವ ಔಷಧಿಯೂ ಇಲ್ಲ. ಅತಿ ಶೀಘ್ರವಾಗಿ ಚಿಕಿತ್ಸೆ ನಡೆಸಿದರೆ ಶೇಕಡಾ ೮೫ ರಷ್ಟು ರೋಗಿಗಳು ಗುಣಮುಖರಾಗುತ್ತಾರೆ. ರೋಗ ಬಂದನಂತರ ಪರಿತಪಿಸುವುದಕ್ಕಿಂತ ರೋಗ ಬಾರದಂತೆ ಕ್ರಮಗಳನ್ನು ಕೈಗೊಳ್ಳುವುದು ಒಳ್ಳೆಯದು. ಏಡ್ಸ್ ಬಾರದಂತೆ ವಹಿಸಬೇಕಾದ ಕ್ರಮಗಳಿಂದ ಹೆಪಟೈಟಿಸ್ ರೋಗದಿಂದಲೂ ರಕ್ಷಣೆ ಪಡೆಯಬಹುದಾಗಿದೆ.

ನಮ್ಮ ದೇಶದಲ್ಲಿ ಹೆಪಟೈಟಿಸ್ ವ್ಯಾಪಕವಾಗಿದ್ದು ಗಮನಾರ್ಹ ಸಂಖ್ಯೆಯಲ್ಲಿ ರೋಗವಾಹಕರು ಇರುವುದರಿಂದ ಈ ರೋಗದಿಂದ ರಕ್ಷಣೆ ಪಡೆಯಲು ಲಸಿಕೆ ತೆಗೆದುಕೊಳುವುದು ಯುಕ್ತ.

ಈ ಲಸಿಕೆ Enerix-B ಎಂಬ ಹೆಸರಿನಲ್ಲಿ ಲಭ್ಯವಿದ್ದು ಅಂದಾಜು ಬೆಲೆ ಒಂದು ಇಂಜೆಕ್ಷನ್ನಿಗೆ ೩೨೫-೦೦ ರೂ.ಗಳು. ದೊಡ್ಡವರಿಗೆ ಪ್ರತಿ ಬಾರಿ ೧ ಮಿ.ಲೀ. ೧೦ ವರ್ಷದ ಕೆಳಗಿನ ಮಕ್ಕಳಿಗೆ ಅರ್ಧ ಮಿ.ಲೀ. ಬೇಕಾಗುತ್ತದೆ.

**ಹೆಪಟೈಟಿಸ್ 'ಬಿ' ಲಸಿಕೆ**

| | |
|---|---|
| ೧ನೇ ಇಂಜೆಕ್ಷನ್ | ಆಯ್ಕೆ ಮಾಡಿದ ದಿನ |
| ೨ನೇ „ | ಒಂದು ತಿಂಗಳ ಅನಂತರ |
| ೩ನೇ „ | ಆರು ತಿಂಗಳ ಅನಂತರ |

ಒಂದು ಸರಣಿ (೩ ಇಂಜೆಕ್ಷನ್) ಲಸಿಕೆ ತೆಗೆದುಕೊಂಡ ಶೇಕಡಾ ೮೦ರಷ್ಟು ಜನರಿಗೆ ಐದು ವರ್ಷದವರೆಗೆ ರೋಗದಿಂದ ರಕ್ಷಣೆ ದೊರೆಯುತ್ತದೆ. ೫ ವರ್ಷಕ್ಕೊಮ್ಮೆ ಪುನಃ ಒಂದು ಇಂಜೆಕ್ಷನ್ ತೆಗೆದುಕೊಳ್ಳಬೇಕಾಗುತ್ತದೆ.

ಹೆಪಟೈಟಿಸ್ 'ಎ' ಮತ್ತು 'ಬಿ' ವೈರಸ್‌ಗಳಲ್ಲದೆ ಹೆಪಟೈಟಿಸ್ 'ಎ' ಅಲ್ಲದ, 'ಬಿ' ಅಲ್ಲದ, ಮತ್ತು ಡೆಲ್ಟಾ ಹೆಪಟೈಟಿಸ್ ವೈರಸ್‌ಗಳಿಂದ ಉಂಟಾಗುವ ಜಾಂಡೀಸ್ ಪ್ರಕರಣಗಳು ಇತ್ತೀಚೆಗೆ ಪಿಡುಗಿನೋಪಾದಿಯಲ್ಲಿ ಬೆಳಕಿಗೆ ಬರುತ್ತಿವೆ. ಕಾಶ್ಮೀರದಲ್ಲಿ ಕೆಲವೇ ತಿಂಗಳ ಅವಧಿಯಲ್ಲಿ ೬ ಲಕ್ಷ ಜನರಿಗೆ ಉಂಟಾದ ಜಾಂಡೀಸ್‌ಗೆ, ಅನಂತರ ಇಲ್ಲಿಯೇ ೧೯೭೯, ೧೯೮೦, ೧೯೮೧ರಲ್ಲಿ ಮತ್ತು ದಿಲ್ಲಿಯಲ್ಲಿ ೧೯೫೫ರಲ್ಲಿ, ಅಹಮ್ಮದಾಬಾದಿನಲ್ಲಿ ೧೯೭೫ರಲ್ಲಿ ಉಂಟಾದ

## ಆರೋಗ್ಯದಂಗಳ

ಜಾಂಡೀಸ್ ಪಿಡುಗಿಗೆ ಹೆಪಟೈಟಿಸ್ 'ಎ' ಅಲ್ಲದ, 'ಬಿ' ಅಲ್ಲದ ವೈರಸ್‌ಗಳೇ ಕಾರಣವಾಗಿದ್ದವು. ಈ ವೈರಸ್‌ಗಳ ಜಾಂಡೀಸ್ ಹರಡುವ ರೀತಿ, ರೋಗಲಕ್ಷಣ, ಚಿಕಿತ್ಸೆ, ನಿವಾರಣೆ ಎಲ್ಲವೂ ಹೆಪಟೈಟಿಸ್ 'ಎ' ಮತ್ತು 'ಬಿ' ವೈರಸ್‌ನಂತೆಯೇ ಇದೆ.

**ಹೆಪಟೈಟಿಸ್ 'ಎ' ಮತ್ತು 'ಬಿ' ವೈರಸ್‌ಗಳಿಂದ ಆಗುವ ಜಾಂಡೀಸ್**

| | ವೈರಸ್ | |
|---|---|---|
| | ಹೆಪಟೈಟಿಸ್ 'ಎ' | ಹೆಪಟೈಟಿಸ್ 'ಬಿ' |
| ರೋಗಾಣು ದೇಹ ಸೇರಿದ ನಂತರ ಜಾಂಡೀಸ್ ಕಾಣುವ ಸಮಯ | ೨–೬ ವಾರ | ೨–೬ ತಿಂಗಳು |
| ತಗಲುವ ವಯಸ್ಸು | ಮಕ್ಕಳಿಗೆ ಹೆಚ್ಚು | ವಯಸ್ಕರಿಗೆ ಹೆಚ್ಚು |
| ರೋಗ ಹರಡುವ ಕಾಲ | ಮಳೆಗಾಲದ ನಂತರ | ಯಾವಾಗಲೂ |
| ಹರಡುವ ರೀತಿ | ಬಾಯಿಯ ಮೂಲಕ | ರಕ್ತ ಮತ್ತು ಲೈಂಗಿಕ ಸಂಪರ್ಕದಿಂದ |
| ಜ್ವರ | ಇರುತ್ತದೆ | ಇಲ್ಲದಿರುವುದು |
| ರೋಗವಾಹಕರು | ಇಲ್ಲ | ಇರುತ್ತಾರೆ |
| ಮಲದಲ್ಲಿ ರೋಗಾಣು | ಇರುತ್ತದೆ | ಇರುವುದಿಲ್ಲ |
| ರಕ್ತದಲ್ಲಿ ಆಸ್ಟ್ರೇಲಿಯ ಆಂಟಿಜನ್ | ಇರುವುದಿಲ್ಲ | ಇರುತ್ತದೆ |

ವೈರಸ್‌ಗಳಲ್ಲದೆ ಇತರ ರೋಗಾಣುಗಳೂ ಯಕೃತ್ತನ್ನು ಹಾಳುಗೆಡವಿ ಜಾಂಡೀಸ್ ಉಂಟುಮಾಡುತ್ತವೆ. ಉದಾಹರಣೆಗೆ ಸಿಫಿಲಿಸ್, ಅಮಿಬಿಯಾಸಿಸ್ ಇತ್ಯಾದಿ.

ಮಕ್ಕಳಲ್ಲಿ ಜಂತುಹುಳುಗಳು, ಮಧ್ಯವಯಸ್ಸಿನವರಲ್ಲಿ ಪಿತ್ತರಸ ಸಂಗ್ರಹ ಮತ್ತು ಪಿತ್ತನಾಳದ ಕಲ್ಲು, ಹೆಚ್ಚು ವಯಸ್ಸಾದವರಲ್ಲಿ ಮೇದೋಜೀರಕ ಗ್ರಂಥಿಯ ಕ್ಯಾನ್ಸರ್, ಇವು ಪಿತ್ತನಾಳದಲ್ಲಿ ತಡೆಯನ್ನುಂಟುಮಾಡಿ ಜಾಂಡೀಸ್‌ಅನ್ನು ಉಂಟುಮಾಡಬಲ್ಲವು. ಶಸ್ತ್ರಚಿಕಿತ್ಸೆಯಿಂದ ಮಾತ್ರ ಈ ರೀತಿಯ ಜಾಂಡೀಸ್ ಅನ್ನು ನಿವಾರಿಸಬಹುದು. ಶಸ್ತ್ರಚಿಕಿತ್ಸೆ ಹೆಚ್ಚು ಅಪಾಯಕರವಾದುದರಿಂದ ಜಾಂಡೀಸ್ ಹತೋಟಿಗೆ ತಂದ ನಂತರವೇ ಶಸ್ತ್ರಚಿಕಿತ್ಸೆ ಮಾಡಬೇಕಾಗುತ್ತದೆ.

## ಆರೋಗ್ಯದಂಗಳ

ಜ್ವರಕ್ಕೆ ಸೇವಿಸುವ ಪ್ಯಾರಸಿಟಮಾಲ್‌ನಿಂದ ಹಿಡಿದು ಶಸ್ತ್ರಚಿಕಿತ್ಸೆಯಲ್ಲಿ ಬಳಸುವ ಅರಿವಳಿಕೆಗಳು, ಗರ್ಭನಿರೋಧಕ ಮಾತ್ರೆಗಳು, ಕೆಲ ಪ್ರತಿಜೈವಿಕಗಳವರೆಗಿನ ಅನೇಕ ಔಷಧಿಗಳು ಯಕೃತ್ತಿನ ಮೇಲೆ ದುಷ್ಪರಿಣಾಮ ಬೀರುವುದರಿಂದ ವೈದ್ಯರ ಸಲಹೆಯಿಲ್ಲದೆ ಔಷಧಿಗಳನ್ನು ಸೇವಿಸುವುದು ಅಪಾಯಕರ. ಇವೆಲ್ಲದಕ್ಕಿಂತ ಹೆಚ್ಚಾಗಿ ಯಕೃತ್ತನ್ನು ಹಾಳುಗೆಡವುವುದೇ ಆಲ್ಕೋಹಾಲ್. ಹೀಗಾಗಿ ಮದ್ಯವನ್ನು ಮರೆತುಬಿಡುವುದೇ ಒಳ್ಳೆಯದು.

### ಕಾಮಾಲೆಯಿಂದುಂಟಾಗುವ ಅಸ್ವಸ್ಥತೆ

ರಕ್ತದಲ್ಲಿ ಬಿಲುರಿಬಿನ್ ಪ್ರಮಾಣ ಏರುವುದೇ ಕಾಮಾಲೆಗೆ ಕಾರಣ. ಆದುದರಿಂದ ಯಾವುದೇ ರೀತಿಯ ತೊಂದರೆಯಿಂದ ಜಾಂಡೀಸ್ ಉಂಟಾದರೂ ಕೆಲ ಅಂಶಗಳನ್ನು ಹೊರತುಪಡಿಸಿದರೆ ಉಳಿದ ರೋಗ ಲಕ್ಷಣಗಳು ಹೆಚ್ಚು ಕಡಿಮೆ ಒಂದೇ ಆಗಿರುತ್ತವೆ.

ಜಾಂಡೀಸ್ ಪ್ರಕಟವಾಗುವುದಕ್ಕಿಂತ ಹಲವು ದಿನ ಮೊದಲೇ ರೋಗಿ ಅಸ್ವಸ್ಥನಾಗುತ್ತಾನೆ. ವೈರಸ್‌ಗಳ ಸೋಂಕಿದ್ದಲ್ಲಿ ಕೆಲವು ದಿನ ಜ್ವರ ತಲೆನೋವು ಕಾಡುತ್ತದೆ. ಆಯಾಸ, ಹಸಿವಿಲ್ಲದಿರುವುದು ಮತ್ತು ಓಕರಿಕೆ ಆರಂಭದ ಹಂತದಲ್ಲಿ ಕಾಣುವ ಪ್ರಮುಖ ಲಕ್ಷಣಗಳು. ಕೆಲವರಿಗೆ ಆಹಾರ ಕಂಡೊಡನೆ ಅಥವಾ ಆಹಾರದ ವಾಸನೆ ಬಂದರೂ ವಾಂತಿ ಬಂದಂತಾಗುತ್ತದೆ. ಧೂಮಪಾನಿಗಳಿಗೆ ಆಗ ಬೀಡಿ, ಸಿಗರೇಟುಗಳನ್ನು ಸೇದಬೇಕೆನಿಸುವುದಿಲ್ಲ, ಅಷ್ಟೇ ಏಕೆ, ಇತರರು

**ವಿವಿಧ ರೀತಿಯ ಜಾಂಡೀಸ್‌ನಲ್ಲಿ ಕಾಣುವ ರೋಗ ಲಕ್ಷಣಗಳು**

| | ಜಾಂಡೀಸ್‌ಗೆ ಕಾರಣ | | |
|---|---|---|---|
| | ರಕ್ತಕಣದ ದೋಷ | ಯಕೃತ್ತಿನ ದೋಷ | ಪಿತ್ತನಾಳದಲ್ಲಿ ಅಡಚಣೆ |
| ಮೂತ್ರದ ಬಣ್ಣ | ಬಿಳಿ | ಹಳದಿ | ತೀವ್ರ ಹಳದಿ |
| ಚರ್ಮದ ನವೆ | ಇಲ್ಲ | ಇರಬಹುದು | ಇದ್ದೇ ಇರುತ್ತದೆ |
| ಭೇದಿಯ ಬಣ್ಣ | ಮಾಮೂಲು | ಬಿಳಿಚಿದ ಬಣ್ಣ | ಮಣ್ಣಿನ ಬಣ್ಣ |
| ಚರ್ಮದ ಬಣ್ಣ | ತೆಳು ಹಳದಿ | ಹಳದಿ | ದಟ್ಟ ಹಳದಿ |
| ಯಕೃತ್ | ಮಾಮೂಲು | ಸ್ವಲ್ಪ ದೊಡ್ಡದಾಗಿರುತ್ತದೆ | ಹೆಚ್ಚು ದೊಡ್ಡದಾಗಿರುತ್ತದೆ |
| ರಕ್ತದಲ್ಲಿ ಬಿಲುರುಬಿನ್ | ಹೆಚ್ಚಿರುತ್ತದೆ | ಸ್ವಲ್ಪ ಹೆಚ್ಚಿರುತ್ತದೆ | ಬಹಳ ಹೆಚ್ಚಿರುತ್ತದೆ |

ಬಿಡುವ ಹೊಗೆ ಕೂಡ ಅವರಿಗೆ ಅಸಹನೀಯವಾಗಿಬಿಡುತ್ತದೆ. ಇದಾದ ನಂತರ ಕಣ್ಣುಗುಡ್ಡೆಯ ಬಿಳಿಭಾಗ ತಿಳಿಹಳದಿ ಬಣ್ಣದ್ದಾಗುತ್ತದೆ. ಆಗ ಮೂತ್ರದ ಬಣ್ಣವೂ ಹಳದಿ. ಕಾಮಾಲೆಯ ತೀವ್ರತೆ ಹೆಚ್ಚಿದಂತೆ ಕಣ್ಣಿನ ಮತ್ತು ಮೂತ್ರದ ಬಣ್ಣ ಹೆಚ್ಚು ಹೆಚ್ಚು ಹಳದಿಯಾಗುವುದಲ್ಲದೆ ಚರ್ಮವೂ ಹಳದಿವರ್ಣದ್ದಾಗುತ್ತದೆ. ಯಕೃತ್ತಿನ ಗಾತ್ರ ದೊಡ್ಡದಾಗುವುದರಿಂದ ಮೇಲು ಹೊಟ್ಟೆಯ ಬಲಭಾಗದಲ್ಲಿ ನೋವು ಕಾಣಿಸಿಕೊಳ್ಳುವುದು. ದೇಹದಲ್ಲಿ ನವೆ ತಲೆದೋರುತ್ತದೆ. ಹೃದಯಬಡಿತ, ನಾಡಿಮಿಡಿತಗಳು ಕಡಿಮೆಯಾಗುತ್ತವೆ. ಕಾಮಾಲೆ ಅಪಾಯದ ಮಟ್ಟ ತಲುಪಿದಾಗ ಮಂಪರು ಕವಿಯುತ್ತದೆ. ರೋಗಿ ಕೆಲವೊಮ್ಮೆ ಅರೆಪ್ರಜ್ಞಾವಸ್ಥೆಯನ್ನೂ ತಲುಪಬಹುದು. ಈ ಹಂತದಲ್ಲಿ ಸಾವು ಸಂಭವಿಸುವ ಸಾಧ್ಯತೆ ಹೆಚ್ಚು.

**ಚಿಕಿತ್ಸೆ**

ಸೂಕ್ತವಾದ ಚಿಕಿತ್ಸೆಯಿಂದ ಒಂದೆರಡು ವಾರಗಳಲ್ಲಿ ಗುಣವಾಗಬಹುದು. ಗುಣವಾಗುವ ಪ್ರಾರಂಭದ ಹಂತದಲ್ಲಿ ಕಣ್ಣಿನ ಮತ್ತು ಮೂತ್ರದ ಹಳದಿ ಬಣ್ಣದ ದಟ್ಟಣೆ ಕ್ರಮೇಣ ಕಡಿಮೆಯಾಗುತ್ತಾ ಕೆಲ ದಿನಗಳಲ್ಲಿ ಪೂರ್ಣ ಇಲ್ಲವಾಗಿ ಬಿಡುತ್ತದೆ. ಬೆಳಿಗ್ಗೆ ವಿಸರ್ಜಿಸುವ ಮೂತ್ರದಲ್ಲಿ ಹಳದಿ ಬಣ್ಣ ಸ್ವಲ್ಪವೂ ಉಳಿಯದಾದಾಗ ಜಾಂಡೀಸ್ ಪೂರ್ಣವಾಗಿ ಗುಣವಾಗಿದೆ ಎನ್ನಬಹುದು.

ರೋಗಿಯ ಪರಿಸ್ಥಿತಿಯನ್ನು ಹಾಗೂ ರೋಗಿಯ ರಕ್ತ, ಮೂತ್ರದ ಬಿಲುರಿಬಿನ್ ಪ್ರಮಾಣವನ್ನು ಸತತವಾಗಿ ಗಮನಿಸಬೇಕಾಗುತ್ತದೆಯಾದುದರಿಂದ, ಜಾಂಡೀಸ್ ಇದ್ದವರನ್ನು ಆಸ್ಪತ್ರೆಯಲ್ಲಿ ಸೇರಿಸಿ ಚಿಕಿತ್ಸೆಕೊಡಿಸುವುದು ಒಳ್ಳೆಯದು. ಆಗ ರೋಗಿಗೆ ಸಂಪೂರ್ಣ ವಿಶ್ರಾಂತಿಯ ಅಗತ್ಯವಿರುತ್ತದೆ. ಹೆಚ್ಚು ಚಟುವಟಿಕೆ ರೋಗಿಯ ಸ್ಥಿತಿಯನ್ನು ವಿಷಮಗೊಳಿಸುತ್ತದೆ. ಜಾಂಡೀಸ್ ಸಂಪೂರ್ಣವಾಗಿ ಗುಣವಾದ ಒಂದೆರಡು ವಾರಗಳ ನಂತರವೇ ದೈನಂದಿನ ಕಾರ್ಯಗಳನ್ನು ಕ್ರಮೇಣವಾಗಿ ಪ್ರಾರಂಭಿಸಬಹುದು.

ರೋಗಿಗೆ ವಾಂತಿ ಅತಿ ಹೆಚ್ಚಾಗಿದ್ದರೆ ಬಾಯಿಯ ಮೂಲಕ ಏನನ್ನೂ ಕೊಡದೆ ರಕ್ತನಾಳದ ಮೂಲಕ ಗ್ಲೂಕೋಸ್ ಕೊಡಲಾಗುತ್ತದೆ. ಜೊತೆಗೆ ಡಾಕ್ಟರರು ಬಿ-ಕಾಂಪ್ಲೆಕ್ಸ್ ಮತ್ತು 'ಕೆ' ಜೀವಸತ್ವವನ್ನೂ ಯಕೃತ್ತಿಗೆ ಪುಷ್ಟಿನೀಡುವ ಕೆಲ ಔಷಧಿಗಳನ್ನೂ ಕೊಡುತ್ತಾರೆ.

ವಾಂತಿನಿಂತ ನಂತರ ರೋಗಿ ಹಣ್ಣಿನ ರಸ, ಸಕ್ಕರೆ ನೀರು, ಶರಬತ್, ಕಬ್ಬಿನ ಹಾಲು, ಎಳನೀರು, ಮಜ್ಜಿಗೆ ಮುಂತಾದವನ್ನು ಹೇರಳವಾಗಿ ಸೇವಿಸಬೇಕು. ಪ್ರೋಟೀನ್ ಅಂಶ ಹೆಚ್ಚಾಗಿರುವ (ಬೇಳೆ, ಮಾಂಸ, ಮೊಟ್ಟೆ, ಹಾಲು)ಗಳಂತಹ ಪದಾರ್ಥಗಳನ್ನು ಸೇವಿಸುವದಕ್ಕೆ ಮಿತಿ ಇರುವುದು ಒಳ್ಳೆಯದು.

ಜಾಂಡೀಸ್ ಇರುವವರಾಗಲಿ ಜಾಂಡೀಸ್ ಕಾಯಿಲೆ ಬಂದು ವಾಸಿಯಾ

## ಆರೋಗ್ಯದಂಗಳ

ದವರಾಗಲಿ ಕೊನೆಪಕ್ಷ ಐದು ವರ್ಷಗಳವರೆಗಾದರೂ ಮದ್ಯವನ್ನು ಮುಟ್ಟಲೇ ಬಾರದು. ಉತ್ತಮ ಚಿಕಿತ್ಸೆ ಮತ್ತು ಆರೈಕೆಯಿಂದ ಬಹಳಷ್ಟು ಜಾಂಡೀಸ್ ರೋಗಿಗಳು ಒಂದೆರಡು ವಾರಗಳಲ್ಲಿ ಸಂಪೂರ್ಣವಾಗಿ ಗುಣಮುಖರಾಗುತ್ತಾರೆ. ಮದ್ಯಪಾನಿಗಳಿಗೆ, ಗರ್ಭಿಣಿಯರಿಗೆ ಬರುವ ಜಾಂಡೀಸ್ ಕೆಲವೊಮ್ಮೆ ಮಾರಕ.

### ನಿವಾರಣೆ

ಕಾಮಾಲೆ ಒಂದು ಅಪಾಯಕರವಾದ ಕಾಯಿಲೆ. ಬಹಳಷ್ಟು ಜನರಿಗೆ ಉಂಟಾಗುವ ಜಾಂಡೀಸ್‌ಗೆ ಹೆಪಟೈಟಿಸ್ ವೈರಸ್‌ಗಳ ಸೋಂಕೇ ಕಾರಣವಾಗಿ ರುತ್ತದೆ. ಈ ವೈರಸ್‌ಗಳು ಆಹಾರ, ನೀರು, ರಕ್ತಸಂಪರ್ಕ ಅಥವಾ ಲೈಂಗಿಕ ಸಂಪರ್ಕದ ಮೂಲಕ ನಮ್ಮ ದೇಹವನ್ನು ಪ್ರವೇಶಿಸಿ ಜಾಂಡೀಸ್‌ಅನ್ನು ಉಂಟುಮಾಡಬಲ್ಲವು. ಆದ್ದರಿಂದ ಇದು ಉಂಟಾಗದಂತೆ ಎಚ್ಚರಿಕೆ ವಹಿಸು ವುದರಿಂದ ನಾವು ಸುಲಭವಾಗಿ ಕಾಮಾಲೆಯನ್ನು ತಡೆಗಟ್ಟಬಹುದು;

ಆಹಾರ ಮತ್ತು ನೀರಿನ ಸ್ವಚ್ಛತೆಗೆ ಆದ್ಯತೆ ನೀಡುವುದು ಊಟಕ್ಕೆ ಮೊದಲು ಕೈಗಳನ್ನು ಚೊಕ್ಕವಾಗಿ ತೊಳೆದುಕೊಳ್ಳುವುದು.

ಅನೈತಿಕ ಲೈಂಗಿಕ ಸಂಪರ್ಕದಿಂದ ದೂರವಿರುವುದು.

ಇತರರು ಬಳಸಿದ ಸೂಜಿ, ಬ್ಲೇಡ್ ಇತ್ಯಾದಿ ಉಪಯೋಗಿಸದಿರುವುದು.

ಹೆಪಟೈಟಿಸ್-ಬಿ ವಿರುದ್ಧ ಲಸಿಕೆ ಪಡೆವುದು. ವೈದ್ಯರ ಸಲಹೆಯಿಲ್ಲದೆ ಯಾವುದೇ ಔಷಧಿಗಳನ್ನು ಸೇವಿಸದಿರುವುದು.

ಮದ್ಯಪಾನವನ್ನು ಮಾಡದಿರುವುದು.

ಬಯಲಿನಲ್ಲಿ ಮಲ ವಿಸರ್ಜಿಸುವ ಪದ್ಧತಿಯನ್ನು ಬಿಟ್ಟು ಬಿಡುವುದು.

ಈ ಕ್ರಮಗಳನ್ನು ಅನುಸರಿಸಿದರೆ ನಾವು ಜಾಂಡೀಸ್ ಭಯದಿಂದ ಸುಲಭವಾಗಿ ಪಾರಾಗಬಹುದು.

ಜಾಂಡೀಸ್ ಬಂದಾಗ, ಅರಿಶಿನಕೊಂಬನ್ನು ಕೊರಳಿಗೆ ಕಟ್ಟುವುದು, ಮಂತ್ರ ಹಾಕಿಸುವುದು, ವಾಂತಿಯಾಗುವಂತೆ ಮದ್ದು ತಿನ್ನಿಸುವುದು ಮುಂತಾದ ಕ್ರಮಗಳು ಅನಗತ್ಯವಷ್ಟೇ ಅಲ್ಲ, ಅಪಾಯಕರವೂ ಹೌದು ಎನ್ನುವುದನ್ನು ಅರಿತು ವೈದ್ಯರ ಸಲಹೆಯಂತೆ ನಡೆಯುವುದೇ ಒಳ್ಳೆಯದು. ●

Printed and Published by S.K. KATOTE on behalf of Loka Shikshana Trust at Samyukta Karnataka Press, Koppikar Road, Hubli-580 020. (Phone: 364303): No. 2, Residency Road, Bangalore-560 025. (Phone: 2213265).

**Managing Editor: K. SHAMARAO**

Registered with the Registrar of Newspaper for India under No. 3633/57.




# ಲೋಕ ಶಿಕ್ಷಣ ಟ್ರಸ್ಟ್
# ಗ್ರಂಥಮಾಲೆಯ ಪ್ರಕಟಣೆಗಳು
## ಹುಬ್ಬಳ್ಳಿ-ಬೆಂಗಳೂರು

| | ಪುಸ್ತಕದ ಹೆಸರು | ಲೇಖಕರ ಹೆಸರು | | ಬೆಲೆ |
|---|---|---|---|---|
| ೧. | ನನಗೆ ನಾನೇ ಮಾದರಿ | ಶ್ರೀ ಬಿ.ಡಿ. ಜತ್ತಿ | ರೂ. | ೪೦-೦೦ |
| ೨. | ಶ್ರೀ ರಾಮದಾಸರು ಹೇಳಿದ ಕಥೆಗಳು | ಶ್ರೀ ಬಿ.ಡಿ. ಜತ್ತಿ | ,, | ೧೫-೦೦ |
| ೩. | ಕೃಷ್ಣಾವತಾರ ಭಾಗ-೧ | ಮೂಲ: ಶ್ರೀ ಕೆ.ಎಂ. ಮುನ್ಶಿ ಅನುವಾದ: ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮ | ,, | ೨೦-೦೦ |
| ೪. | ಕೃಷ್ಣಾವತಾರ ಭಾಗ-೨ | -"- | ,, | ೨೫-೦೦ |
| ೫. | ಕೃಷ್ಣಾವತಾರ ಭಾಗ-೩ | -"- | ,, | ೨೦-೦೦ |
| ೬. | ಕೃಷ್ಣಾವತಾರ ಭಾಗ-೪ | -"- | ,, | ೨೦-೦೦ |
| ೭. | ಕೃಷ್ಣಾವತಾರ ಭಾಗ-೫ | -"- | ,, | ೨೫-೦೦ |
| ೮. | ಕೃಷ್ಣಾವತಾರ ಭಾಗ-೬ | -"- | ,, | ೨೦-೦೦ |
| ೯. | ಕೃಷ್ಣಾವತಾರ ಭಾಗ-೭ | -"- | ,, | ೨೦-೦೦ |
| ೧೦. | ಕೃಷ್ಣಾವತಾರ ಭಾಗ-೮ | -"- | ,, | ೨೫-೦೦ |
| ೧೧. | ಕೃಷ್ಣಾವತಾರ ಭಾಗ-೯, ೧೦ | -"- | ,, | ೨೦-೦೦ |
| ೧೨. | ಕರ್ನಾಟಕದಲ್ಲಿ ಕ್ವಿಟ್ ಇಂಡಿಯಾ ಚಳವಳಿ | ಡಾ. ಸೂರ್ಯನಾಥ ಕಾಮತ | ,, | ೪೫-೦೦ |
| ೧೩. | ವಂದೇಮಾತರಂದಿಂದ ಜನಗಣಮನದವರೆಗೆ | ಶ್ರೀ ವಿ.ಎಚ್. ದೇಸಾಯಿ | ,, | ೫೦-೦೦ |
| ೧೪. | ಗೀತಾ ನಿತ್ಯಪಾಠ | ಶ್ರೀ ರಂಗನಾಥ ದಿವಾಕರ | ,, | ೩-೦೦ |
| ೧೫. | ಶ್ರೀ ಕೃಷ್ಣಾವತಾರದ ಕೊನೆಯ ಗಳಿಗೆಗಳು | ಪ್ರೊ. ಕೆ.ಎಸ್. ನಾರಾಯಣಾಚಾರ್ಯ | ,, | ೨೦-೦೦ |
| ೧೬. | ಗಾಂಧೀಜಿ ನಾನು ಕಂಡಂತೆ | ಶ್ರೀ ರಂಗನಾಥ ದಿವಾಕರ | ,, | ೧೦-೦೦ |
| ೧೭. | ನೆನಪಿನಂಗಳದಲ್ಲಿ | ಶ್ರೀ ಜಿ.ಎಂ. ಪಾಟೀಲ | ,, | ೨೦-೦೦ |

ವಿ.ಸೂ. ಪುಸ್ತಕ ಮಾರಾಟಗಾರರಿಗೆ ಕನಿಷ್ಠ ೧೦ ಪ್ರತಿಗಳನ್ನು ತರಿಸಿದರೆ ಶೇ. ೨೫ರಷ್ಟು ಕಮೀಷನ್ ಕೊಡಲಾಗುವದು. ಪುಸ್ತಕಗಳು ಬೇಕಾದಲ್ಲಿ ತಕ್ಷಣ ಕೆಳಕಂಡ ವಿಳಾಸಕ್ಕೆ ಎಲ್ಲ ವಿವರಗಳೊಂದಿಗೆ ಡಿ.ಡಿ. ಅಥವಾ ಮನಿಯಾರ್ಡರ್ ಮೂಲಕ ಬರೆದು ತಿಳಿಸುವುದು. ಅಂಚೆ ವೆಚ್ಚ ಪ್ರತ್ಯೇಕ. ವಿ.ಪಿ.ಪಿ. ಸೌಲಭ್ಯ ಇರುವುದಿಲ್ಲ.

ಪ್ರಸಾರಾಂಗ ವ್ಯವಸ್ಥಾಪಕರು
ಸಂಯುಕ್ತ ಕರ್ನಾಟಕ, ಕೊಪ್ಪೀಕರ ರಸ್ತೆ, ಹುಬ್ಬಳ್ಳಿ-೨೦.
ಸಂಯುಕ್ತ ಕರ್ನಾಟಕ, ನಂ. ೨, ರೆಸಿಡೆನ್ಸಿ ರಸ್ತೆ, ಬೆಂಗಳೂರು-೨೫.

Cover Printed at: Bharat Photo Offset Works, Dharwad. Ph: 40545

KASTURI, Kannada Digest Reg No. KRNG-43,
Licence No. L2120 - WPP No. 33 Price - Rs. 6-00




ನುವಾರ, ಸೋಮವಾರ
ಹುಟ್ಟಿದ ಹಬ್ಬ, ಯುಗಾದಿ
ಮದುವೆ, ದೀಪಾವಳಿ.....



ಡ್ರೆಸ್ ಮೆಟಿರಿಯಲ್, ರುಬಿಯಾ
ಸೂಟಿಂಗ್ಸ್, ಶರ್ಟಿಂಗ್ಸ್
ದೋತರಗಳು, ಯುನಿಫಾರಂಗಳು
ಕಾಟನ್, ಪಾಲಿಯೆಸ್ಟರ್‌ಗಳಲ್ಲಿ
ನಿಮ್ಮ ಪರಿವಾರಕ್ಕಾಗಿ,

# ದಾವಣಗೆರೆ

ಫ್ಯಾಶನ್ನಿನ ಪ್ರತಿರೂಪ




ದಾವಣಗೆರೆ ಕಾಟನ್ ಮಿಲ್ಸ್
ಪೊ.ಬಾ. ನಂ. 201, ದಾವಣಗೆರೆ – 577 002.
(A division of Morarjee Goculdas Spinning & Weaving Company Ltd., Bombay)

MAP 33 95